ಲಲಿತ ಸಾಹಿತ್ಯಮಾಲೆಯ ೩ನೆಯ ವರುಷದ ೪-೫ನೆಯ ಕುಡಿ

ಪ್ರೇಮಚಂದರ ಅಮರ ಕೃತಿಯಾದ

# ನಿರ್ಮಲಾ

[ ಜೀವನದ ಒಂದು ಕರುಣಕಥೆ ]

ಶ್ರೀ

ಅನುವಾದಿಕೆಯರು :
ಶ್ರೀಮತಿ ಎಂ. ಎ. ಕ್ರುಷ್ಣಮ್ಮ



ಲಲಿತ ಸಾಹಿತ್ಯಮಾಲೆ, ಧಾರವಾಡ

ಆಗಸ್ಟ
೧೯೪೬

ಬೆಲೆ:
೨—೦—೦

ಸಂಪಾದಕರು

**ಗೋವಿಂದ ವೆಂಕಟೇಶ ಚುಳಕಿ**

ಮಾರಾಟಗಾರರು :

ಮನೋಹರ ಗ್ರಂಥ ಭಾಂಡಾರ, ಧಾರವಾಡ

ಕನ್ನಡ ಪುಸ್ತಕಾಲಯ, ಬೆಳಗಾಂವಿ

ಲಲಿತ ಸಾಹಿತ್ಯಮಾಲೆಯ ೩ನೇ ವರುಷದ ೧ನೆಯ ಕುಡಿ

# ಮಾದಯ್ಯನ ಕೊನೆಯ ದಿನಗಳು

ರಾಜಕೀಯ ಜೀವನಕ್ಕೆ ಸಹಜವಾಗಿ ಎಳೆಯಲ್ಪಟ್ಟ
ಸಾಮಾನ್ಯ ಜೀವಿಯೊಬ್ಬನ ಸ್ವಾತಂತ್ರ್ಯಪ್ರಿಯ-
ತೆಯ ಎದೆಗುಂದದ ಹೋರಾಟದ ಜೀವನಕಥೆ.

ಶ್ರೀ. 'ಭಾರತೀಸುತ', ಕೊಡಗು

ಪ್ರಕಾಶಕರು :
ದ. ಬಾ. ಕುಲಕರ್ಣಿ
ಮ. ಗ್ರ. ಭಾಂಡಾರ,
ಧಾರವಾಡ

ಮುದ್ರಕರು :
ಎಸ್. ಎಲ್. ಜೋ
ಮೋಹನ ಪ್ರೆಸ್,
ಧಾರವಾಡ

## ಸಂಪಾದಕರ ಅರಿಕೆ

ದಿವಂಗತ ಪ್ರೇಮಚಂದರ ಅಮರ ಕೃತಿಯಾದ "ನಿರ್ಮಲಾ" ಕಾದಂಬರಿಯು ನಮ್ಮ ಮಾಲೆಯ ಈ ವರುಷದ ೪-೫ನೆಯ ಕುಡಿಯು. ಈ ಕಾದಂಬರಿಯಲ್ಲಿ ವೃದ್ಧ–ವಿವಾಹದೊಂದು ದುರಂತ ಚಿತ್ರವಿದೆ. ಈ ಕಾರಣದಿಂದಲೇ ಸಂತತಿ, ಸಂಪತ್ತುಗಳಿಂದ ತುಂಬಿದ ಮನೆತನವು ಹಾಳಾಗಿ ಹೋಗುತ್ತದೆ. ಇಲ್ಲಿ ಮಲತಾಯಿಯ ಕುಶಲ ಮನೋವೈಜ್ಞಾನಿಕ ಒಂದು ಅಧ್ಯಯನವೇ ಇದೆ. ಈ ಕಾದಂಬರಿಯು ತನ್ನ ಮರ್ಯಾದಿತ ಕ್ಷೇತ್ರದಲ್ಲಿ ಕಲಾಪೂರ್ಣ ಕೃತಿ ಇರುವುದಲ್ಲದೆ, ಮೋಸದಿಂದಾಗುವ ಸಮಾಜದ ಕೆಟ್ಟ ರೀತಿಗಳ ದುಷ್ಪರಿಣಾಮಗಳ ಮಾರ್ಮಿಕವಾದ ವಿವೇಚನೆಯನ್ನೊಳಗೊಂಡಿರುವುದು. ಇಂಥ ಮನೋವೇಧಕವಾದ ಈ ಉಪನ್ಯಾಸವನ್ನು ನಮ್ಮ ವಾಚಕರಿಗೆ ಒದಗಿಸಿ ಕೊಡಲು ನಮಗೆ ಹರುಷವೆನಿಸುತ್ತದೆ.

ಮಾತ್ರ ಅದೇ ಆಗಿದ್ದರೂ ನಿರ್ಮಲೆಯು ಗಂಭೀರೆ, ಏಕಾಂತಪ್ರಿಯೆ, ಲಜ್ಜಾ ಶೀಲೆಯಾಗಿದ್ದಳು. ಈಗ ಕೆಲವು ತಿಂಗಳಿಂದ ಬಾಬೂ ಉದಯಭಾನುಲಾಲರು ನಿರ್ಮಲೆಯ ವಿವಾಹಕ್ಕಾಗಿ ಅನೇಕ ಕಡೆ ಮಾತು-ಕತೆ ನಡೆಸುತ್ತಿದ್ದರು; ಇಂದು ಅವರ ಶ್ರಮವು ಸಾರ್ಥಕವಾಗಿ, ಬಾಬೂ ಭಾಲಚಂದ್ರಸಿಂಹರ ಜ್ಯೇಷ್ಠಪುತ್ರ ಭುವನಮೋಹನಸಿಂಹನೊಡನೆ ನಿರ್ಮಲೆಯ ಮದುವೆಯು ನಿಶ್ಚಯವಾಗಿತ್ತು. ವರನ ತಂದೆಯು ವರದಕ್ಷಿಣೆಯ ವಿಚಾರದಲ್ಲಿ ಅಷ್ಟೇನೂ ಆತುರರಾಗಿರಲಿಲ್ಲ. ಕೊಟ್ಟರೆ ಕೊಡಬಹುದು, ಆಗದಿದ್ದರೆ ಬಿಡಬಹುದೆಂಬ ವಿಷಯವನ್ನೇನೋ ತಿಳಿಸಿಬಿಟ್ಟಿದ್ದರು. ಆದರೆ ಬೀಗರ ಮರ್ಯಾದೆ, ಆದರ–ಸತ್ಕಾರಗಳು ಮಾತ್ರ ಬಹಳ ಉತ್ತಮ ರೀತಿಯಿಂದ ನಡೆಯಬೇಕೆಂಬುದು ಅವರ ಅಪೇಕ್ಷೆಯಾಗಿದ್ದಿತು. ಬಾಬೂ ಉದಯಭಾನುಲಾಲರು ಭಾರಿಯ ವಕೀಲರೇನೋ ಆದರೂ, ಹಣ ಕೂಡಿಡುವುದನ್ನು ಮಾತ್ರ ಅರಿತಿರಲಿಲ್ಲ. ವರದಕ್ಷಿಣೆಯು ಅವರಿಗೊಂದು ಕಠಿಣ ಸಮಸ್ಯೆಯೇ ಆಗಿತ್ತು. ಆದರೆ ಈಗ ವರನ ತಂದೆಯೇ ತನಗೆ ವರದಕ್ಷಿಣೆಯ ಆತುರ ಅಷ್ಟಿಲ್ಲವೆಂದು ತಿಳಿಸಿದ್ದರಿಂದ ಉದಯಭಾನುಲಾಲರಿಗೆ ಭಾರಿಯ ಭಾಗ್ಯ ದೊರೆತಂತಾಯಿತು. ಎಷ್ಟೆಷ್ಟು ಮುಂದಿಯ ಮುಂದೆ ಕೈನೀಡಬೇಕಾಗುವುದೋ ಎಂಬ ಹೆದರಿಕೆಯಿಂದ ಅವರು ಈ ಒಂದೆಯೇ ಹಣಕ್ಕಾಗಿ ಒಂದೆರಡು ಕಡೆ ಏರ್ಪಾಡು ಮಾಡಿಟ್ಟಿದ್ದರು. ಎಷ್ಟೇ ಮಿತದಿಂದ ಖರ್ಚುಮಾಡಿದರೂ ಇಪ್ಪತ್ತು ಸಾವಿರಕ್ಕೆ ಕಡಿಮೆಯಾಗಲಿಕ್ಕಿಲ್ಲವೆಂದು ಅವರ ಅಂದಾಜಾಗಿತ್ತು. ಆದರೆ ವರದಕ್ಷಿಣೆಯನ್ನು ಕೊಡಬೇಕಾಗಿಲ್ಲವೆಂಬ ಆಶ್ವಾಸನೆಯಿಂದ ಅವರ ಮನಸಿಗೆ ಅಪಾರ ಆನಂದವಾಯಿತು.

ಮದುವೆಯ ಈ ಪ್ರಸ್ತಾಪವೇ ಅಜ್ಞಾನ ಬಾಲಕಿಯಾದ ನಿರ್ಮಲೆಗೆ ಒಂದು ವಿಧವಾದ ಸಂಕೋಚ–ನಾಚಿಕೆಗಳನ್ನುಂಟುಮಾಡಿತ್ತು. ಒಂದು ವಿಚಿತ್ರ ರೀತಿಯ ಸಂದೇಹವು ಅವಳ ಹೃದಯವನ್ನಾವರಿಸಿತ್ತು. 'ಮುಂದೇನಾಗುವದೋ' ಎಂಬ ಒಂದು ಅಜ್ಞಾತ ಭೀತಿಯು ಅವಳ ರೋಮ–ರೋಮದಲ್ಲೂ ಸಂಚರಿಸುತ್ತಿತ್ತು. ಯುವತಿಯರ ನೇತ್ರಗಳಲ್ಲಿ ಓರೆಗಣ್ಣೋಟದ ರೂಪದಲ್ಲೂ, ಅಧರಗಳ ಮೇಲೆ ಮಧುರ ಮಂದಹಾಸದ ರೂಪದಲ್ಲೂ, ಅಂಗದಲ್ಲಿ ಆಲಸ್ಯದ ರೂಪದಲ್ಲೂ ಪ್ರಕಟವಾಗುವ ಆ ಉತ್ಸಾಹವು ಅವಳಿಗಿರಲಿಲ್ಲ;

ಆಶೆ–ಅಭಿಲಾಷೆಗಳೂ ಇರಲಿಲ್ಲ. ಅವಳಲ್ಲಿ ಕಾಣುತ್ತಿದ್ದುದು ಕೇವಲ ಚಿಂತೆ, ಸಂಶಯ ಮತ್ತು ಭೀಕರ ಕಲ್ಪನೆಗಳು ! ಯೌವನದ ಪೂರ್ಣ ಪ್ರಕಾಶವಿನ್ನೂ ಅವಳಲ್ಲಾಗಿರಲಿಲ್ಲ.

ಕೃಷ್ಣಳಿನ್ನೂ ಚಿಕ್ಕವಳು. ಅವಳಿಗೆ ಮದುವೆಯ ವಿಷಯದಲ್ಲಿ ಕೆಲ–ಕೆಲವು ವಿಚಾರಗಳು ಮಾತ್ರ ತಿಳಿದಿದ್ದುವು. ಅಕ್ಕನಿಗೆ ಅಂದವಾದ ಆಭರಣಗಳನ್ನು ತೊಡಿಸುವರು, ಮನೆಯಲ್ಲಿ ಮಂಗಳವಾದ್ಯಗಳು ಮೊಳಗುವುವು, ಅತಿಥಿ-ಅಭ್ಯಾಗತರು ಮನೆತುಂಬ ತುಂಬುವರು, ನಾಟ್ಯ–ನರ್ತನಗಳಾಗುವುವು ಎಂಬೀ ವಿಷಯಗಳಿಂದ ಅವಳು ಅತ್ಯಂತ ಪ್ರಸನ್ನಳಾಗಿದ್ದಳು. ಅಲ್ಲದೆ, ಅಕ್ಕನು ಅತ್ತೆಯ ಮನೆಗೆ ಹೋಗುವಾಗ, ಅಗಲಿಕೆಯ ದುಃಖದಿಂದ ಮನೆಯವರೆಲ್ಲರನ್ನೂ ಆಲಿಂಗಿಸಿಕೊಂಡು ಅಳುವಳು; ಇನ್ನು ಮುಂದೆ ತಾನೊಬ್ಬಳೇ ಇರಬೇಕಾಗುವುದು–ಎಂಬ ಯೋಚನೆಯಿಂದ ಅವಳಿಗೆ ಅಪಾರ ದುಃಖವೂ ಉಂಟಾಗಿತ್ತು. ಆದರೆ ಹೀಗೆಲ್ಲ ಏಕೆ ನಡೆಯುತ್ತಿದೆ, ತನ್ನ ತಂದೆ–ತಾಯಿಗಳು ಅಕ್ಕನನ್ನು ಬೇರೆಯ ಮನೆಗೆ ಕಳುಹಿಸಲು ಏಕಿಷ್ಟು ಉತ್ಸುಕರಾಗಿರುವರು–ಎಂಬೀ ವಿಷಯಗಳನ್ನು ಅವಳರಿತಿರಲಿಲ್ಲ. ಅಕ್ಕನು ಯಾರ ಸಂಗಡಲೂ ಜಗಳವಾಡಲಿಲ್ಲ, ಯಾರನ್ನೂ ಬೈಯಲಿಲ್ಲ; ಅಷ್ಟಾದರೂ ಅವಳನ್ನೇಕೆ ಬೇರೆಯ ಮನೆಗೆ ಕಳುಹಿಸಿಬಿಡುವರು ? ಒಂದಲ್ಲ ಒಂದು ದಿನ ತನ್ನನ್ನೂ ಇದೇ ರೀತಿ ಬೇರೆಯ ಮನೆಗೆ ಕಳುಹಿಸಿಬಿಡುವರೇ ? ಅಂದು ನಾನೂ ಅಕ್ಕನಂತೆಯೇ ಮನೆಯವರೆಲ್ಲರನ್ನೂ ಆಲಿಂಗಿಸಿಕೊಂಡು ಅಳುವೆನು, ಅಷ್ಟಾದರೂ ನನ್ನಲ್ಲಿ ಯಾರಿಗೂ ಕನಿಕರ ಉಂಟಾಗುವುದಿಲ್ಲ–ಈ ಮೊದಲಾದ ಕಲ್ಪನೆಗಳಿಂದ ಅವಳಿಗೊಂದು ಬಗೆಯ ಭಯವೂ ಉಂಟಾಗಿತ್ತು.

ಸಂಧ್ಯಾ ಸಮಯ. ನಿರ್ಮಲೆಯು ಒಬ್ಬಳೇ ನಿಶ್ಶಬ್ದವಾಗಿ ಮಹಡಿಯ ಮೇಲೆ ಕುಳಿತು, ತೃಷಿತ ನೇತ್ರಗಳಿಂದ ಆಗಸದೆಡೆಗೆ ದಿಟ್ಟಿಸುತ್ತಿದ್ದಳು. ಹಕ್ಕಿಗಳಂತೆ ನನಗೂ ರೆಕ್ಕೆಯಿದ್ದಿದ್ದರೆ, ಮನ ಬಂದಲ್ಲಿಗೆ ಹಾರಿಹೋಗಿ ಈ ಎಲ್ಲ ದುಃಖಗಳಿಂದಲೂ ಪಾರಾಗುತ್ತಿದ್ದೆ–ಎಂದು ಅವಳಿಗೆನಿಸುತ್ತಿತ್ತು. ಇತ್ತೀಚೆಗೆ ಸಾಯಂಕಾಲದ ಸಮಯದಲ್ಲಿ ಅಕ್ಕ–ತಂಗಿಯರಿಬ್ಬರೂ ರಿಕ್ಷಾ ಗಾಡಿಯಲ್ಲಿ ಕುಳಿತು ತಿರುಗಾಡಲು ಹೋಗುತ್ತಿದ್ದರು; ಅಥವಾ ಒಮ್ಮೊಮ್ಮೆ ತೋಟದಲ್ಲೇ ತಿರುಗಾಡುತ್ತಿದ್ದರು. ಆದ್ದರಿಂದ ಕೃಷ್ಣಳು ಅಕ್ಕನನ್ನು ಎಲ್ಲಾ ಕಡೆಯೂ

ಹುಡುಕಿದಳು. ಎಲ್ಲೂ ಕಾಣದೆ, ಕೊನೆಗೆ ಮುಹಡಿಗೆ ಬಂದಳು. ಅಕ್ಕನನ್ನು ನೋಡಿ ನಗುತ್ತ ನುಡಿದಳು—ಇಲ್ಲಿ ಬಂದು ಬಚ್ಚಿಟ್ಟುಕೊಂಡಿರುವೆಯಾ? ನಾನು ಅಲ್ಲೆಲ್ಲಾ ನಿನ್ನನ್ನು ಹುಡುಕಿ-ಹುಡುಕಿ ಸಾಕಾದೆ! ನಡೆ, ರಿಕ್ಷಾ ತಯಾರಾಗಿದೆ, ತಿರುಗಾಡಲು ಹೋಗೋಣ!

ನಿರ್ಮಲೆಯು ಉದಾಸೀನ ಭಾವದಿಂದ ನುಡಿದಳು—ನೀನು ಹೋಗು. ಈ ದಿನ ನಾನು ಬರುವುದಿಲ್ಲ.

ಕೃಷ್ಣಾ—ಉಂ ಹುಂ! ಅಕ್ಕ, ಹಾಗೆನ್ನಬೇಡ! ಈ ದಿನ ಖಂಡಿತ ವಾಗಿಯೂ ಬಾ! ನೋಡು, ಸಂಧ್ಯಾಸಮಯದ ತಂಗಾಳಿಯು ಹೇಗೆ ಸುಯ್ಯನೆ ಸುಳಿಯುತ್ತಿದೆ?

ನಿರ್ಮಲಾ—ಇಲ್ಲ ನನಗೇಕೋ ಇಂದು ಮನಸಿಲ್ಲ. ನೀನು ಹೋಗಿ ಬಾ!

ಕೃಷ್ಣಳ ಕಣ್ಣುಗಳು ಕಂಬನಿದುಂಬಿದವು. ಕಂಪಿತ ಸ್ವರದಿಂದ ನುಡಿದಳು—ಈ ದಿನ ನೀನೇಕೆ ಬರುವುದಿಲ್ಲ. ನನ್ನನ್ನು ಮಾತ್ರ ಹೋಗೆಂದು ಏಕೆ ಹೇಳುತ್ತಿರುವೆ? ಅಲ್ಲಿ-ಇಲ್ಲಿ ಏಕೆ ಮರೆಮಾಚುತ್ತ ಅವಿತುಕೊಳ್ಳುತ್ತಿರುವೆ? ಒಬ್ಬಳೇ ಇರುವುದರಿಂದ ನನ್ನ ಮನಸಿಗೇಕೋ ಬಹಳ ಬೇಸರ ಮತ್ತು ಗಾಬರಿಯೆನಿಸುತ್ತಿದೆ. ನೀನು ಬರದಿದ್ದರೆ ನಾನೂ ಹೋಗುವುದಿಲ್ಲ. ಇಲ್ಲೇ ನಿನ್ನ ಸಂಗಡ ಕುಳಿತುಕೊಂಡಿರುವೆನು.

ನಿರ್ಮಲಾ—ನಾನು ಹೊರಟುಹೋದರೆ ಆಗೇನು ಮಾಡುವೆ? ಯಾರ ಸಂಗಡ ಆಟವಾಡುವೆ? ಯಾರ ಕೂಡ ತಿರುಗಾಡಲು ಹೋಗುವೆ, ಹೇಳು!

ಕೃಷ್ಣಾ—ನಾನೂ ನಿನ್ನ ಸಂಗಡಲೇ ಬಂದುಬಿಡುವೆನು. ಒಬ್ಬಳೇ ಇಲ್ಲಿರಲು ನನ್ನಿಂದಾಗುವುದಿಲ್ಲ.

ನಿರ್ಮಲೆಯು ನಸುನಕ್ಕು ನುಡಿದಳು—ಅಮ್ಮನು ನಿನ್ನನ್ನು ಹೋಗಗೊಡದಿದ್ದರೆ?

ಕೃಷ್ಣಾ—ನಾನು ನಿನ್ನನ್ನೂ ಹೋಗಗೊಡುವುದಿಲ್ಲ! ಅಕ್ಕ! ನೀನು ಅಮ್ಮನೊಡನೆ ನಾನು ಹೋಗುವುದಿಲ್ಲವೆಂದು ಏಕೆ ಹೇಳಬಾರದು?

ನಿರ್ಮಲಾ—ಹೇಳುತ್ತಲೇ ಇರುವೆನು; ಆದರೆ ಕೇಳುವವರಾರು?

ಕೃಷ್ಣಾ—ಆದರೆ ಇದು ನಿನ್ನ ಮನೆಯಲ್ಲವೇ?

ನಿರ್ಮಲಾ—ಅಲ್ಲ. ಹಾಗಿದ್ದಿದ್ದರೆ ನನ್ನನ್ನು ಬಲಾತ್ಕಾರವಾಗೇಕೆ ಬೇರೆಯ ಮನೆಗೆ ಕಳುಹಿಸುತ್ತಿದ್ದರು?

ಕೃಷ್ಣಾ—ಹಾಗಾದರೆ ನನ್ನನ್ನೂ ಇದೇ ರೀತಿ ಒಂದು ದಿನ ಬೇರೆಯ ಮನೆಗೆ ಕಳುಹಿಸಿಬಿಡುವರೇ ?

ನಿರ್ಮಲಾ—ಅಲ್ಲದೆ ಮತ್ತೇನು ? ನೀನು ಇಲ್ಲೇ ಕುಳಿತಿರುವೆಯೆಂದು ತಿಳಿದೆಯಾ ? ನಾವು ಹೆಣ್ಣುಮಕ್ಕಳು. ನಮಗೆಲ್ಲೂ ಮನೆಯಿಲ್ಲ.

ಕೃಷ್ಣಾ—ಹೀಗೆಯೇ ಚಂದ್ರನನ್ನೂ ಕಳುಹಿಸಿಬಿಡುವರೇ ?

ನಿರ್ಮಲಾ—ಚಂದ್ರನು ಗಂಡುಹುಡುಗ. ಅವನನ್ನೇಕೆ ಕಳುಹುವರು ?

ಕೃಷ್ಣಾ—ಹಾಗಾದರೆ ಹೆಣ್ಣುಮಕ್ಕಳು ಬಹಳ ಕೆಟ್ಟವರೇ ?

ನಿರ್ಮಲಾ—ಕೆಟ್ಟವರಲ್ಲದಿದ್ದರೆ ಹೀಗೇಕೆ ಮನೆಯಿಂದ ಹೊರದೂಡುತ್ತಿದ್ದರು ?

ಕೃಷ್ಣಾ—ಚಂದ್ರನು ಅಷ್ಟು ದುಷ್ಟ; ಅವನನ್ನು ಮಾತ್ರ ಮನೆಯಿಂದ ಕಳುಹಿಸುವುದಿಲ್ಲಾ ? ನಾನೂ-ನೀನೂ ಯಾವ ದುಷ್ಟತನವನ್ನೂ ಮಾಡಿಲ್ಲ. ವಲ್ಲ ?

ಆ ಹೊತ್ತಿಗೆ ಸರಿಯಾಗಿ ಚಂದ್ರನು ಧಮಧಮನೆ ಶಬ್ದ ಮಾಡುತ್ತ ಮಹಡಿಯ ಮೇಲೆ ಬಂದನು. ಮತ್ತು ನಿರ್ಮಲೆಯನ್ನು ನೋಡಿ ನುಡಿದನು—ಓಹೋ ! ಇಲ್ಲಿ ಬಂದು ಕುಳಿತಿರುವೆಯಾ ? ಇನ್ನೇನು, ನಮ್ಮ ಮನೆಯಲ್ಲಿ ಮಂಗಳವಾದ್ಯಗಳು ಮೊಳಗುವುವು. ಅಕ್ಕನು ಮದುವೆಯ ಹೆಣ್ಣಾಗುವಳು. ಮನೆಗೆ ನೆಂಟರಿಷ್ಟರು ಬರುವರು. ಓ....ಹೋ....ಹೋ....ಹೋ !

ಚಂದ್ರನ ಸರಿಯಾದ ಹೆಸರು ಚಂದ್ರಭಾನುಸಿಂಹನೆಂದು. ಅವನು ನಿರ್ಮಲೆಗಿಂತ ಮೂರು ವರ್ಷ ಚಿಕ್ಕವನೂ, ಕೃಷ್ಣಳಿಗಿಂತ ಎರಡು ವರ್ಷ ದೊಡ್ಡವನೂ ಆಗಿದ್ದನು.

ನಿರ್ಮಲಾ—ಚಂದ್ರು ! ನನ್ನನ್ನು ರೇಗಿಸಿದೆಯಾದರೆ ಈಗಲೇ ಹೋಗಿ ಅಮ್ಮನಿಗೆ ಹೇಳುವೆನು.

ಚಂದ್ರ—ನೀನು ರೇಗಬೇಕೇಕೆ ? ನೀನೂ ವಾದ್ಯಗಳನ್ನು ಕೇಳು. ನಾಟ್ಯ-ನರ್ತನಗಳನ್ನು ನೋಡು. ಓ....ಹೋ....ಹೋ....ಹೋ ! ಅಕ್ಕನು ಮದುವೆಯ ಹೆಣ್ಣಾಗುವಳು. ಕೃಷ್ಣ, ನೀನೂ ವಾದ್ಯಗಳನ್ನು ಕೇಳುವೆಯಲ್ಲವೇ ? ಎಂತಹ ವಾದ್ಯ ಗೊತ್ತೇ ? ಇದುವರೆವಿಗೆ ನೀನು ಅಂತಹ ವಾದ್ಯಗಳನ್ನೇ ಕೇಳಿಲ್ಲ.

ಕೃಷ್ಣಾ—ಆದರೆ ಆ ವಾದ್ಯ ಬ್ಯಾಂಡಿಗಿಂತ ಚನ್ನಾಗಿರುವುದೇ ?

ಚಂದ್ರ—ಹೌದು. ಬ್ಯಾಂಡಿಗಿಂತ ಎಷ್ಟೋ ಚನ್ನಾಗಿರುವುದು—ನೂರು ಪಾಲು, ಸಹಸ್ರ ಪಾಲು ಚನ್ನಾಗಿರುವುದು ! ನೀನೇನು ಬಲ್ಲೆ ? ಎಂದೋ ಯಾವುದೋ ಬ್ಯಾಂಡನ್ನು ಕೇಳಿದ ಮಾತ್ರಕ್ಕೆ ಅದಕ್ಕಿಂತ ಉತ್ತಮ ವಾದ್ಯವೇ ಇಲ್ಲವೆಂದು ತಿಳಿದೆಯಾ ? ವಾದ್ಯ ಮಾಡುವವರ ಆ ಕೆಂಪು ಅಂಗಿ, ಕರಿಯ ಟೋಪಿ, ಅಂಗಿಯ ಮೇಲೆ ಚಿನ್ನ—ಬೆಳ್ಳಿಯ ಮೆಡಲುಗಳು ಇವೆಲ್ಲಾ ಎಷ್ಟು ಸುಂದರವಾಗಿರುವುವು, ಗೊತ್ತೇ ? ವಿಧ—ವಿಧವಾದ ಮತ್ತು ಬಣ್ಣ—ಬಣ್ಣದ ಬಾಣ ಬಿರುಸುಗಳನ್ನು ಹತ್ತಿಸುವರು. ಇನ್ನೂ ಏನೇನೋ ತಮಾಷೆಗಳೆಲ್ಲಾ ನಡೆಯುವುದು ! ಎಷ್ಟು ಆನಂದವಾಗಿರುವುದು, ಬಲ್ಲೆಯಾ ?

ಕೃಷ್ಣಾ—ಇನ್ನೂ ಏನೇನಾಗುವುದು ಹೇಳು, ಚಂದ್ರಣ್ಣ !

ಚಂದ್ರ—ನನ್ನ ಸಂಗಡ ತಿರುಗಾಡಲು ಬಾ ! ದಾರಿಯಲ್ಲಿ ಎಲ್ಲ ವಿಷಯ ಗಳನ್ನೂ ವಿವರವಾಗಿ ತಿಳಿಸುವೆನು. ನೋಡಿದರೆ ನಿನಗೆ ನೇತ್ರಾನಂದವುಂಟಾ ಗುವುದು, ಅಂತಹ ಎಷ್ಟೆಷ್ಟೋ ತಮಾಷೆಗಳು ನಡೆಯುವುವು. ಎಲ್ಲವನ್ನೂ ಹೇಳುವೆನು, ಬಾ !

ಕೃಷ್ಣಾ—ಹಾಗಾದರೆ ನಡೆ ಹೋಗೋಣ ! ಎಲ್ಲವನ್ನೂ ಹೇಳದಿದ್ದೆ ಯಾದರೆ ಸುಮ್ಮನಿರುವುದಿಲ್ಲ, ಹೊಡೆಯುವೆನು !

ಕೃಷ್ಣಳೂ ಚಂದ್ರನೂ ಹೊರಟು ಹೋದರು; ನಿರ್ಮಲೆಯೊಬ್ಬಳೇ ಮಹಡಿಯ ಮೇಲೆ ಮೌನದಿಂದ ಕುಳಿತಿದ್ದಳು. ಕೃಷ್ಣಳು ಹೊರಟು ಹೋದದ್ದರಿಂದ ಅವಳ ಮನಸಿಗೆ ಬಹಳ ವ್ಯಸನವಾಯಿತು. ತನಗೆ ಪ್ರಾಣ ಕ್ಕಿಂತಲೂ ಪ್ರಿಯಳೆಂದು ಭಾವಿಸಿದ್ದ ಕೃಷ್ಣಳು ಸಹ ಇಂದು ಇಷ್ಟು ನಿಷ್ಠುರ ಳಾದಳೇ ? ತನ್ನನ್ನು ಒಂಟಿಯಾಗಿ ಬಿಟ್ಟು ಹೋದಳೇ ? ಎಂದು ಏನೇನೋ ಯೋಚಿಸತೊಡಗಿದಳು. ನೊಂದ ಹೃದಯಕ್ಕೆ ಕೇವಲ ಒಂದು ಸಣ್ಣ ಆಘಾತ ವಾದರೂ ಮತ್ತಷ್ಟು ನೋವಾಗುವುದು ಸಹಜವೇ ಆಗಿತ್ತು ! ತಂಗಿ-ತಮ್ಮ, ತಂದೆ-ತಾಯಿ ಎಲ್ಲರೂ ತನ್ನನ್ನು ಮರೆತುಬಿಡುವರು, ತಾನು ಅವರೆಲ್ಲರನ್ನೂ ನೋಡಲು ಹಾತೊರೆಯುವೆನು—ಇವೇ ಮುಂತಾದ ಯೋಚನೆಗಳಿಂದ ಅವಳಿಗೆ ಅತಿಶಯವಾದ ದುಃಖವುಂಟಾಯಿತು. ಬಹಳ ಹೊತ್ತಿನವರೆಗೂ ಹಾಗೆಯೇ ಅಳುತ್ತ ಕುಳಿತಿದ್ದಳು.

ತೋಟದಲ್ಲಿ ಪುಷ್ಪಗಳು ಅರಳಿದ್ದುವು. ಸುಖದಾಯಕ ಸುಗಂಧವು ಬೀರುತ್ತಿತ್ತು. ಚೈತ್ರ ಮಾಸದ ಮಂದ–ಸಮೀರನು ಸುಯ್ಯನೆ ಸುಳಿಯುತ್ತಿದ್ದನು. ಆಗಸದಲ್ಲಿ ತಾರೆಗಳು ಮಿನುಗುತ್ತಿದ್ದುವು. ಯೋಚನೆ ಮಾಡುತ್ತ ಕುಳಿತಿದ್ದಂತೆಯೇ ನಿರ್ಮಲೆಯನ್ನು ನಿದ್ರಾದೇವಿಯು ಆವರಿಸಿದಳು. ಅವಳ ಮನವು ಸ್ವಪ್ನ-ರಾಜ್ಯದಲ್ಲಿ ಸಂಚರಿಸತೊಡಗಿತು. ಎದುರಿಗೊಂದು ನದಿ, ಅಲೆಗಳ ಹೊಡೆತದಿಂದ ಆಂದೋಳಿಸುತ್ತಿತ್ತು. ನಿರ್ಮಲೆಯು ನದೀ-ತೀರದಲ್ಲಿ ಕುಳಿತು ನಾವೆಯನ್ನು ಎದುರು ನೋಡುತ್ತಿದ್ದಳು. ಸಂಧ್ಯಾ-ಸಮಯವು ಸರಿದು, ಕತ್ತಲೆಯು ಕಾರ್ಮೋಡದಂತೆ ಕವಿಯುತ್ತಿತ್ತು. ನದಿಯನ್ನು ಯಾವ ರೀತಿ ದಾಟುವೆನು, ಯಾವ ಪರಿಯಲ್ಲಿ ಮನೆ ಸೇರುವೆನು? ಒಂದು ವೇಳೆ ಹೀಗೆಯೇ ರಾತ್ರಿಯಾಗಿ ಹೋದರೆ ಒಂಟಿಯಾಗಿ ಹೇಗಿರಲಿ?—ಎಂದು ಮುಂತಾಗಿ ಯೋಚಿಸುತ್ತ ಅಳುತ್ತಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ಸುಂದರವಾದೊಂದು ನಾವೆಯು ತೀರದ ಕಡೆ ಬರುತ್ತಿದ್ದುದನ್ನು ಕಂಡು ಅವಳ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ನಾವೆಯು ತೀರವನ್ನು ತಲುಪಿದೊಡನೆಯೇ ನಿರ್ಮಲೆಯು ಅದರಲ್ಲಿ ಕುಳಿತುಕೊಳ್ಳಲು ಹೋಗುವಳು. ಅಷ್ಟರಲ್ಲಿ ನಾವೆ ನಡೆಸುವವನು 'ಈ ನಾವೆಯಲ್ಲಿ ನಿನಗೆ ಸ್ಥಳವಿಲ್ಲ; ನಿನಗೆ ಸ್ಥಳವಿಲ್ಲ!' ಎಂದು ಕೂಗಿ ಹೇಳುವನು. ನಿರ್ಮಲೆಯು ಅವನಿಗೆ ಎಷ್ಟೆಷ್ಟೋ ಒಳ್ಳೆಯ ಮಾತುಗಳನ್ನಾಡುವಳು. ಆದರೂ ಅವನು ಅದೇ ಉತ್ತರವನ್ನೀಯುತ್ತ ನಾವೆಯನ್ನು ಬಿಚ್ಚಿ ಬಿಡುವನು. ನಾವೆ ನದಿಯಲ್ಲಿ ಮುಂದೆ ಹೊರಟು ಹೋಗುವುದು. ನಿರ್ಮಲೆಯು ಬಿಕ್ಕಿ ಬಿಕ್ಕಿ ಅಳುವಳು. ಈ ನಿರ್ಜನ ನದೀ ತೀರದಲ್ಲಿ ರಾತ್ರಿಯನ್ನೆಲ್ಲಾ ಯಾವ ರೀತಿಯಲ್ಲಿ ಕಳೆಯಲಿ? ನದಿಯಲ್ಲಿ ಧುಮುಕಿ ಆ ನಾವೆಯನ್ನು ಹಿಡಿಯಲೇ–ಎಂದು ಯೋಚಿಸುತ್ತಿರುವಷ್ಟರಲ್ಲಿ ಎಲ್ಲಿಂದಲೋ ಈ ಮಾತುಗಳು ಕೇಳಿ ಬರುವುವು. 'ನಿಲ್ಲು, ನಿಲ್ಲು! ನದಿಯು ಬಹಳ ಆಳವಿದೆ, ಮುಳುಗಿ ಹೋಗುವೆ! ಆ ನಾವೆಯಲ್ಲಿ ನಿನಗೆ ಸ್ಥಳವಿಲ್ಲ. ನನ್ನ ನಾವೆಯಲ್ಲಿ ಕುಳಿತುಕೋ, ನಿನ್ನನ್ನು ಆ ದಡಕ್ಕೆ ತಲುಪಿಸಿ ಬಿಡುವೆನು.' ನಿರ್ಮಲೆಯು ಭಯಭೀತಳಾಗಿ ನಾಲ್ಕೂ ಕಡೆ ನೋಡುವಳು. ಸಮೀಪದಲ್ಲೊಂದು ಸಣ್ಣ ದೋಣಿಯು ಬರುತ್ತಿದ್ದುದು ಅವಳ ದೃಷ್ಟಿಗೋಚರವಾಗುವುದು. ಆ ದೋಣಿಯು ಮುರಿದು, ಮುಕ್ಕಾಲು ಆಯುಸ್ಸು ಮುಗಿದುದಾಗಿತ್ತು. ಆಗಾಗ ಅದರಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ಒಬ್ಬ

ಮನುಷ್ಯನು ಆ ನೀರನ್ನು ತೆಗೆದು ತೆಗೆದು ಎರಚುತ್ತಿದ್ದನು. 'ಈ ದೋಣಿಯು ಮುರಿದೇ ಹೋಗಿದೆ. ಇದರಿಂದ ಯಾವ ರೀತಿ ನನ್ನನ್ನು ದಡಕ್ಕೆ ತಲುಪಿ ಸುವೆ ?' ಎಂದು ಕೇಳುವಳು ನಿರ್ಮಲೆ. ಅದಕ್ಕೆ ನಾವೆ ನಡೆಸುವವನು ಉತ್ತರವೀಯುವನು — ನಿನಗಾಗಿ ಕಳುಹಿಸಲ್ಪಟ್ಟಿರುವುದು ಇದೇ ನಾವೆ. ಬಾ, ಬಂದು ಕುಳಿತುಕೋ! 'ಇದರಲ್ಲಿ ಕುಳಿತುಕೊಳ್ಳಲೇ ?' ಎಂದು ಒಂದು ಕ್ಷಣ ನಿರ್ಮಲೆಯು ಯೋಚಿಸುವಳು. ರಾತ್ರಿಯೆಲ್ಲಾ ಒಂಟಿಯಾಗಿ ಈ ಅಂಧ ಕಾರದಲ್ಲಿ ಕುಳಿತಿರುವುದಕ್ಕಿಂತ ನಾವೆಯಲ್ಲಿ ಕುಳಿತುಕೊಳ್ಳುವುದೇ ಮೇಲೆಂದು ನಿರ್ಧರಿಸುವಳು. ಒಬ್ಬಳೇ ಇಲ್ಲಿದ್ದು ಯಾವುದಾದರೂ ಭಯಂಕರ ಕಾಡು ಮೃಗದ ಪಾಲಾಗುವುದಕ್ಕಿಂತ, ನದಿಯಲ್ಲಿ ಮುಳುಗಿ ಸಾಯುವುದು ಮೇಲ ಲ್ಲವೇ ? ಯಾರು ಬಲ್ಲರು, ಒಂದು ವೇಳೆ ನಾವೆಯು ದಡವನ್ನು ತಲುಪಲೂ ಬಹುದು—ಮುಂತಾಗಿ ಯೋಚಿಸಿ, ಪ್ರಾಣದಾಸೆಯನ್ನು ತೊರೆದು ನಾವೆಯಲ್ಲಿ ಕುಳಿತುಕೊಳ್ಳುವಳು. ಸ್ವಲ್ಪ ಸಮಯದವರೆಗೆ ನಾವೆಯು ಡಗ–ಮಗ ಶಬ್ದ ಮಾಡುತ್ತ ಮುಂದೆ ಹೋಗುವುದು. ಆದರೆ ಪ್ರತಿಕ್ಷಣವೂ ನೀರು ಮಾತ್ರ ತುಂಬುತ್ತಲೇ ಇರುವುದು. ನಾವೆಯವನ ಸಹಾಯಕ್ಕೆ ನಿರ್ಮಲೆಯೂ ಎರಡೂ ಕೈಗಳಿಂದ ನೀರನ್ನು ತೆಗೆದು–ತೆಗೆದು ಎರಚುವಳು. ಕಡೆಗೆ ಕೈಸೋತು ಸುಮ್ಮನಾಗುವಳು. ನೀರು ಮಾತ್ರ ಹೆಚ್ಚು-ಹೆಚ್ಚಾಗಿ ತುಂಬುತ್ತಲೇ ಹೋಗುವುದು. ನಾವೆಯು ಗಿರ್ರನೆ ತಿರುಗತೊಡಗುವುದು. ಇನ್ನೇನು ಮುಳುಗಿತು ಎನ್ನುವಷ್ಟರಲ್ಲಿ ನಿರ್ಮಲೆಯು ಯಾವುದೋ ಒಂದು ಅದೃಶ್ಯ ಆಶ್ರಯಕ್ಕಾಗಿ ಕೈ ನೀಡುವಳು. ನಾವೆಯು ನೀರಿನಲ್ಲಿ ಮುಳುಗುವುದು; ಅವಳ ಕಾಲುಗಳು ನೀರಿನಿಂದ ಮೇಲಕ್ಕೇಳುವುವು. ಜೋರಾಗಿ ಕಿರಿಚಿಕೊಳ್ಳು ವಳು; ಒಡನೆಯೇ ನಿದ್ರೆಯಿಂದ ಅವಳ ಕಣ್ತೆರೆಯುವುದು. ನೋಡಲಾಗಿ, ತನ್ನ ತಾಯಿಯು ಎದುರಿಗೆ ನಿಂತು ಭುಜವನ್ನು ಹಿಡಿದು ಅಲುಗಿಸುತ್ತಿದ್ದಳು.

## ಎರಡನೆಯ ಪರಿಚ್ಛೇದ

ಬಾಬೂ ಉದಯಭಾನುಲಾಲರ ಮನೆಯಲ್ಲಿ ಸಡಗರವೇ ಸಡಗರ! ಎತ್ತ ನೋಡಿದರೂ ಗಲಾಟೆ! ವೆರಾಂಡಾದಲ್ಲಿ ಒಂದೆಡೆ ಅಕ್ಕಸಾಲಿಗನು ಚಿನ್ನದ ಕೆಲಸ ಮಾಡುತ್ತಿದ್ದನು; ಮತ್ತೊಂದೆಡೆ ಕೊಠಡಿಯಲ್ಲಿ ದರ್ಜಿಯವನು

ಬಟ್ಟೆಗಳನ್ನು ಹೊಲಿಯುತ್ತಿದ್ದನು. ಮಗುದೊಂದೆಡೆ ಮಂದಲಿಗೆಯವನು ಚಾಪೆಗಳನ್ನು ತಯಾರಿಸುತ್ತಿದ್ದನು. ಒಳಗಡೆಯ ಅಂಗಳದಲ್ಲಿ ಅಡಿಗೆಯವನಿಗೆ ಬೇಕಾದ ಅನುಕೂಲತೆಗಳನ್ನು ಮಾಡಲಾಗುತ್ತಿತ್ತು. ಅತಿಥಿಗಳಿಗಾಗಿ ಬೇರೆಯ ದೊಡ್ಡದೊಂದು ಮನೆಯನ್ನೇ ಏರ್ಪಡಿಸಲಾಗಿತ್ತು. ಒಬ್ಬೊಬ್ಬ ಅತಿಥಿಗೂ ಒಂದು ಚಾಪೆ, ಒಂದು ಮೇಜು, ಒಂದು ಕುರ್ಚಿ; ಮೂವರು ಅತಿಥಿಗಳಿಗೆ ಒಬ್ಬ ಆಳು—ಇಷ್ಟು ಮಾಡಲು ಏರ್ಪಾಡಾಗಿತ್ತು. ಬೀಗರ ಔತಣಕ್ಕೆ ಇನ್ನೂ ಒಂದು ತಿಂಗಳು ತಡವಿದ್ದರೂ ಈಗಿನಿಂದಲೇ ಎಲ್ಲ ಸಿದ್ಧತೆಯೂ ಸಾಗುತ್ತಿತ್ತು. ಬೀಗರ ಮರ್ಯಾದೆಯ ವಿಷಯದಲ್ಲಿ ಯಾರೊಬ್ಬರೂ ತನ್ನ ಕಡೆ ಬೆಟ್ಟು ಮಾಡಿ ತೋರಬಾರದು, ಪ್ರತಿಯೊಬ್ಬರೂ ಅದರ ಸುವ್ಯವಸ್ಥೆಯನ್ನು ನೆನೆಸಿಕೊಳ್ಳುವಂತಿರಬೇಕು—ಎಂಬುದೇ ಬಾಬು ಉದಯಭಾನುಲಾಲರ ಅಪೇಕ್ಷೆಯಾಗಿತ್ತು. ಒಂದು ದೊಡ್ಡ ಮನೆಯ ತುಂಬ ಟೀ-ಸೆಟ್ಟುಗಳು, ತಿಂಡಿಯ ತಟ್ಟೆಗಳು, ಲೋಟಗಳು, ಕಪ್ಪುಗಳು ಮುಂತಾಗಿ ಪಾತ್ರೆಗಳೇ ತುಂಬಿದ್ದುವು. ನಿತ್ಯವೂ ಮಂಚದ ಮೇಲೆ ಮಲಗಿ ಆರಾಮದಿಂದ ಹುಕ್ಕಾ ಸೇದುತ್ತಿದ್ದ ಮನುಷ್ಯರೆಲ್ಲರೂ ಇಂದು ಯಾವುದಾದರೂ ಕೆಲಸದಲ್ಲಿ ತತ್ಪರತೆಯಿಂದ ತೊಡಗಿದ್ದರು. ತಮ್ಮ ತಮ್ಮ ಉಪಯೋಗಿತೆಯನ್ನು ವ್ಯಕ್ತಪಡಿಸಿಕೊಳ್ಳುವ ಸುಸಮಯವು ಈಗ ಅವರಿಗೆ ದೊರಕಿತ್ತು. ಒಬ್ಬನಿಂದಾಗುವ ಕೆಲಸಕ್ಕೆ ಐದು ಮಂದಿ ಓಡುವರು. ಕೆಲಸ ಕಡಿಮೆಯಾದರೂ ಗಡಿಬಿಡಿ ಮಾತ್ರ ಬಹಳ ಮಾಡುತ್ತಿದ್ದರು. ಸಣ್ಣ-ಪುಟ್ಟ ಮಾತುಗಳಿಗೆಲ್ಲಾ ಘಂಟೆಗಟ್ಟಲೆ ತರ್ಕ-ವಿತರ್ಕ ಮಾಡುತ್ತ ಕಾಲಹರಣ ಮಾಡುವರು. ಕಡೆಗೆ ವಕೀಲ ಸಾಹೇಬರೇ ಬಂದು ವಿಷಯ ತೀರ್ಮಾನ ಮಾಡುತ್ತಿದ್ದರು. ' ಈ ತುಪ್ಪ ಚನ್ನಾಗಿಲ್ಲ ' ಎನ್ನುವವನು ಒಬ್ಬ. ' ಇದಕ್ಕಿಂತ ಒಳ್ಳೆಯ ತುಪ್ಪ ಅಂಗಡಿಯಲ್ಲಿ ಸಿಕ್ಕಿಬಿಟ್ಟರೆ ನೀನು ಕೇಳಿದ್ದನ್ನು ಕೊಡುವೆನು ' ಎನ್ನುವವನು ಮತ್ತೊಬ್ಬ. ' ಎಂತಹ ಕೆಟ್ಟ ನಾತ ಬಡಿಯುವುದು ' ಎನ್ನುವನು ಮೂರನೆಯವನೊಬ್ಬ. ನಾಲ್ಕನೆಯವನೆನ್ನುವನು ' ಬಹುಶಃ ನಿನ್ನ ಮೂಗೇ ಕೊಳೆತು ಹೋಗಿರಬಹುದು. ತುಪ್ಪದ ಗುಣವಾದರೂ ನಿನಗೆ ಗೊತ್ತೇ ? ಇಲ್ಲಿಗೆ ಬಂದಾಗಿನಿಂದ ನೀನು ತುಪ್ಪವನ್ನು ಕಾಣುತ್ತಿರುವೆ; ಇಲ್ಲದಿದ್ದರೆ ನಿನಗೆ ಅದರ ದರ್ಶನವಾದರೂ ಎಲ್ಲಿಯದು ? ' ಹೀಗೆಯೇ ವಾದ-ವಿವಾದವು ಪರಸ್ಪರ ಹೆಚ್ಚುವುದು. ಕೊನೆಗೆ ವಕೀಲ ಸಾಹೇಬರು ಬಂದು ಜಗಳವನ್ನು ತೀರ್ಮಾನಿಸುತ್ತಿದ್ದರು.

ರಾತ್ರಿ ಒಂಭತ್ತು ಘಂಟೆಯ ಸಮಯ. ಉದಯಭಾನುಲಾಲರು ಒಳ ಗಡೆ ಕುಳಿತು ಖರ್ಚಿನ ಲೆಖ್ಖಾಚಾರ ಮಾಡುತ್ತಿದ್ದರು. ಈಗ ಕೆಲವು ದಿನ ಗಳಿಂದ ಪ್ರತಿದಿನವೂ ಲೆಖ್ಖಾಚಾರ ಹಾಕುತ್ತಿದ್ದರು; ಆದರೆ ಪ್ರತಿದಿನವೂ ಅದರಲ್ಲಿ ಏನಾದರೂ ಹೆಚ್ಚು ಕಡಿಮೆ ಮಾಡಲೇಬೇಕಾಗುತ್ತಿತ್ತು. ಎದುರಿಗೆ ಕಲ್ಯಾಣಿಯು ಹುಬ್ಬುಗಂಟಿಕ್ಕಿಕೊಂಡು ನಿಂತಿದ್ದಳು. ಬಾಬೂಸಾಹೇಬರು ಬಹಳ ಹೊತ್ತಿನ ಬಳಿಕ ತಲೆಯೆತ್ತಿ ನೋಡಿ ನುಡಿದರು---ಹತ್ತು ಸಾವಿರಕ್ಕೆ ಕಡಿಮೆಯೇನೂ ಖರ್ಚಾಗುವುದಿಲ್ಲ. ಒಂದು ವೇಳೆ ಇನ್ನೂ ಹೆಚ್ಚಾದರೂ ಆಗಬಹುದು.

ಕಲ್ಯಾಣಿ—ಹತ್ತು ದಿನಗಳಿಗಾಗಲೇ ಐದು ಸಾವಿರದಿಂದ ಹತ್ತು ಸಾವಿರಕ್ಕೇರಿತೋ ? ಇನ್ನು ಒಂದು ತಿಂಗಳಿಗೆ ಬಹುಶಃ ಲಕ್ಷಕ್ಕೇ ಏರಬಹುದು!

ಉದಯಭಾನು—ಏನು ಮಾಡಲಿ ? ನಾಲ್ಕು ಜನರೆಡೆಯಲ್ಲಿ ನಗೆಗೀ ಡಾಗಬಾರದೆಂಬುದೇ ನನ್ನ ಅಭಿಲಾಷೆ. ವ್ಯವಸ್ಥೆಯಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ಜನರು ಆಡಿಕೊಳ್ಳುವುದಿಲ್ಲವೇ ? ' ಹೆಸರಿಗೆ ಮಾತ್ರ ಭಾರಿಯ ವಕೀಲರು, ಭಂಡವಾಳವೇನೂ ಇಲ್ಲ ' ಎನ್ನುವುದಿಲ್ಲವೇ ? ಅಲ್ಲದೆ ಗಂಡಿ ನವರು ವರದಕ್ಷಿಣೆಯನ್ನು ಸಹ ತೆಗೆದುಕೊಳ್ಳದಿರುವಾಗ, ಬೀಗರ ಆದರ- ಸತ್ಕಾರವನ್ನು ನಾನು ಯಾವ ಲೋಪ-ದೋಷವೂ ಇಲ್ಲದೆ ನಡೆಸುವುದು ನನ್ನ ಕರ್ತವ್ಯವಾಗಿದೆ.

ಕಲ್ಯಾಣಿ—ಬ್ರಹ್ಮನು ಈ ಪ್ರಪಂಚವನ್ನು ಸೃಷ್ಟಿಸಿದಾಗಿನಿಂದ ಇದು ವರೆವಿಗೂ, ಬೀಗರನ್ನು ಪೂರ್ಣ ಪ್ರಸನ್ನಗೊಳಿಸಲು ಯಾರಿಗೂ ಸಾಧ್ಯ ವಾಗಿಲ್ಲ. ಲೋಪ-ದೋಷಗಳನ್ನೆತ್ತಿ ತೋರುವುದಕ್ಕೂ ಮತ್ತು ನಿಂದೆ ಮಾಡುವುದಕ್ಕೂ ಅವರಿಗೆ ಯಾವುದಾದರೊಂದು ಸಮಯ ಸಿಕ್ಕೇ ಸಿಗುವುದು. ಮನೆಯಲ್ಲಿ ತಿನ್ನಲು ಒಣರೊಟ್ಟಿಗೂ ಗತಿಯಿಲ್ಲದವನು ಸಹ, ಬೀಗರ ಕಡೆಯವ ನೆನಿಸಿದ ಮಾತ್ರಕ್ಕೆ ಇಲ್ಲದ ಜಂಭವನ್ನು ಮಾಡುವನು ಎಣ್ಣೆಯಲ್ಲಿ ಸುಗಂಧ ವಿಲ್ಲ, ಸಾಬೂನಂತೂ ಸ್ವಲ್ಪವೂ ಚನ್ನಾಗಿಲ್ಲ; ಕೆಲಸದವರೊಬ್ಬರೂ ಹೇಳಿದ ಮಾತನ್ನು ಕೇಳುವುದಿಲ್ಲ; ದೀಪಗಳ ಹೊಗೆಯಿಂದ ಕಣ್ಣುಗಳೆಲ್ಲಾ ಹೋದುವು, ಮೇಜು-ಕುರ್ಚಿಗಳ ತುಂಬ ತಿಗಣೆಗಳು ತುಂಬಿವೆ, ಚಾಪೆಗಳು ಕಿತ್ತೇ ಹೋಗುವಂತಿವೆ, ಕೊಠಡಿಗಳಲ್ಲಿ ಸ್ವಲ್ಪವೂ ಗಾಳಿಯಾಡುವುದಿಲ್ಲ—ಇವೇ

ಮುಂತಾದ ಸಹಸ್ರಾರು ಆಕ್ಷೇಪಣೆಗಳು ಇದ್ದೇ ಇರುತ್ತವೆ. ಇವುಗಳನ್ನೆಲ್ಲಾ ಎಷ್ಟೆಂದು ತಡೆಯಲಾಗುವುದು ? ಈ ಆಕ್ಷೇಪಣೆಗಳಿಗೆ ಸರಿಯಾದ ಸಮಯ ಸಿಗದಿದ್ದರೆ, ಬೇರೆ ಯಾವುದಾದರೂ ದೋಷಗಳನ್ನು ಹುಡುಕಿಯೇ ಹುಡುಕು ವರು. 'ಇದೆಂತಹ ಎಣ್ಣೆ ? ವೇಶ್ಯೆಯರು ಹಚ್ಚಿಕೊಳ್ಳಲು ಸರಿಯಾಗಿದೆ. ಇದು ನಮಗೆ ಬೇಡ, ಸಾದಾ ಎಣ್ಣೆ ಕಳುಹಿಸಿ' ಎನ್ನುವರು ಕೆಲವರು. 'ಇಲ್ಲಿಗೇಕೆ ಸಾಬೂನನ್ನೇ ಕಳುಹಿಸಿಲ್ಲ ? ಬಹುಶಃ ನಾವೆಂದೂ ಸಾಬೂನನ್ನೇ ಕಂಡಿಲ್ಲವೆಂದು ತಿಳಿದಿರುವರೇನೋ ?' ಎನ್ನುವವರು ಮತ್ತೆ ಕೆಲವರು. 'ಈ ಆಳುಗಳಂತೂ ಯಮದೂತರಂತೆಯೇ ಇರುವರು. ಹೇಳಿದ ಮಾತೊಂದನ್ನೂ ಕೇಳುವುದಿಲ್ಲ' ಎನ್ನುವರು ಇನ್ನು ಕೆಲವರು. 'ಲಾಂದ್ರಗಳಂತೂ ಹೊಗೆ ತುಂಬಿವೆ. ಇಂತಹ ದೀಪದಲ್ಲಿ ನಾಲ್ಕಾರು ದಿನ ಇದ್ದುಬಿಟ್ಟರೆ ಕಣ್ಣುಗಳೇ ಹೊರಟುಹೋಗುವುವು' ಎನ್ನುವರು ಮತ್ತೆ ಕೆಲವರು. ಆದ್ದರಿಂದ ನಾನು ಹೇಳುವುದೇನೆಂದರೆ—ಈ ಬೀಗರ ಸತ್ಕಾರದ ವಿಷಯವನ್ನು ನೀವು ಹೆಚ್ಚಾಗಿ ಮನಸಿಗೆ ಹಚ್ಚಿಕೊಳ್ಳಬೇಡಿ !

ಉದಯಭಾನು—ಹಾಗಾದರೆ ನನ್ನನ್ನು ಏನು ಮಾಡೆಂದು ಹೇಳುವೆ ?

ಕಲ್ಯಾಣಿ—ಹೇಳುತ್ತಲೇ ಇರುವೆನಲ್ಲ ? ಐದು ಸಾವಿರಕ್ಕಿಂತ ಒಂದು ಕಾಸನ್ನೂ ಹೆಚ್ಚಿಗೆ ಖರ್ಚು ಮಾಡುವುದಿಲ್ಲವೆಂದು ನಿರ್ಧರ ಮಾಡಿಕೊಳ್ಳಿ. ಕೈಯಲ್ಲಿ ಒಂದು ಕಾಸೂ ಇಲ್ಲದೆ ಕೇವಲ ಸಾಲದ ಭರವಸೆಯ ಮೇಲೆ, ಇಷ್ಟೊಂದೇಕೆ ಖರ್ಚು ಮಾಡಬೇಕು ? ನಂತರ ಈ ಜೀವನದಲ್ಲಿ ಆ ಸಾಲ ವನ್ನು ತೀರಿಸುವ ಬಗೆಯಾದರೂ ಹೇಗೆ ? ಅಲ್ಲದೆ ಮುಂದಿನ ಮಕ್ಕಳಿಗೇನೂ ಬೇಡವೇ ?

ಉದಯಭಾನು—ನೀನು ಯಾವಾಗಲೂ ಇದೇ ಮಾತನ್ನು ಹೇಳು ತ್ತಿರುವೆ ?

ಕಲ್ಯಾಣಿ—ಇದರಲ್ಲಿ ಕೋಪಗೊಳ್ಳುವ ವಿಷಯವೇನಿದೆ ? ಮನುಷ್ಯ ನಾಗಿ ಹುಟ್ಟಿದ ಬಳಿಕ ಒಂದು ದಿನ ಸಾಯಲೇಬೇಕು. ನಾನೂ ಈಚೆಗೆ ಕೆಲವು ಕಡೆ ಕಣ್ಣಾರೆ ನೋಡುತ್ತಿರುವೆನು—ಇತ್ತ ಅಪ್ಪನು ಸತ್ತನೆಂದರೆ, ಮಕ್ಕಳು ಮರುದಿನದಿಂದಲೇ ಬೀದಿಬೀದಿ ತಿರಿದು ತಿನ್ನಬೇಕು ! ಮನುಷ್ಯನು ಇಂತಹ ಕೆಲಸವನ್ನೇಕೆ ಮಾಡಬೇಕು ?

ಉದಯಭಾನುಲಾಲರು ಕೋಪದಿಂದ ಸಿಡಿಗುಟ್ಟುತ್ತ ನುಡಿದರು— ಓಹೋ! ಈಗ ತಿಳಿಯಿತು ನಿನ್ನ ಮಾತಿನ ಅರ್ಥ! ನನಗೆ ಮೃತ್ಯುಕಾಲವು ಸಮೀಪಿಸಿದೆಯೆಂಬುದೇ ನಿನ್ನ ಭವಿಷ್ಯವಾಣಿಯಲ್ಲವೇ? ಹೆಂಗಸರ ಮನಸ್ಸು ಮುತ್ತೈದೆತನದಿಂದ ಬೇಸರಗೊಳ್ಳುವ ವಿಷಯವನ್ನು ನಾನಿದುವರೆವಿಗೂ ಕೇಳಿರಲಿಲ್ಲ. ಇಂದು ಈ ಹೊಸ ವಿಷಯವನ್ನು ತಿಳಿದಂತಾಯಿತು! ಬಹುಶಃ ವೈಧವ್ಯದಲ್ಲೂ ಒಂದು ವಿಧವಾದ ಸುಖವಿರಬಹುದು?

ಕಲ್ಯಾಣಿ—ಸರಿ ಸರಿ! ನಿಮ್ಮೊಡನೆ ಪ್ರಪಂಚ ವ್ಯವಹಾರದ ಒಂದೆರಡು ಮಾತನ್ನಾಡಿದರೆ ಸಾಕು, ವಿಷವನ್ನೇ ಕಾರುವಿರಿ! ಇವಳಿಗೆಲ್ಲೂ ಬೇರೆಯ ಆಶ್ರಯವಿಲ್ಲ; ನನ್ನ ಕೂಳಿಗೇ ಕಾದು ಬಿದ್ದಿರುವಳು—ಎಂದು ಭಾವಿಸಿರುವಿರಾ? ಒಂದು ಮಾತನ್ನಾಡುವುದಕ್ಕಿಲ್ಲ, ಮನೆಯ ಆಳಿಗಿಂತ ಕಡೆಯಾಗಿ ಕಾಣುವಿರಿ! ಎರಡು ಹೊತ್ತಿನ ಊಟ-ಎರಡು ಸೀರೆ, ಇಷ್ಟಕ್ಕೇ ನನ್ನ ಸಂಬಂಧವೆಂದು ತಿಳಿದಿರಾ? ನಾನು ಸುಮ್ಮನಿದ್ದಷ್ಟೂ ನನಗೇ ಬಾಯಿ ಬಡಿಯುವಿರಿ! ಸಾಲದ ಹಣವನ್ನು ಸಿಕ್ಕ-ಸಿಕ್ಕಂತೆ ಸೂರೆಗೊಡಬೇಕು-ಯಾರೂ ಒಂದು ಮಾತನಾಡಬಾರದು! ಈ ದುರ್ವ್ಯವಹಾರಗಳ ಫಲವೆಲ್ಲ ಮುಂದಕ್ಕೆ ನನ್ನ ಮಕ್ಕಳ ತಲೆಗೇ ಕಟ್ಟಿದುದಲ್ಲವೇ?

ಉದಯಭಾನು—ಹಾಗಾದರೆ ನಾನು ನಿನ್ನ ಗುಲಾಮನೆಂದು ತಿಳಿದೆಯಾ?

ಕಲ್ಯಾಣಿ—ನನ್ನನ್ನು ಮಾತ್ರ ನಿಮ್ಮ ಮನೆಯಾಳೆಂದು ಭಾವಿಸಿದಿರಾ?

ಉದಯಭಾನು—ಸ್ತ್ರೀಯ ಸೂತ್ರದ ಗೊಂಬೆಯಂತಿರುವ ಪುರುಷರು ಬೇರೆಯಿರಬಹುದು, ನಾನಲ್ಲ!

ಕಲ್ಯಾಣಿ—ಹಾಗಾದರೆ, ಪುರುಷರು ಅಂದದ್ದನ್ನೆಲ್ಲಾ ಅನಿಸಿಕೊಂಡು ಬಿದ್ದಿರುವ ಸ್ತ್ರೀಯರೂ ಬೇರೆಯಿರಬಹುದು, ನಾನಲ್ಲ!

ಉದಯಭಾನು—ಸಂಪಾದಿಸಿ ತರುವವನು ನಾನು; ನನ್ನ ಮನ ಬಂದಂತೆ ಖರ್ಚು ಮಾಡುವೆನು. ಯಾರಿಗೂ ಯಾವ ಮಾತನ್ನೂ ಆಡುವ ಅಧಿಕಾರವಿಲ್ಲ.

ಕಲ್ಯಾಣಿ—ಹಾಗಿದ್ದಾಗೆ ನಿಮ್ಮ ಮನೆ-ಮಕ್ಕಳನ್ನು ನೀವೇ ನಿರ್ವಹಿಸಿಕೊಳ್ಳಿ. ಇಂತಹ ಮನೆಗೆ ದೂರದಿಂದಲೇ ನನ್ನ ನಮಸ್ಕಾರ! ಮನೆಯಲ್ಲಿ

ನಿಮಗೆಷ್ಟು ಅಧಿಕಾರವೋ ನನಗೂ ಅಷ್ಟೇ ಅಧಿಕಾರವುಂಟು, ಸ್ವಲ್ಪವೂ ಕಡಿಮೆಯಿಲ್ಲ! ನೀವು ನಿಮ್ಮ ಮನಸಿನ ರಾಜನಾದರೆ, ನಾನು ನನ್ನ ಮನಸಿನ ರಾಣಿ! ನಿಮ್ಮ ಮನೆ-ಮಠಗಳೆಲ್ಲಾ ನಿಮಗೇ ಇರಲಿ, ನನಗೇನೂ ಒಂದು ಹೊತ್ತಿನ ಹೊಟ್ಟೆ-ಬಟ್ಟೆಗೆ ಕಡಿಮೆಯಿಲ್ಲ. ನಿಮ್ಮ ಮಕ್ಕಳು; ಮನ ಬಂದಂತೆ ಮಾಡಿರಿ; ಹೊಡೆಯಿರಿ, ಬಡೆಯಿರಿ, ಕಡಿಯಿರಿ! ನಾನು ಕಣ್ಣೆತ್ತಿ ಸಹ ನೋಡುವುದಿಲ್ಲ.

ಉದಯಭಾನು—ಅಂದರೆ ನೀನಿಲ್ಲದ ಮಾತ್ರಕ್ಕೆ ನಾನು ನಿರ್ವಹಿಸಲಾರೆನೆಂದು ತಿಳಿದೆಯಾ? ನಾನೊಬ್ಬನೇ ಇಂತಹ ಒಂದಲ್ಲ-ಹತ್ತು ಮನೆಯನ್ನು ನಿರ್ವಹಿಸಬಲ್ಲೆ!

ಕಲ್ಯಾಣಿ—ಏನೆಂದಿರಿ? ಒಂದೇ ಒಂದು ಮಾಸದ ಅವಧಿಯಲ್ಲಿ ಈ ಮನೆಯು ಮಣ್ಣುಪಾಲಾಗದಿದ್ದರೆ, ಆಗ ನನ್ನ ಮಾತನ್ನು ನೆನಿಸಿಕೊಳ್ಳಿ! ಎನ್ನುತ್ತ ಕಲ್ಯಾಣಿಯು ಕ್ರೋಧದ ಕಿಡಿಯನ್ನು ಕಾರತೊಡಗಿದಳು. ಮತ್ತು ಧಡಾರ‍್ರನೆ ಅಲ್ಲಿಂದೆದ್ದು ಹೊರಕ್ಕೆ ಹೊರಟು ಹೋದಳು. ವಕೀಲ ಸಾಹೇಬರು ಮೊಕದ್ದಮೆಗಳ ವಿಷಯದಲ್ಲಿ ನುರಿತವರೇನೋ ಆಗಿದ್ದರೂ, ಸ್ತ್ರೀಯರ ಸ್ವಭಾವದ ವಿಚಾರದಲ್ಲಿ ಅವರಿಗಷ್ಟು ಜ್ಞಾನವಿರಲಿಲ್ಲ. ಈಗಲೂ ಸ್ವಲ್ಪ ಸಮಾಧಾನದ ಮಾತನ್ನಾಡಿ ಕಲ್ಯಾಣಿಯನ್ನು ಕೈಹಿಡಿದು ಕುಳ್ಳಿರಿಸಿದ್ದರೆ, ಅವಳ ಕೋಪವೆಷ್ಟೋ ಕಡಿಮೆಯಾಗುತ್ತಿತ್ತು. ಆದರೆ ಅವರು ಹಾಗೆ ಮಾಡದೆ, ಮಾತನ್ನು ಬೇರೆಯ ರೀತಿ ತಿರುಗಿಸಿದರು.

ತವರುಮನೆಯ ಹೆಮ್ಮೆಯಿರಬಹುದು!—ಎಂದರು.

ದ್ವಾರದಲ್ಲೇ ನಿಂತು ಕಲ್ಯಾಣಿಯು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಪತಿಯನ್ನು ದುರಗುಟ್ಟಿದಳು; ನಂತರ ನುಡಿದಳು—ತವರುಮನೆಯವರೇನೂ ನನ್ನ ಹಣೆಬರಹಕ್ಕೆ ಹೊಣೆಯಲ್ಲ! ಅಲ್ಲದೆ ಅಲ್ಲಿನ ಕೂಳಿಗೆ ಕಾದುಬಿದ್ದಿರುವಷ್ಟು ನೀಚಳೂ ನಾನಲ್ಲ!!

ಉದಯಭಾನು—ಹಾಗಿದ್ದರೆ ಎಲ್ಲಿಗೆ ಹೋಗುತ್ತಿರುವೆ?

ಕಲ್ಯಾಣಿ—ಆ ಮಾತನ್ನು ನೀವು ಕೇಳಬೇಕೆಂಬುದಾದರೂ ಏನು? ಈಶ್ವರನ ಸೃಷ್ಟಿಯಲ್ಲಿ ಅಸಂಖ್ಯ ಪ್ರಾಣಿಗಳಗೆ ಆಶ್ರಯವಿರುವಾಗ, ನನಗೊಬ್ಬಳಿಗಿಲ್ಲವೇ?

ಹೀಗೆಂದು, ಕಲ್ಯಾಣಿಯು ಕೊಠಡಿಯಿಂದ ಹೊರಕ್ಕೆ ಹೊರಟುಹೋದಳು. ಅಂಗಳದಲ್ಲಿ ನಿಂತು ಒಮ್ಮೆ ಆಕಾಶದೆಡೆಗೆ ದಿಟ್ಟಿಸಿದಳು. 'ಎಷ್ಟು ನಿರ್ದಯತೆಯಿಂದ ನನ್ನನ್ನು ಹೊರದೂಡುತ್ತಿರುವರು?' ಎಂದು ತಾರಾಗಣವನ್ನು ಸಾಕ್ಷಿಯಾಗಿಟ್ಟುಕೊಂಡು ನುಡಿಯುತ್ತಿರುವಳೋ—ಎಂಬಂತೆ ತೋರುತ್ತಿತ್ತು. ರಾತ್ರಿ ಹನ್ನೊಂದು ಗಂಟೆಯ ಸಮಯ. ಮನೆಯೆಲ್ಲಾ ನಿಶ್ಶಬ್ದವಾಗಿತ್ತು. ಇಬ್ಬರು ಗಂಡು ಮಕ್ಕಳೂ ಅವಳ ಕೊಠಡಿಯಲ್ಲೇ ಮಲಗಿಕೊಳ್ಳುತ್ತಿದ್ದರು. ಕೊಠಡಿಯೊಳಕ್ಕೆ ಬಂದು ನೋಡಲಾಗಿ ಚಂದ್ರಭಾನುವು ನಿದ್ದೆ ಮಾಡುತ್ತಿದ್ದನು. ಚಿಕ್ಕವನಾದ ಸೂರ್ಯಭಾನುವು ಎಚ್ಚರಗೊಂಡು ಮಂಚದ ಮೇಲೆ ಕುಳಿತುಕೊಂಡಿದ್ದನು. ತಾಯಿಯನ್ನು ಕಂಡೊಡನೆಯೇ ತೊದಲು ಮಾತಿನಿಂದ ಮುದ್ದಾಗಿ ನುಡಿದನು—ಅಮ್ಮಾ! ನೀನೆಲ್ಲಿಗೆ ಹೊರಟು ಹೋಗಿದ್ದೆ?

ಕಲ್ಯಾಣಿಯು ದೂರದಲ್ಲೇ ನಿಂತು ನುಡಿದಳು—ಎಲ್ಲಿಗೂ ಇಲ್ಲ, ಮಗು! ನಿಮ್ಮ ತಂದೆಯ ಕೊಠಡಿಗೆ ಹೋಗಿದ್ದೆ.

ಸೂರ್ಯ—ನೀನು ನನ್ನನ್ನು ಬಿಟ್ಟು ಹೊರಟು ಹೋದೆ, ನನಗೆ ಎಷ್ಟು ಹೆದರಿಕೆಯಾಯಿತು? ನೀನೇಕೆ ಹೋದೆ, ಹೇಳು!

ಹೀಗೆಂದು ಹೇಳುತ್ತ ಸೂರ್ಯಭಾನುವು ತಾಯಿಯ ಉಡಿಯನ್ನೇರಲು ತನ್ನ ಎರಡೂ ಕೈಗಳನ್ನು ಚಾಚಿದನು. ಇನ್ನು ಕಲ್ಯಾಣಿಗೆ ಸುಮ್ಮನಿರಲಾಗಲಿಲ್ಲ. ಮಾತೃ-ಸ್ನೇಹವೆಂಬ ಸುಧಾ-ಸರಿತೆಯಿಂದ ಅವಳ ಹೃದಯವು ಪರಿಪ್ಲಾವಿತವಾಯಿತು. ಕ್ರೋಧದ ತಾಪದಿಂದ ಬಾಡಿಹೋಗಿದ್ದ ಹೃದಯದ ಕೋಮಲ ಪುಷ್ಪವು ಪುನಃ ಅರಳಿತು. ಕಣ್ಣುಗಳು ಕಂಬನಿದುಂಬಿದುವು. ಅವಳು ಮಗನನ್ನು ಉಡಿಯಲ್ಲೆತ್ತಿಕೊಂಡಳು; ಮತ್ತು ಎದೆಗಪ್ಪಿಕೊಂಡು ನುಡಿದಳು—ನೀನು ಕೂಗಲಿಲ್ಲವೇಕೆ, ಮಗು?

ಸೂರ್ಯ—ಕೂಗಿದೆನಮ್ಮ! ನಿನಗದು ಕೇಳಿಸಿಗಲಾರದು. ಹೇಳು, ಇನ್ನೆಂದೂ ಹೀಗೆ ಬಿಟ್ಟು ಹೋಗುವುದಿಲ್ಲವಷ್ಟೆ?

ಕಲ್ಯಾಣಿ—ಇಲ್ಲ, ಕಂದಾ! ಇನ್ನೆಲ್ಲೂ ಹೋಗುವುದಿಲ್ಲ.

ಹೀಗೆಂದು ಕಲ್ಯಾಣಿಯು ಸೂರ್ಯಭಾನುವನ್ನೂ ಮಲಗಿಸಿಕೊಂಡು ತಾನೂ ಮಂಚದ ಮೇಲೆ ಮಲಗಿದಳು. ತಾಯಿಯ ಹೃದಯವನ್ನಪ್ಪಿಕೊಂಡು ಬಾಲಕನು ನಿರ್ಭೀತಿಯಿಂದ ನಿದ್ರೆ ಮಾಡಿದನು ಕಲ್ಯಾಣಿಯ ಮನಸಿನಲ್ಲಿ,

ಸಂಕಲ್ಪ ವಿಕಲ್ಪಗಳಾಗತೊಡಗಿದುವು. ಪತಿಯ ಮಾತುಗಳನ್ನು ನೆನೆಸಿ ಕೊಂಡರೆ 'ಈ ಮನೆಗೆ ತಿಲಾಂಜಲಿಯನ್ನಿತ್ತು ತೊಲಗಿ ಹೋಗಲೇ!' ಎನ್ನುವಷ್ಟು ಕೋಪವುಂಟಾಗುತ್ತಿತ್ತು. ಆದರೆ ಮಕ್ಕಳನ್ನು ನೋಡಿದೊಡ ನೆಯೇ ಮನವು ವಾತ್ಸಲ್ಯದಿಂದ ಗದ್ಗದವಾಗುತ್ತಿತ್ತು. ಈ ಮಕ್ಕಳನ್ನು ಯಾವ ಧೈರ್ಯದಿಂದ ಬಿಟ್ಟು ಹೋಗಲಿ? ಯಾರಿವರನ್ನು ಆದರ-ಪ್ರೀತಿಗಳಿಂದ ನೋಡಿಕೊಳ್ಳುವರು? ಬೆಳಗಾಗೆದ್ದು ಇವರಿಗೆ ಹಾಲು—ಹಲ್ವಗಳನ್ನು ಕೊಡು ವವರಾರು? ಹೊತ್ತುಹೊತ್ತಿಗೆ ಸರಿಯಾಗಿ ಇವರನ್ನು ಮಲಗಿಸಿ-ಎಚ್ಚರಿಸು ವವರಾರು? ದಿಕ್ಕಿಲ್ಲದ ಅನಾಥರಂತಾಗಿ ಹೋಗುವರು. ಇಲ್ಲ ಕಂದಗಳಿರಾ! ನಾನು ನಿಮ್ಮನ್ನು ಬಿಟ್ಟು ಹೋಗುವುದಿಲ್ಲ. ನಿಮಗೋಸ್ಕರ ಎಲ್ಲವನ್ನೂ ಸಹಿಸಿ ಕೊಳ್ಳುವೆನು. ನಿರಾದರ—ನಿಂದೆ, ಅಸಡ್ಡೆ—ಅಪಮಾನ, ಬೆದರಿಕೆ-ಗದರಿಕೆ ಎಲ್ಲವನ್ನೂ ಸಹಿಸಿಕೊಳ್ಳುವೆನು!

ಇತ್ತ ಕಲ್ಯಾಣಿಯೇನೋ ಮಗುವನ್ನು ಮಲಗಿಸಿಕೊಂಡು ಮಲಗಿದಳು. ಆದರೆ ಅತ್ತ ವಕೀಲಬಾಬುಗಳಿಗೆ ನಿದ್ದೆ ಬರಲಿಲ್ಲ. ಕಟುವಾಕ್ಯಗಳನ್ನು ಸಹಿ ಸುವುದು ಮಾತ್ರ ಅವರಿಂದ ಸಾಧ್ಯವಿರಲಿಲ್ಲ. ಓ! ಎಷ್ಟು ದೌಲತ್ತು ಇವ ಳಿಗೆ? ಇವಳು ಹೇಳಿದಂತೆ ನಾನು ಕೇಳಿಕೊಂಡಿರಬೇಕೇ? ಬಾಯಿಂದ ಒಂದು ಮಾತನ್ನಾಡುವುದೇ ಕಷ್ಟವಾಗಿ ಬಿಟ್ಟಿದೆಯಲ್ಲಾ! ಮನೆಯಲ್ಲಿ ಬೇರೆ ಯಾರೂ ಇರಬಾರದು, ತಾನೊಬ್ಬಳೇ ಇರಬೇಕೆಂದೇ? ಇರುವವನೊಬ್ಬ ನಾನು, ನಾನೂ ಸತ್ತುಹೋದರೆ ಒಬ್ಬಳೇ ಆರಾಮದಿಂದಿರಬಹುದೆಂದು ಅವಳ ಆಸೆ ಯಿರಬಹುದು. ಮನಸಿನಲ್ಲಿರುವ ಮಾತು ಬಾಯಲ್ಲಿ ಬಂದೇ ಬರುವುದು; ಅದನ್ನು ಅಡಗಿಸುವುದು ಕಷ್ಟ. ಈಗ ಕೆಲವು ದಿನಗಳಿಂದ ನಾನೂ ನೋಡು ತ್ತಿರುವೆನು; ಇದೇ ರೀತಿ ಒಂದಲ್ಲ ಒಂದು ಕಟು—ವಾಕ್ಯವನ್ನಾಡುತ್ತಲೇ ಇರು ವಳು. ತವರುಮನೆಯ ಹೆಮ್ಮೆಯಿರಬಹುದು; ಆದರೆ ಅಲ್ಲೂ ಅವಳನ್ನು ಕೇಳುವವರಾರೂ ಇಲ್ಲ. ಒಂದು ಸಲ ಹೋಗಿ ತಲೆ ತಾಕಿದರೆ ನಂತರ ಬುದ್ಧಿ ಬರುವುದು. ಕಣ್ಣೀರ್ಗರೆಯುತ್ತ ಹಿಂತಿರುಗುವಳು. ಅದೆಷ್ಟು ಅಹಂಕಾರ? ಇವಳಿಂದಲೇ ಈ ಸಂಸಾರ ನಡೆಯುತ್ತಿರುವುದೆಂದು ತಿಳಿದಿರುವಳು! ನಾಲ್ಕು ದಿನ ಎಲ್ಲಾದರೂ ಹೇಳದೆ—ಕೇಳದೆ ಹೊರಟುಹೋದೆನಾದರೆ, ಆಗ ಇವಳ ಅಹಂಕಾರವೆಲ್ಲ ಅಡಗಿಹೋಗುವುದು. ಒಂದ್ಸಾವರ್ತಿ ಇವಳ ಈ ಗರ್ವವನ್ನು

ಮುರಿಯಲೇ ಬೇಕು; ವೈಧವ್ಯದ ರುಚಿಯನ್ನೂ ಸ್ವಲ್ಪ ತೋರಿಸಿಯೇ ಬಿಡು ವೆನು! ಎಷ್ಟು ಧೈರ್ಯ ಇವಳಿಗೆ? ನನ್ನನ್ನೇ ಅಂದು-ಆಡುವಳು! ಪ್ರೇಮ ವೆಂಬುದು ಇವಳ ಸಮೀಪದಲ್ಲಿ ಸಹ ಸುಳಿಯಲಿಲ್ಲವೆಂದು ತೋರುವುದು. ಅಥವಾ ಇವಳು ಅಂದದ್ದನ್ನೆಲ್ಲಾ ಅನಿಸಿಕೊಂಡು ಇಲ್ಲೇ ಇರುವೆನು, ಈ ಮನೆಯನ್ನು ಬಿಟ್ಟು ಹೋಗಲಾರೆನೆಂದು ತಿಳಿದಿರುವಳೋ? ಇಂತಹ ಜಗಳ ಗಂಟಿ ಹೆಂಗಸಿನ ಸಹವಾಸ ಜನ್ಮಜನ್ಮಾಂತರಕ್ಕೂ ಬೇಡ! ಇದೇನು ಮನೆಯೋ ನರಕವೋ? ಗಂಡಸಾದವನು ಹೊರಗಿನ ಕೆಲಸದಿಂದ ಆಯಾಸ ಗೊಂಡು ಮನೆಗೆ ಬಂದರೆ, ಅಲ್ಲಿ ಅವನ ಶರೀರಕ್ಕೆ ವಿಶ್ರಾಂತಿ ಮತ್ತು ಮನಸಿಗೆ ಶಾಂತಿ ದೊರಕುವುದು ಆದರೆ ಈ ಮನೆಯಲ್ಲಿ ಎಲ್ಲವೂ ವಿರುದ್ಧವಾಗಿದೆ ಬಂದೊಡನೆ ಜಗಳ-ಜೈಗಳು. ಸದಾ ನನ್ನ ಸಾವನ್ನೇ ಕೋರುತ್ತಿರುವಳು. ಇದೇ ಇಪ್ಪತ್ತೈದು ವರ್ಷದ ದಾಂಪತ್ಯಜೀವನದ ಫಲ! ಆಹಾ!! ಆಗಲಿ, ಈ ಬಾರಿ ಇವಳ ಹೆಮ್ಮೆಯನ್ನು ಅಡಗಿಸಿಯೇ ಅಡಗಿಸುವೆನು! ಮನೆ ಬಿಟ್ಟು ಹೊರಟು ಹೋಗುವೆನು; ಇವಳ ಗರ್ವವೆಲ್ಲಾ ಮುರಿದ ನಂತರ ಹಿಂತಿರುಗು ವೆನು. ನಾಲ್ಕಾರು ದಿನಗಳಲ್ಲಿ ಸರಿಯಾದ ದಾರಿಗೆ ಬರುವಳು—ಎಂದು ಯೋಚಿಸುತ್ತ ಉದಯಭಾನು ಬಾಬುಗಳು ಮೇಲಕ್ಕೆದ್ದರು. ತಮ್ಮ ರೇಶ್ಮೆಯ ವಸ್ತ್ರವನ್ನು ಹೊದೆದು ಕೈಯಲ್ಲಿ ಸ್ವಲ್ಪ ಹಣವನ್ನು ತೆಗೆದುಕೊಂಡರು. ತಮ್ಮ ಹೆಸರಿನ ಕಾರ್ಡನ್ನು (Visiting Card) ಇನ್ನೊಂದು ಷರಟಿನ ಜೇಬಿನ ಲ್ಲಿಟ್ಟುಕೊಂಡರು. ಮತ್ತು ಬೆತ್ತವನ್ನು ಕೈಯಲ್ಲಿ ಹಿಡಿದು ಶಬ್ದ ಮಾಡದೆ ಮನೆಯಿಂದ ಹೊರಬಿದ್ದರು. ನೌಕರರೆಲ್ಲರೂ ನಿದ್ರೆಯಲ್ಲಿ ಮಗ್ನರಾಗಿದ್ದರು. ಆದರೆ ಅವರ ನಾಯಿಯು ಪಾತ್ರ ಶಬ್ದವನ್ನು ಕೇಳಿ ಎಚ್ಚೆತ್ತು, ಅವರನ್ನು ಹಿಂಬಾಲಿಸಿತು.

ಆದರೆ ವಿಧಿ-ಲೀಲೆಯನ್ನು ಬಲ್ಲವರಾರು? ಜೀವನವೆಂಬ ರಂಗಸ್ಥಳದ ಈ ನಿರ್ದಯ ಸೂತ್ರಧಾರನು ಅದಾವುದೋ ಅಗಮ್ಯ ಗುಪ್ತ ಸ್ಥಾನದಲ್ಲಿ ಕುಳಿತು ತನ್ನ ಕ್ರೂರದೃಷ್ಟಿಯನ್ನು ಬೀರುತ್ತಿದ್ದನು. ನಕಲು ಅಸಲಾಗುವುದೆಂದೂ ಅಭಿನಯವು ಸತ್ಯದ ರೂಪವನ್ನು ಧರಿಸುವುದೆಂದೂ ಯಾರು ತಿಳಿದಿದ್ದರು?

ಚಂದಿರನ ಚಂದ್ರಿಕೆಯನ್ನು ಮರೆಮಾಡಿ, ನಿಶಾದೇವಿಯು ಸುತ್ತಲೂ ತನ್ನ ಸಾಮ್ರಾಜ್ಯವನ್ನೇ ಸ್ಥಾಪಿಸಿಕೊಂಡಿದ್ದಳು. ಅವಳ ಪೈಶಾಚಿಕ-ಸೈನ್ಯವು

ಪ್ರಕೃತಿಯನ್ನಾವರಿಸಿಕೊಂಡಿತ್ತು. ಸದ್ವೃತ್ತಿಗಳು ಮುಖವನ್ನು ಮರೆಮಾಡಿಕೊಂಡು ಮಲಗಿದ್ದುವು; ಎಲ್ಲೆಲ್ಲೂ ಕುವೃತ್ತಿಗಳೇ ತಮ್ಮ ಹೆಮ್ಮೆಯನ್ನು ತೋರುತ್ತ ತಿರುಗಾಡುತ್ತಲಿದ್ದುವು. ಕಾಡಿನಲ್ಲಿ ಕ್ರೂರ ಮೃಗಗಳು ಶಿಕಾರಿಗಾಗಿ ಹೊರಟಿದ್ದುವು; ನಗರದಲ್ಲಿ ನರ–ಪಿಶಾಚಿಗಳು ಗಲ್ಲಿ–ಗಲ್ಲಿಗಳಲ್ಲಿಯೂ ಓಡಾಡುತ್ತಿದ್ದುವು.

ಬಾಬೂ ಉದಯಭಾನುಲಾಲರು ಗಂಗೆಯ ಕಡೆಗೆ ಹೊರಟಿದ್ದರು. ಜೇಬಿನಲ್ಲಿ ತಮ್ಮ ಹೆಸರಿನ ಕಾರ್ಡಿದ್ದ ಷರಟನ್ನು ಗಂಗೆಯ ತೀರದಲ್ಲಿಟ್ಟು, ತಾವು ನಾಲ್ಕೈದು ದಿನ ಮಿರ್ಜಾಪುರಕ್ಕೆ ಹೊರಟುಹೋಗುವುದೆಂದು ಅವರು ನಿಶ್ಚಯಿಸಿದ್ದರು. ಬೆಳಗಾಗುತ್ತಲೇ ಸ್ನಾನಕ್ಕಾಗಿ ಬರುವ ಜನರು ತೀರದಲ್ಲಿರುವ ಈ ಷರಟನ್ನು ನೋಡಿ, ನಂತರ ಇದರ ಜೇಬಿನಲ್ಲಿರುವ ಕಾರ್ಡನ್ನು ನೋಡುವರು. ಬಹುಶಃ ಈ ಹೆಸರಿನ ವ್ಯಕ್ತಿಯು ಸ್ನಾನಕ್ಕಾಗಿ ಬಂದು, ಮುಳುಗಿ ಸತ್ತುಹೋಗಿರಬೇಕೆಂದು ಊಹಿಸುವರು. ನಂತರ ನಗರದಲ್ಲೆಲ್ಲಾ ಸಮಾಚಾರವು ಹಬ್ಬಿ, ಸ್ವಲ್ಪ ಹೊತ್ತಿನಲ್ಲೇ ಮನೆಗೂ ಸಮಾಚಾರವು ಮುಟ್ಟುವುದು. ನಗರದ ಜನರೆಲ್ಲರೂ ನನ್ನ ಈ ಆಕಸ್ಮಿಕ ಮರಣಕ್ಕಾಗಿ ದುಃಖವನ್ನು ವ್ಯಕ್ತಪಡಿಸುತ್ತ, ಮನೆಸುತ್ತ ಸುತ್ತಿಕೊಳ್ಳುವರು. ಆಗ ನನ್ನ ದೇವಿ ಏನು ಮಾಡುವಳೋ ನೋಡುವೆನು!—ಎಂದು ಯೋಚಿಸುತ್ತ ಉದಯಭಾನುಲಾಲರು ಗಲ್ಲಿ–ಗಲ್ಲಿಗಳಲ್ಲೇ ಬೇಗಬೇಗನೆ ಮುಂದುವರಿಯುತ್ತಿದ್ದರು. ಇದ್ದಕ್ಕಿದ್ದಂತೆ ಅವರಿಗೆ ಯಾರೋ ತಮ್ಮನ್ನು ಹಿಂಬಾಲಿಸುತ್ತಿರುವಂತೆ ತೋರಿತು. ತನ್ನಂತೆಯೇ ಮತ್ತಾರೋ ಹೋಗುತ್ತಿರಬಹುದೆಂದು ಯೋಚಿಸಿ, ಹಿಂತಿರುಗಿ ನೋಡದೆಯೇ ಮುಂದುವರಿಯುತ್ತಿದ್ದರು. ಆದರೆ, ಇವರು ಯಾವ ಗಲ್ಲಿಗೆ ತಿರುಗುವರೋ ಅದೇ ಗಲ್ಲಿಗೆ ಆ ವ್ಯಕ್ತಿಯೂ ತಿರುಗುತ್ತಿದ್ದನು. ಆಗ ಆ ವ್ಯಕ್ತಿಯು ತನ್ನನ್ನೇ ಹಿಂಬಾಲಿಸುತ್ತಿರುವನೆಂದು ಬಾಬೂ ಸಾಹೇಬರಿಗೆ ಸ್ವಲ್ಪ ಸಂಶಯವಾಯಿತು. ಒಡನೆಯೇ ಅವರು ತಮ್ಮ ಕಿಸೆಯಲ್ಲಿದ್ದ ದೀಪವನ್ನು ಹಿಡಿದು, ಆ ಮನುಷ್ಯನ ಮುಖವನ್ನು ನೋಡಿದರು. ಓರ್ವ ಬಲಿಷ್ಠ ಮನುಷ್ಯನು ಹೆಗಲ ಮೇಲೆ ಲಾಠಿಯನ್ನಿರಿಸಿಕೊಂಡು ತಮ್ಮ ಕಡೆಗೇ ಬರುತ್ತಿದ್ದನು. ಹತ್ತಿರ ಬಂದಾಗ ಉದಯಭಾನುಬಾಬುಗಳು ಹೆದರಿದರು. ಅವನು ನಗರದ ಪ್ರಮುಖ ಕೇಡಿಗಳಲ್ಲೊಬ್ಬನಾಗಿದ್ದ. ಮೂರು ವರ್ಷಗಳ ಹಿಂದೆ ಭಾರಿಯ

ದರೋಡೆ ಮಾಡಿದನೆಂಬ ಆಪಾದನೆಯ ಮೇಲೆ ಅವನನ್ನು ದಸ್ತಗಿರಿ ಮಾಡ ಲಾಗಿತ್ತು ಆಗ ಉದಯಭಾನುಬಾಬುಗಳು ಸರ್ಕಾರದ ಪರವಾಗಿ ವಕಾಲತ್ತು ವಹಿಸಿ, ಆ ಕೇಡಿಗೆ ಮೂರು ವರ್ಷ ಕಠಿಣ ಶಿಕ್ಷೆಯನ್ನು ವಿಧಿಸಿದ್ದರು. ಆಗಿ ನಿಂದಲೂ ಅವನ ಮನಸ್ಸಿನಲ್ಲಿ ವಕೀಲಬಾಬುಗಳನ್ನು ಖೂನಿ ಮಾಡಬೇಕೆಂಬ ಹಟವಿತ್ತು. ಹಿಂದಿನ ದಿವಸ ತಾನೇ ಅವನು ಜೈಲಿನಿಂದ ಬಿಡುಗಡೆಯಾಗಿ ಬಂದಿದ್ದ. ಇಂದು, ಈ ಅರ್ಧ ರಾತ್ರಿಯ ಕತ್ತಲಿನಲ್ಲಿ ವಕೀಲಬಾಬುಗಳು ಒಬ್ಬರೇ ಸಿಕ್ಕಿದ್ದನ್ನು ಕಂಡು ಅವನಿಗ ಅತ್ಯಂತ ಆನಂದವೆನಿಸಿತು. ತನ್ನ ಸೇಡನ್ನು ತೀರಿಸಿಕೊಳ್ಳುವ ಸುಸಮಯವು ಸಿಕ್ಕಿತೆಂದು ಅವನು ಯೋಚಿಸಿದ. ಕೂಡಲೇ ಅವರನ್ನು ಸಮೀಪಿಸಿ, ಲಾಠಿಯನ್ನು ಪ್ರಹರಿಸಬೇಕೆಂದು ಕೈಯೆತ್ತಿ ದೊಡನೆಯೇ ಬಾಬುಗಳು ತಮ್ಮ ಜೇಬಿನಲ್ಲಿದ್ದ ದೀಪವನ್ನು ಅವನ ಮುಖಕ್ಕೆ ಹಿಡಿದರು. ಕೇಡಿಯು ಸ್ವಲ್ಪ ಸರಿದು ನಿಂತು ನುಡಿದನು – ಬಾಬೂಸಾಹೇಬರೇ! ನನ್ನ ಗುರುತು ಸಿಕ್ಕಿತೇ ? ನಾನು ಮತಯಿ !

ವಕೀಲಬಾಬುಗಳು ಗರ್ಜಿಸಿ ನುಡಿದರು—ನೀನು ನನ್ನನ್ನೇಕೆ ಹಿಂಬಾಲಿ ಸುತ್ತಿರುವೆ ?

ಮತಯಿ—ರಸ್ತೆಯಲ್ಲಿ ತಿರುಗಾಡುವುದಕ್ಕೆ ಯಾರ ಅಡ್ಡಿಯೇನು ? ಈ ಗಲ್ಲಿಯು ನಿಮ್ಮಪ್ಪನದೇ ?

ಉದಯಭಾನುಬಾಬುಗಳು ಯೌವನಸ್ಥರಾಗಿದ್ದಾಗ ಕುಸ್ತಿಯಾಡಿ ಅಭ್ಯಾಸವಿದ್ದವರು. ಈಗಲೂ ಪುಷ್ಟಕಾಯರಾಗಿದ್ದರು; ಅಲ್ಲದೆ ಧೈರ್ಯಶಾಲಿ ಗಳೂ ಆಗಿದ್ದರು. ಕೈಯಲ್ಲಿದ್ದ ಬೆತ್ತವನ್ನು ತಿರುಗಿಸುತ್ತ ನುಡಿದರು— ಕಾರಾಗ್ರಹವಾಸವು ಇನ್ನೂ ಸಾಕಾಗಿಲ್ಲವೆಂದು ಕಾಣುತ್ತದೆ ಈ ಬಾರಿ ಏಳು ವರ್ಷಗಳ ಸಜಾ ಅನುಭವಿಸಬೇಕಾದೀತು, ಜೋಕೆ !

ಮತಯಿ—ಏಳು ವರ್ಷಗಳ ಸಜಾ ಆದರೂ ಸರಿಯೆ, ಹದಿನಾಲ್ಕು ವರ್ಷಗಳ ಶಿಕ್ಷೆ ವಿಧಿಸಿದರೂ ಸರಿಯೆ; ನಿಮ್ಮನ್ನು ಮಾತ್ರ ಎಂದಿಗೂ ಜೀವ ಸಹಿತ ಬಿಡಲಾರೆ! ಇನ್ನು ಮುಂದೆ ಯಾರಿಗೂ ಶಿಕ್ಷೆ ವಿಧಿಸುವುದಿಲ್ಲವೆಂದು ಪ್ರಮಾಣ ಮಾಡಿ, ನನ್ನ ಕಾಲುಗಳಿಗೆ ನಮಸ್ಕರಿಸಿ ಕೇಳಿಕೊಂಡರಾದರೆ ಬಿಟ್ಟು ಬಿಡುವೆನು ! ಸಮ್ಮತವೋ ?

ಉದಯಭಾನು—ನಿನ್ನ ಮೃತ್ಯುಕಾಲವು ಸಮೀಪಿಸಿದೆಯೋ ಹೇಗೆ ?

ಮತಯಿ—ನನ್ನ ಮೃತ್ಯುಕಾಲವು ಸಮೀಪಿಸಿಲ್ಲ; ನಿಮ್ಮ ಮರಣಕಾಲವು ಸಮೀಪಿಸಿರುವಂತೆ ತೋರುತ್ತದೆ ಪ್ರಮಾಣ ಮಾಡುವಿರಾ, ಹೇಳಿ! ಒಂದು....!

ಉದಯಭಾನು—ದುಷ್ಟ! ನೀನು ದೂರ ಸರಿಯುವಿಯಾ? ಇಲ್ಲವೇ ಪೋಲೀಸಿನವರನ್ನು ಕರೆಯಲೇ?

ಮತಯಿ—ಎರಡು....!

ಉದಯಭಾನು—ದೂರ ಸರಿ, ದುಷ್ಟ!

ಮತಯಿ—ಮೂ....ರು!

ಮೂರೆನ್ನುವ ಶಬ್ದವು ಮುಕ್ತಾಯವಾಗುವಷ್ಟರಲ್ಲೇ ಬಾಬೂ ಸಾಹೇಬರ ತಲೆಯ ಮೇಲೆ ಬಹು ಬಲವಾದ ಲಾಠಿಯ ಪೆಟ್ಟು ಬಿತ್ತು. ಅವರು ಪ್ರಜ್ಞೆ ತಪ್ಪಿ ಕೆಳಕ್ಕುರುಳಿದರು. 'ಅಯ್ಯೋ! ಕೊಂದುಬಿಟ್ಟನು!' ಎಂಬಷ್ಟು ಮಾತುಗಳು ಮಾತ್ರ ಅವರ ಬಾಯಿಂದ ಹೊರಬಿದ್ದುವು. ಮತಯಿಯು ಸಮೀಪಕ್ಕೆ ಸರಿದು ನೋಡಲಾಗಿ ತಲೆಯೊಡೆದುಹೋಗಿತ್ತು; ರಕ್ತವು ಧಾರಾಕಾರವಾಗಿ ಪ್ರವಹಿಸುತ್ತಿತ್ತು. ನಾಡಿಯು ನಿಂತುಹೋಗಿತ್ತು. ಇನ್ನಿವರ ಕಾರ್ಯವು ಸಮಾಪ್ತವಾಯಿತೆಂದು ಮತಯಿಯು ಮನಗಂಡನು. ಕೈಯಲ್ಲಿದ್ದ ಚಿನ್ನದ ಗಡಿಯಾರವನ್ನೂ, ಷರಟಿನಲ್ಲಿದ್ದ ಚಿನ್ನದ ಗುಂಡಿಗಳನ್ನೂ ಮತ್ತು ಕೈಬೆರಳಿನಲ್ಲಿದ್ದ ವಜ್ರದುಂಗುರವನ್ನೂ ಕಳಚಿಕೊಂಡು, ತನ್ನ ಹಾದಿಯನ್ನು ಹಿಡಿದನು. ಶವವನ್ನು ಮಾತ್ರ ಹಾದಿಯ ಒತ್ತಟ್ಟಿಗೆಳೆದು, ಏನೂ ಅರಿಯದವನಂತೆ ಮುಂದೆ ನಡೆದನು.

ಆಹಾ! ಏನೋ ಯೋಚಿಸಿಕೊಂಡು ಹೊರಟ ವ್ಯಕ್ತಿಗೆ ಏನಾಯಿತು? ಎಲೆ ಜೀವವೇ, ನಿನಗಿಂತ ನಿಸ್ಸಾರವಾದ ವಸ್ತು ಈ ಪ್ರಪಂಚದಲ್ಲಿ ಇನ್ನಾವುದುಂಟು? ಗಾಳಿಯ ಅಲೆಯೊಂದಕ್ಕೆ ಆರಿಹೋಗುವ ದೀಪದಂತೆ ಕ್ಷಣಭಂಗುರವಲ್ಲವೇ? ನೀರ ಮೇಲಿನ ಗುಳ್ಳೆಯಂತೆ ನಿಸ್ಸಾರ ಹಾಗೂ ಕ್ಷಣಿಕ ನೀನು! ನಿನ್ನ ನಂಬಿ ಜನರು ಆಸೆಯ ಕೋಟೆಗಳನ್ನು ಕಟ್ಟುವರು! ಮೃತ್ಯುವಿನ ಮಾತನ್ನೇ ಮರೆತು ತಾವು ಅಮರರೆಂದು ಭಾವಿಸುವರು! ಆಹಾ!!

## ಮೂರನೆಯ ಪರಿಚ್ಛೇದ

ವಿಧವೆಯ ವಿಲಾಪವನ್ನೂ, ಅನಾಥರ ಅಳುವನ್ನೂ ಬಣ್ಣಿಸಿ ನಾವು ಪಾತಕರ ಮನಸನ್ನು ನೋಯಿಸಲಿಚ್ಛಿಸುವುದಿಲ್ಲ. ತಾನೇ ತನ್ನ ಪತಿಯು

ಪ್ರಾಣಘಾತಕಿಯಾದೆನಲ್ಲಾ—ಎಂಬ ಯೋಚನೆಯು ಕಲ್ಯಾಣಿಯ ಮನಸಿಗೆ ಬಹಳ ಯಾತನೆಯನ್ನುಂಟುಮಾಡುತ್ತಿತ್ತು. ಕ್ರೋಧದ ಭರದಲ್ಲಿ ತನ್ನ ಬಾಯಿಂದ ಹೊರಬಿದ್ದ ಆ ಕಟುವಾಕ್ಯಗಳು ಈಗವಳ ಹೃದಯವನ್ನು ಬಿರು-ಬಾಣಗಳಂತೆ ಇರಿಯುತ್ತಿದ್ದುವು ಕೊನೆಗಾಲದಲ್ಲಿ ತನ್ನ ಪತಿಯು ನರಳುತ್ತಲಾದರೂ ತನ್ನ ತೊಡೆಯ ಮೇಲೆ ಪ್ರಾಣ ತ್ಯಜಿಸಿದ್ದರೆ ಕಲ್ಯಾಣಿಯ ಮನಸಿಗೆಷ್ಟೋ ಸಮಾಧಾನವಾಗುತ್ತಿತ್ತು; ತನ್ನ ಕರ್ತವ್ಯವನ್ನು ಮಾಡಿದೆನೆಂಬಷ್ಟಾದರೂ ಸಾಂತ್ವನೆ ಇರುತ್ತಿತ್ತು! ಆದರೆ ಅವಳ ಪಾಲಿಗೆ ಅದೂ ಪ್ರಾಪ್ತಿಯಿಲ್ಲದಾಯಿತು! 'ಆಹಾ! ನನ್ನ ಇಪ್ಪತ್ತೈದು ವರ್ಷದ ತಪಸ್ಯೆಯೂ ನಿಷ್ಫಲವಾಯಿತೇ? ಅಂತ್ಯಕಾಲದಲ್ಲಿ ನಾನು ಪತಿ-ಪ್ರೇಮದಿಂದ ವಂಚಿತಳಾದೆನಲ್ಲಾ! ಅಂದು ನಾನು ಅಂತಹ ಕಟುವಾಕ್ಯಗಳನ್ನಾಡದಿದ್ದರೆ ಆ ಅರ್ಧ ರಾತ್ರಿಯಲ್ಲಿ ಅವರು ಮನೆ ಬಿಟ್ಟಾದರೂ ಹೋಗುತ್ತಿದ್ದರೇಕೆ?' ಎಂದು ಮುಂತಾಗಿ ತನ್ನ ತಪ್ಪುಗಳನ್ನೇ ಸ್ಮರಿಸಿಕೊಳ್ಳುತ್ತ ಸದಾಕಾಲವೂ ಕೊರಗುತ್ತಿದ್ದಳು. ಪ್ರಾಣಕ್ಕಿಂತ ಪ್ರಿಯವಾಗಿ ಕಾಣುತ್ತಿದ್ದ ಮಕ್ಕಳು ಸಹ ಈಗವಳಿಗೆ ಬೇಡವಾಗಿತ್ತು. ಈ ಮಕ್ಕಳಿಗೋಸ್ಕರವಲ್ಲವೇ ನಾನು ಪ್ರಾಣಪತಿಯ ಮನಸನ್ನು ಕೆಡಿಸಬೇಕಾಯಿತು? ಇವರೇ ನನ್ನ ಶತ್ರುಗಳು!—ಎಂದುಕೊಳ್ಳುತ್ತಿದ್ದಳು ಒಮ್ಮೊಮ್ಮೆ. ಸದಾಕಾಲವೂ ಕಕ್ಷಿಗಾರರಿಂದ ತುಂಬಿರುತ್ತಿದ್ದ ಆಫೀಸ್ ಕೊಠಡಿಯು ಈಗ ಕೇಳುವವರೇ ದಿಕ್ಕಿಲ್ಲದಂತಾಗಿತ್ತು ನೆಂಟರಿಷ್ಟರೆಲ್ಲರೂ ದಿನೇ ದಿನೇ ದೂರವಾಗುತ್ತ ಬಂದರು. ಉದಯಭಾನು ಬಾಬುಗಳಿಗಾಗಿ ತಮ್ಮ ಪ್ರಾಣವನ್ನು ಸಹ ತೆರಲು ಸಿದ್ಧರಿರುವೆವೆಂದು ಹೆಮ್ಮೆ ಹೇಳಿಕೊಳ್ಳುತ್ತಿದ್ದವರೆಲ್ಲರೂ ಈಗ ಹೇಳದೆ ಕೇಳದೆ ಮನೆಬಿಟ್ಟು ಹೊರಟರು ಮುದ್ದು-ಮುದ್ದಾಗಿದ್ದ ಮಕ್ಕಳ ಮುಖದ ಮೇಲಿನ ಕಾಂತಿಯೇ ಮಾಯವಾಯಿತು!

ಪತಿವಿಯೋಗದ ವ್ಯಥೆಯು ತುಸು ಕಡಿಮೆಯಾಗುವಷ್ಟರಲ್ಲೇ ಮಗಳ ಮದುವೆಯ ಚಿಂತೆಯು ಮುಂದಿಟ್ಟಿತು ಈ ವರ್ಷ ಮಗುವೆಯನ್ನು ನಿಲ್ಲಿಸಿಬಿಡುವುದೆಂದು ಹಲ-ಕೆಲವರು ಸಲಹೆಯಿತ್ತರು. ಆದರೆ ಕಲ್ಯಾಣಿಯು ಅದಕ್ಕೊಪ್ಪಲಿಲ್ಲ ಇಷ್ಟೆಲ್ಲ ಸಿದ್ಧತೆಗಳನ್ನು ಮಾಡಿಕೊಂಡು, ಮದುವೆಯನ್ನು ನಿಲ್ಲಿಸಿಬಿಟ್ಟರೆ ಮಾಡಿದುದೆಲ್ಲವೂ ಮಣ್ಣುಪಾಲಾಗುವುದು. ಅಲ್ಲದೆ ಮದುವೆಯನ್ನು ಮುಂದುವರಿಸಿದರೆ ಮುಂದಿನ ವರ್ಷಕ್ಕೆ ಇಷ್ಟೆಲ್ಲ ಸಿದ್ಧತೆಗಳನ್ನು

ಮಾಡಿಕೊಳ್ಳುವುದು ಸಾಧ್ಯವಿಲ್ಲದ ಮಾತಾಗಿತ್ತು. ಅಲ್ಲದೆ ವರದಕ್ಷಿಣೆ ಮುಂತಾದ ಯಾವ ತೊಂದರೆಗಳೂ ಇರಲಿಲ್ಲ. ಬೀಗರ ಮರ್ಯಾದೆ, ಆದರ-ಸತ್ಕಾರಗಳಿಗೆ ಸಾಕಷ್ಟು ಸಿದ್ಧತೆಯು ನಡೆದಿತ್ತು. ಆದ್ದರಿಂದ ಈ ವರ್ಷವೇ ಮದುವೆಯನ್ನು ಮಾಡಿಬಿಡುವುದು ಉತ್ತಮವೆಂದು ಕಲ್ಯಾಣಿಯು ನಿರ್ಧರಿಸಿದಳು; ಮತ್ತು ಭಾಲಚಂದ್ರ ಬಾಬುಗಳಿಗೆ ಶೋಕ ಸೂಚನೆಯೊಡನೆ ಈ ಕೆಳ ಕಂಡ ಸಂದೇಶವನ್ನು ಕಳುಹಿಸಿಕೊಟ್ಟಳು – 'ಈ ಅನಾಥೆಯ ಮೇಲೆ ಕೃಪೆಗೈದು ಕಾಪಾಡಬೇಕು. ಪತಿದೇವರ ಮನಸ್ಸಿನಲ್ಲಿ ಏನೇನೋ ಆಸೆ-ಆಕಾಂಕ್ಷೆಗಳಿದ್ದವು; ಆದರೆ ಆ ಭಗವಂತನ ಇಚ್ಛೆಯೇ ಬೇರೆಯಾಗಿತ್ತು. ಈಗ ನನ್ನ ಮರ್ಯಾದೆಯನ್ನು ಕಾಪಾಡುವ ಭಾರ ತಮ್ಮ ಕೈಯಲ್ಲಿದೆ. ಕನ್ಯೆಯನ್ನು ತಮ್ಮಗಳಿಗೊಪ್ಪಿಸಿರುತ್ತೇನೆ. ನಿಮ್ಮಗಳ ಆದರ-ಸತ್ಕಾರ ಮಾಡುವ ಸುಸಮಯವು ದೊರೆತುದು ನನ್ನ ಸೌಭಾಗ್ಯವೆಂದೆಣಿಸುತ್ತೇನೆ. ಆದರೆ ಅದರಲ್ಲಿ ಯಾವುದೇ ಪರಿಯ ಲೋಪ-ದೋಷಗಳಿದ್ದರೂ ಅದನ್ನು ಮನಸಿಗೆ ತಂದುಕೊಳ್ಳದೆ ಕ್ಷಮಿಸಬೇಕಾಗಿ ಪ್ರಾರ್ಥಿಸುತ್ತೇನೆ. ಅನಾಥೆಯ ಈ ಪ್ರಾರ್ಥನೆಗೆ ಕಿವಿಗೊಟ್ಟು ಕಾಪಾಡುವಿರೆಂದು ಆಶಿಸುತ್ತೇನೆ.'

ಕಲ್ಯಾಣಿಯು ಈ ಪತ್ರವನ್ನು ಟಪಾಲಿನ ಮೂಲಕ ಕಳುಹಿಸಲಿಲ್ಲ. ಪುರೋಹಿತನನ್ನು ಕರೆಸಿ ಹೇಳಿದಳು—'ನೀವೇ ಹೋಗಿ ಖುದ್ದಾಗಿ ಈ ಪತ್ರವನ್ನು ತಲುಪಿಸಿ ಬನ್ನಿ. ಇದಕ್ಕಾಗಿ ನಿಮಗೆ ತೊಂದರೆಯಾಗುವುದೇನೋ ದಿಟ; ಆದರೆ ಅದನ್ನು ಮನಸಿಗೆ ತಂದುಕೊಳ್ಳಬಾರದೆಂದು ಕೇಳಿಕೊಳ್ಳುತ್ತೇನೆ. ಅತ್ಯಂತ ವಿನಯದಿಂದ ಭಾಲಚಂದ್ರ ಬಾಬುಗಳಿಗೆ ಇಲ್ಲಿನ ಕಷ್ಟ ಪರಿಸ್ಥಿತಿಯನ್ನು ವಿವರಿಸಿ, ಇಲ್ಲಿ ವ್ಯವಸ್ಥೆಯನ್ನು ಮಾಡುವವರಾರೂ ಇಲ್ಲದಿರುವುದರಿಂದ ಮದುವೆಗೆ ಬೀಗರ ಪರವಾಗಿ ಎಷ್ಟು ಕಡಿಮೆ ಜನರು ಬಂದರೆ ಅಷ್ಟು ಉತ್ತಮವೆಂದು ತಿಳಿಸಿ' ಎಂದಳು.

ಪುರೋಹಿತ ಮೋಟಾರಾಮರು ಈ ಸಂದೇಶದೊಡನೆ ಮೂರನೆಯ ದಿನವೇ ಲಕ್ನೋವನ್ನು ತಲುಪಿದರು

ಸಾಯಂಕಾಲದ ಸಮಯ. ಭಾಲಚಂದ್ರ ಬಾಬುಗಳು ದಿವಾನ್-ಖಾನೆಯಲ್ಲಿ ಆರಾಮ ಕುರ್ಚಿಯ ಮೇಲೆ ಒರಗಿಕೊಂಡು ಹುಕ್ಕಾ ಸೇದುತ್ತಿದ್ದರು. ಎತ್ತರವಾದ ಸ್ಥೂಲಾಕಾರದ ಮನುಷ್ಯರು. ಬಣ್ಣವಂತೂ ಕಾಳ-ದೇವನೆಂದೇ

ಹೇಳಬಹುದು; ಅಥವಾ ಆಫ್ರಿಕಾದಿಂದ ಹಿಡಿದುತಂದ ನಿಗ್ರೋ ಮನುಷ್ಯ ನೆನ್ನಬಹುದು ಮುಖದ ತುದಿಯಾವುದು ತಲೆಯ ಆರಂಭವಾವುದು ಎಂಬು ದನ್ನೂ ಸಹ ಹೇಳಲು ಸಾಧ್ಯವಿಲ್ಲದಾಗಿತ್ತು. ಸ್ಥೂಲ–ಶರೀರವಾದ್ದರಿಂದ ಅವರಿಗೆ ಸೆಕೆಯನ್ನು ತಡೆಯಲು ಅಸಾಧ್ಯವಾಗಿತ್ತು. ಇಬ್ಬರು ಆಳುಗಳು ಎರಡೂ ಕಡೆಗಳಲ್ಲಿ ನಿಂತು ಗಾಳಿ ಹಾಕುತ್ತಲಿದ್ದರು ಅಷ್ಟಾದರೂ ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು. ಅವರು ಸೇಂದಿ ಇಲಾಖೆಯಲ್ಲಿ ಭಾರಿ ಉದ್ಯೋಗದಲ್ಲಿದ್ದರು. ಐನೂರು ರೂಪಾಯಿಗಳ ಸಂಬಳ ಸಿಗುತ್ತಿತ್ತು, ಮತ್ತು ಪೂರಾ ಲಂಚವನ್ನು ತಿನ್ನುತ್ತಿದ್ದರು. ಮದ್ಯದ ಹೆಸರಿನಲ್ಲಿ ನೀರನ್ನು ಮಾರಿದರೂ ಸರಿಯೆ, ಇಪ್ಪತ್ತುನಾಲ್ಕು ಗಂಟೆಗಳ ಕಾಲ ಅಂಗಡಿಯನ್ನು ತೆಗೆ ದಿದ್ದರೂ ಸರಿಯೆ, ಲಂಚ ಸಿಗುವುದೊಂದೇ ಅವರಿಗೆ ಲಕ್ಷ್ಯವಾಗಿತ್ತು. ಕಾನೂ ನೆಲ್ಲಾ ಅವರ ಕೈಯಲ್ಲಿಯೇ ಇತ್ತು. ಪಕ್ಕಾ ಮುಸಲ್ಮಾನನು ದಿನಕ್ಕೆ ಐದು ಬಾರಿ ನಮಾಜ್ ಪಠಿಸುವಂತೆ ಅವರು ದಿನಕ್ಕೆ ಐದು ಬಾರಿ ಮದ್ಯಪಾನ ಮಾಡುತ್ತಿದ್ದರು. ಸೇಂದಿಯ ಇಲಾಖೆಯಲ್ಲಿ ಇದ್ದರಾದ್ದರಿಂದ ಅವರ ಕುಡಿ ತಕ್ಕೆ ಹಿಡಿತ ಕೇಳಬೇಕೆ ? ಬಾಯಾರಿದಂತೆಲ್ಲಾ ಮದ್ಯವನ್ನು ಪಾನಮಾಡು ತ್ತಲೇ ಇದ್ದರು.

ಬಾಬೂ ಸಾಹೇಬರು ಪಂಡಿತಜೀಯವರನ್ನು ಕಂಡಕೂಡಲೇ ಕುರ್ಚಿ ಯಿಂದೆದ್ದು ನುಡಿದರು—ಓಹೋ ! ತಾವೇ ? ದಯಮಾಡಿ, ದಯಮಾಡಿ ! ಎಲೋ ಯಾರದು ಹೊರಗೆ ? ಎಲ್ಲರೂ ಎಲ್ಲಿ ಹೊರಟುಹೋದಿರಿ ? ಗುರು ದೀನಾ, ರಾಮಗುಲಾಮ, ಭವಾನಿ ! ಯಾರೂ ಇಲ್ಲವೇ ? ಎಲ್ಲರೂ ಸತ್ತು ಹೋದಿರಾ ? ಎಲೊ ರಾಮಗುಲಾಮ, ಭವಾನಿ, ಗುರುದೀನಾ ಯಾರೂ ಮಾತನಾಡುವುದಿಲ್ಲ, ಏಕೆ ? ಹತ್ತು ಹನ್ನೆರಡು ಮಂದಿ ಆಳುಗಳಿದ್ದರೂ ಸಮಯಕ್ಕೊಬ್ಬರೂ ಸಿಗುವುದಿಲ್ಲಾ ? ಎಲ್ಲಿ ಹೋದಿರಿ ? ಪಂಡಿತಜೀಯವರಿಗೆ ಕುರ್ಚಿಯನ್ನು ತಂದು ಹಾಕಿ !

ಬಾಬೂ ಸಾಹೇಬರು ಇದೇ ಹೆಸರುಗಳನ್ನು ಅನೇಕ ಬಾರಿ ಕೂಗಿದರೂ ಯಾರೂ ಬರಲಿಲ್ಲ. ಅಷ್ಟಾದರೂ ಅವರು ತಮ್ಮ ಬಳಿಯಲ್ಲೇ ನಿಂತು ಗಾಳಿ ಹಾಕುತ್ತಿದ್ದವರಲ್ಲೊಬ್ಬನನ್ನು ಕುರ್ಚಿ ತರಲು ಕಳುಹಿಸಲಿಲ್ಲ. ನಾಲ್ಕಾರು ನಿಮಿಷಗಳ ನಂತರ ಒಬ್ಬ ವೃದ್ಧ ನೌಕರನು ಕೆಮ್ಮುತ್ತ–ಕೆಮ್ಮುತ್ತ ಅಲ್ಲಿಗೆ

ಬಂದು ಹೇಳಿದನು—ಬಾಬೂಜೀ ! ಈ ನೌಕರಿಯು ನಮ್ಮಿಂದ ಸಾಧ್ಯವಿಲ್ಲ! ನಮ್ಮ ಸಂಬಳವನ್ನು ಸರಿಯಾಗಿ ಸಲ್ಲಿಸದೆ ಹೋದರೆ, ನಾವು ಸಾಲಮಾಡಿ ಎಷ್ಟು ದಿನ ಸುಧಾರಿಸುವುದು ? ಕೇಳಿ-ಕೇಳಿ ಬಾಯೆಲ್ಲಾ ಬೇಸತ್ತಿತು.

ಭಾಲ—ಎಲೋ ! ಸುಮ್ಮನೆ ಬಾಯಾಡಬೇಡ ! ಓಡಿಹೋಗಿ ಕುರ್ಚಿಯನ್ನು ತೆಗೆದುಕೊಂಡು ಬಾ ! ಏನಾದರೂ ಕೆಲಸ ಹೇಳಿದರೆ ಆಗಲೇ ನಿನ್ನ ಅಳುವನ್ನು ತೆಗೆಯುವೆ ? ಪಂಡಿತಜೀ, ಅಲ್ಲಿ ಸಕಲರೂ ಕುಶಲವೇ ?

ಮೋಟಾರಾಮ—ಕುಶಲವೇನೆಂದು ಹೇಳಲಿ, ಬಾಬೂಜೀ ! ಈಗೆಲ್ಲಿಯ ಕುಶಲ ? ಮನೆಯೆಲ್ಲಾ ಮಣ್ಣುಪಾಲಾಯಿತು !

ಅಷ್ಟರಲ್ಲಿ ಆ ವೃದ್ಧ ನೌಕರನು ಒಂದು ಒಡುಕು ಪೆಟ್ಟಿಗೆಯನ್ನು ತಂದು ಕುಕ್ಕರಿಸಿ ಹೇಳಿದನು—ಕುರ್ಚಿಯನ್ನು ಎತ್ತಲು ನಮ್ಮಿಂದ ಸಾಧ್ಯವಿಲ್ಲ, ಬಾಬೂಜೀ !

ಪಂಡಿತಜೀಯವರು ನಾಚುತ್ತ-ನಡುಗುತ್ತ, ಅಂತು ಇಂತು ಆ ಒಡಕು ಪೆಟ್ಟಿಗೆಯ ಮೇಲೆ ಕುಳಿತುಕೊಂಡರು. ಮತ್ತು ಕಲ್ಯಾಣಿಯ ಪತ್ರವನ್ನು ಬಾಬೂಜೀಯವರ ಕೈಗಿತ್ತರು.

ಭಾಲ—ಅಯ್ಯೋ ಪಾಪ ! ಅವರಿಗಿಂತಹ ವಿಪತ್ತಿ ಬಂದೊದಗಿತ್ತೇ ? ಬಾಬೂ ಉದಯಭಾನುಲಾಲರು ನನ್ನ ಪರಮ-ಮಿತ್ರರಾಗಿದ್ದರು; ರತ್ನದಂತಹ ಮನುಷ್ಯರು ! ಎಷ್ಟು ಒಳ್ಳೆಯ ಮನಸ್ಸು, ಎಂತಹ ಧೈರ್ಯ ? (ಕಣ್ಣೀರನ್ನು ಒರೆಸಿಕೊಳ್ಳುತ್ತ) ನನ್ನ ಬಲತೋಳೇ ಮುರಿದು ಹೋದಂತಾಯಿತು. ಈ ಸುದ್ದಿಯನ್ನು ಕೇಳಿದಷ್ಟು ದಿವಸದಿಂದ ಕಣ್ಣುಗಳು ಕತ್ತಲೆ ಕವಿದಂತಾಗಿದೆ. ಊಟಮಾಡಲು ಕುಳಿತರೆ ಒಂದು ತುತ್ತು ಅನ್ನ ಸಹ ಸೇರುವುದಿಲ್ಲ. ಅವರ ಮುಖವೇ ಕಣ್ಣುಗಳಲ್ಲಿ ಕಟ್ಟಿದಂತಾಗಿದೆ. ಯಾವ ಕೆಲಸ ಮಾಡಲೂ ಮನಸ್ಸೇ ಬಾರದು. ಸ್ವಂತ ಸಹೋದರನು ಸತ್ತಿದ್ದಕ್ಕಿಂತ ಹೆಚ್ಚು ದುಃಖವಾಗಿದೆ ! ಎಂತಹ ಚಿನ್ನದಂತಹ ಮನುಷ್ಯ !

ಮೋಟಾರಾಮ—ಆ ಊರಿನಲ್ಲಿ ಇನ್ನು ಅವರಂತಹ ಸತ್ಪುರುಷ ಸಾಹುಕಾರರೇ ಇಲ್ಲದಾದರು, ಬಾಬೂಜೀ !

ಭಾಲ—ನನಗೆಲ್ಲವೂ ಗೊತ್ತು, ಪಂಡಿತಜೀ ! ನಾನರಿಯದ ವಿಷಯವೇ? ಅಂತಹ ಮನುಷ್ಯರು ಸಾವಿರಕ್ಕೊಬ್ಬರು ಸಿಗುವದೂ ದುರ್ಲಭ. ಅವರ

ವಿಷಯವನ್ನು ನಾನರಿತಷ್ಟು ಮತ್ತಾರೂ ಅರಿಯಲಾರರು. ಕೇವಲ ಎರಡು-ಮೂರು ಬಾರಿಯ ಭೇಟಿ ಮಾತ್ರದಿಂದಲೇ ನಾನವರ ಭಕ್ತನಾದೆನು ಈ ದುಃಖ-ಸಂಗತಿಗಾಗಿ ನನ್ನ ಮನಃಪೂರ್ವಕವಾದ ಸಂತಾಪವನ್ನು ಬೀಗಿತ್ತಿಯವರಿಗೆ ತಿಳಿಸಿ

ಮೋಟಾರಾಮ—ಬಾಬೂಜೀ, ನಾವು ತಮ್ಮಿಂದ ಆಶಿಸುತ್ತಿದ್ದುದೂ ಅಷ್ಟೇ! ತಮ್ಮಂತಹ ಸತ್ಪುರುಷರ ದರ್ಶನವು ದುರ್ಲಭ. ಈಗಿನ ಕಾಲದಲ್ಲಿ ತಮ್ಮಂತೆ ವರದಕ್ಷಿಣೆ ಇಲ್ಲದೆ ಪುತ್ರನ ವಿವಾಹ ಮಾಡುವವರಾರು ?

ಭಾಲ—ಪಂಡಿತಜೀ! ಅವರಂತಹ ಸತ್ಯವಾದಿ ಸತ್ಪುರುಷರ ಸಂಗಡ ವರದಕ್ಷಿಣೆಯ ಮಾತನ್ನಾಡುವುದು ಸಹ ಅನುಚಿತ. ಅವರ ಸಂಬಂಧವೇ ನಮಗೆ ಲಕ್ಷಾಂತರ ರೂಪಾಯಿಗಳಿಗಿಂತ ಮಿಗಿಲಾದುದಲ್ಲವೇ? ಅದನ್ನೇ ನಾನು ನನ್ನ ಅಹೋ-ಭಾಗ್ಯವೆಂದು ಭಾವಿಸುವೆನು. ಅಹಾ! ಎಂತಹ ಉದಾರ ಪುರುಷರು? ಧನವನ್ನು ಅವರು ತೃಣಕ್ಕೆ ಸಮಾನವಾಗಿ ಗಣಿಸುತ್ತಿದ್ದರು. ಇದೆಂತಹ ವರದಕ್ಷಿಣೆ ಎಂಬ ಕೆಟ್ಟ ಪದ್ಧತಿ! ನನ್ನ ಕೈ ನಡೆಯುವಂತಿದ್ದರೆ ಈ ವರದಕ್ಷಿಣೆ ಕೊಡುವವರು ಮತ್ತು ತೆಗೆದುಕೊಳ್ಳುವವರಿಬ್ಬರನ್ನೂ ಬಂದೂಕದಿಂದ ಭಸ್ಮ ಮಾಡಿಬಿಡುತ್ತಿದ್ದೆ! ಇದರಿಂದ ನನ್ನನ್ನು ಗಲ್ಲಿಗೇರಿಸಿದರೂ ಚಿಂತೆ ಇರುತ್ತಿಲ್ಲ. ಇದೇನು ವಿವಾಹವೋ, ವರವಿಕ್ರಯವೋ? ಹಾಗೆ ಇಷ್ಟವಿದ್ದರೆ ವಿವಾಹ ಕಾಲದಲ್ಲಿ ಮನಬಂದಷ್ಟು ಹಣ ಖರ್ಚು ಮಾಡಲಿ! ಕನ್ಯೆಯ ಪಿತನನ್ನು ವರದಕ್ಷಿಣೆಗಾಗಿ ಹಿಂಸಿಸುವುದು ಘೋರ ನೀಚತನವಲ್ಲವೇ?

ಮೋಟಾರಾಮ—ತಾವು ಧನ್ಯರು ಬಾಬೂಜೀ! ಭಗವಂತನು ತಮಗೆ ಬಹಳ ಒಳ್ಳೆಯ ಬುದ್ಧಿಯನ್ನು ಇತ್ತಿರುವನು. ಇದೇ ಅಲ್ಲವೇ ಧರ್ಮದ ಪ್ರತಾಪ? ವಿವಾಹದ ಮುಹೂರ್ತವನ್ನು ಅದೇ ದಿವಸಕ್ಕೆ ಇರಿಸಿಕೊಳ್ಳಬೇಕೆಂಬುದು ತಮ್ಮ ಬೀಗಿತ್ತಿಯವರ ಅಪೇಕ್ಷೆಯಾಗಿದೆ. ಬಾಕಿ ಎಲ್ಲ ವಿಷಯಗಳನ್ನೂ ಅವರೇ ಪತ್ರದಲ್ಲಿ ಬರೆದಿರುವರು. ಈಗ ನಮ್ಮನ್ನು ಕಾಪಾಡುವ ಭಾರ ತಮ್ಮ ಕೈಯಲ್ಲಿದೆ. ಬೀಗರ ಕಡೆಯವರ ಸತ್ಕಾರ-ಸನ್ಮಾನಗಳಿಗೆ ಸಾಕಷ್ಟು ಸಿದ್ಧತೆ ಏನೋ ನಡೆದಿದೆ. ಆದರೂ ಈಗಿನ ಪರಿಸ್ಥಿತಿಯು ಬಹಳ ಬದಲಾಯಿಸಿದೆ. ಅಲ್ಲಿ ವ್ಯವಸ್ಥೆ ಮಾಡುವವರಾರೂ ಇಲ್ಲವಾಗಿದೆ. ಆದ್ದರಿಂದ, ವಕೀಲಸಾಹೇಬರ ಹೆಸರಿಗೆ ಕಳಂಕ ಬಾರದಂತೆ ಕಾಪಾಡುವ ಕೆಲಸ ತಮ್ಮ ಕೈಯಲ್ಲಿದೆ!

ಭಾಲಚಂದ್ರ ಬಾಬುಗಳು ಒಂದು ನಿಮಿಷಕಾಲ ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತಿದ್ದರು; ನಂತರ ಒಮ್ಮೆ ನಿಟ್ಟುಸಿರು ಬಿಟ್ಟು ನುಡಿದರು—ಆ ಲಕ್ಷ್ಮಿಯು ನಮ್ಮ ಮನೆಗೆ ಬರುವುದು ಭಗವಂತನಿಗೆ ಇಷ್ಟವಿರಲಿಲ್ಲವೆಂದು ತೋರುವುದು, ಇಲ್ಲದಿದ್ದರೆ ಇಂತಹ ವಿಪತ್ತಿಯು ಏಕೆ ಬಂದೊದಗುತ್ತಿತ್ತು? ನನ್ನ ಆಶೆಗಳೆಲ್ಲವೂ ನಿರಾಶೆಯಾದುವು. ಈ ಶುಭಸಮಯವು ಸಮೀಪಿಸಿದಷ್ಟೂ ನನ್ನ ಸಂತೋಷ–ಸಡಗರಗಳು ಮೇರೆ ಮೀರಿದ್ದುವು; ಆದರೆ ಭಗವಂತನ ಇಚ್ಛೆಯೇ ಬೇರೆ ಇದ್ದಿತೆಂದು ಅರಿತಿದ್ದವರಾರು? ಉದಯಭಾನು ಬಾಬುಗಳ ಸಾವಿನಿಂದಲೇ ನನ್ನ ಮನಸ್ಸಿಗಿಷ್ಟು ಸಂತಾಪ ಉಂಟಾಗಿರುವಾಗ, ಆ ಹುಡುಗಿಯನ್ನು ಮನೆಗೆ ತಂದುಕೊಂಡಲ್ಲಿ, ಅವಳನ್ನು ನೋಡಿ–ನೋಡಿ ಮತ್ತಷ್ಟೂ ನೋವುಂಟಾಗುವುದಿಲ್ಲವೇ? ಯಾರೇ ಆಗಲಿ, ಒಮ್ಮೆ ಸ್ನೇಹ ಮಾಡಿದಲ್ಲಿ ಅವರ ನೆನಪು ನನ್ನ ಮನಸಿನಿಂದ ಅಳಿಯುವುದಿಲ್ಲ; ಇದು ನನ್ನ ಗುಣವೋ ಅವಗುಣವೋ ಹೇಳಲಾರೆ! ಇಂದಿಗೂ ನನ್ನ ಕಣ್ಣುಗಳ ಮುಂದೆ ಅವರ ಚಿತ್ರವು ಕಟ್ಟಿದಂತಾಗಿದೆ. ಅತ್ತು–ಕರೆಯುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದರೂ ಕಣ್ಣುಗಳು ಕಂಬನಿಗರೆಯುತ್ತವೆ. ಮನಸ್ಸಿಗೆ ಸಮಾಧಾನ ತಂದುಕೊಂಡ ಹೊರತು ಮತ್ತಾವ ಉಪಾಯವೂ ಇಲ್ಲದಂತಾಗಿದೆ. ಆ ಅನಾಥೆ ಬಾಲಿಕೆಯನ್ನು ಮನೆಗೆ ತಂದಿರಿಸಿಕೊಂಡು ನೋಡಲು ನನ್ನ ಮನಸ್ಸೊಪ್ಪದು.

ಮೋಟಾರಾಮ—ಹಾಗೆನ್ನಬೇಡಿ ಬಾಬೂಜೀ! ವಕೀಲ ಸಾಹೇಬರು ಇಲ್ಲದಿದ್ದ ಮಾತ್ರಕ್ಕೆ ತಾವಿಲ್ಲವೇ? ಈಗ ತಾವೇ ಅವಳಿಗೆ ಪಿತೃಸಮಾನರು. ಇನ್ನವಳು ವಕೀಲ ಸಾಹೇಬರ ಪುತ್ರಿಯಲ್ಲ; ತಮ್ಮ ಪುತ್ರಿ. ತಮ್ಮ ಹೃದಯವು ಒಳ್ಳೆಯದಾದರೂ, ವಕೀಲ ಸಾಹೇಬರು ಸತ್ತ ಮಾತ್ರಕ್ಕೆ ತಾವು ಕೊಟ್ಟ ಭಾಷೆಗೆ ತಪ್ಪಿದಿರೆಂದು ಜನರು ಆಡಿಕೊಳ್ಳುವರು. ಇದರಿಂದ ತಮಗೆ ಲೋಕನಿಂದೆಯುಂಟಾಗುವುದು. ತಾವು ಮನಸ್ಸು ಮಾಡಿ, ಸಂತೋಷದಿಂದ ವಿವಾಹ ಸಮಾರಂಭವನ್ನು ನೆರವೇರಿಸಿ. ಇಂತಹ ವಿಪತ್ತಿ ಬಂದೊದಗಿದರೂ ತಮ್ಮ ಬೀಗಿತ್ತಿಯವರು ಬೀಗರ ಆದರ–ಸತ್ಕಾರಗಳಿಗೆ ಸಾಕಷ್ಟು ಸುವ್ಯವಸ್ಥೆಯನ್ನು ಮಾಡಿದ್ದಾರೆ.

ಪಂಡಿತ ಮೋಟಾರಾಮರು ಕೇವಲ ಪಂಚಾಂಗ–ಪಂಡಿತರೇ ಅಲ್ಲ,

ವ್ಯವಹಾರ ನೀತಿಯಲ್ಲೂ ಚತುರರೆಂಬುದನ್ನು ಬಾಬೂ ಸಾಹೇಬರು ಅರಿತು ಕೊಂಡರು. 'ಪಂಡಿತಜೀ! ಸತ್ಯವಾಗಿಯೂ ನುಡಿಯುವೆನು, ಆ ಕನ್ಯೆಯನ್ನು ಕಂಡರೆ ನನಗೆ ಮಗಳಿಗಿಂತಲೂ ಹೆಚ್ಚಿನ ಮಮತೆಯಿದೆ; ಆದರೆ ಏನು ಮಾಡಲಿ? ಆ ಪರಮಾತ್ಮನಿಗೇ ಪ್ರೀತಿಯಿಲ್ಲದಿದ್ದಲ್ಲಿ ನನ್ನ ವಶವೇನಿದೆ? ಈ ಮೃತ್ಯುವು ಒಂದು ಅಮಂಗಳ ಸೂಚನೆಯೆಂದೇ ಹೇಳಬೇಕಾಗಿದೆ. ಈ ವಿವಾಹವು ಮಂಗಳಮಯವಾಗುವುದಿಲ್ಲವೆಂದು ವಿಧಾತನು ಸ್ಪಷ್ಟವಾಗಿ ನುಡಿಯುತ್ತಿರುವನು. ಹೀಗಿರುವಲ್ಲಿ ಈ ಸಂಬಂಧವು ಎಷ್ಟು ಉಚಿತವೆಂಬುದನ್ನು ನೀವೇ ಯೋಚಿಸಿ ನೋಡಿ! ನೀವೂ ವಿದ್ವಾಂಸರೇ ಆಗಿರುವಿರಿ. ಯಾವ ಕಾರ್ಯದ ಆರಂಭವೇ ಅಮಂಗಳವಾಯಿತೋ ಅದರ ಅಂತ್ಯವು ಮಂಗಳ-ಮಯವಾಗುವುದು ಸಾಧ್ಯವೇ? ಇಲ್ಲ, ತಿಳಿದೂ-ತಿಳಿದೂ ನಾನು ತಪ್ಪನ್ನು ಮಾಡಲಾರೆ. ನೀವು ಬೀಗಿತ್ತಿಯವರಿಗೆ ಹೋಗಿ ತಿಳಿಸಿರಿ; ನಾನು ಅವರ ಆಜ್ಞೆಯನ್ನು ಪಾಲಿಸಲು ಸಿದ್ಧನಾಗಿದ್ದರೂ, ಅದರ ಪರಿಣಾಮವು ಮಾತ್ರ ಒಳ್ಳೆಯದಾಗಲಾರದು. ಸ್ವಾರ್ಥ-ಪರವಶನಾಗಿ ನಾನು ನನ್ನ ಪರಮ ಮಿತ್ರನ ಪುತ್ರಿಗೆ ಅನ್ಯಾಯ ಮಾಡಲಾರೆ!'

ಈ ತರ್ಕದಿಂದ ಪಂಡಿತಜೀಯವರು ಮುಂದೆ ಮಾತನಾಡದಂತಾದರು. ವಾದಿಯು ಪ್ರಯೋಗಿಸಿದ ಬಾಣಕ್ಕೆ ಪ್ರತಿ ಬಾಣವೇ ಇಲ್ಲದಂತಾಯಿತು. ಬಾಬೂ ಸಾಹೇಬರ ಮಾತಿಗೆ ಏನುತ್ತರ ಕೊಡಬೇಕೆಂದು ಯೋಚಿಸುತ್ತಿರುವಷ್ಟರಲ್ಲೇ ಅವರು ಪುನಃ ಆಳುಗಳನ್ನು ಕರೆಯಲು ಆರಂಭಿಸಿದರು. ಎಲೋ ಭವಾನಿ, ಗುರುದೀನ, ರಾಮಗುಲಾಮ! ಎಲ್ಲರೂ ಎಲ್ಲಿ ಹೋದಿರಿ? ಮಾಯವಾಗಿ ಹೋದಿರಾ? ಪಂಡಿತಜೀಯವರಿಗೆ ಏನಾದರೂ ಸ್ವಲ್ಪ ಜಲ-ಪಾನದ ವ್ಯವಸ್ಥೆ ಮಾಡಬೇಕೆಂಬ ಯೋಚನೆ ಯಾರಿಗೂ ಇಲ್ಲವೇ? ನಿಮ್ಮೆಲ್ಲರಿಗೂ ಎಷ್ಟೆಂದು ಬುದ್ಧಿ ಕಲಿಸಲಿ? ಅಷ್ಟು ದೂರದಿಂದ ಓರ್ವ ಮಹಾಶಯರು ಬೇಸತ್ತು-ಬಸವಳಿದು ಬಂದಿರುವಾಗ ಅವರ ಪರಿವೆಯೇ ನಿಮಗಿಲ್ಲವಲ್ಲಾ? ನಡೆಯಿರಿ, ಜಲಪಾನದ ವ್ಯವಸ್ಥೆ ಮಾಡಿ. ಪಂಡಿತಜೀ! ಶರಬತ್ತನ್ನು ತಯಾರು ಮಾಡಿಸಲೇ, ಅಥವಾ ಫಲಾಹಾರಕ್ಕೆ ಮಿಠಾಯಿಯನ್ನು ತರಿಸಿ ಕೊಡಲೇ?

ಮೋಟೆರಾಮರು ಮಿಠಾಯಿಯ ವಿಷಯದಲ್ಲಿ ಮಾತ್ರ ಯಾವ ಕಟ್ಟು-

ನಿಟ್ಟನ್ನೂ ಇಟ್ಟಿರಲಿಲ್ಲ. ಘೃತಸ್ಪರ್ಶದಿಂದ ಸಕಲ ಸಾಮುಗ್ರಿಗಳೂ ಪವಿತ್ರ ವಾದುವೆಂಬುದೇ ಅವರ ಸಿದ್ಧಾಂತವಾಗಿತ್ತು. ರಸಗುಲ್ಲಾ ಮತ್ತು ಬೇಸನ್ ಲಾಡುಗಳು ಅವರಿಗೆ ಅತಿ ಪ್ರಿಯವಾದ ಪದಾರ್ಥಗಳಾಗಿದ್ದುವು. ಶರಬತ್ತೆಂದರೆ ಅವರಿಗಷ್ಟು ಇಷ್ಟವಿರಲಿಲ್ಲ. ಸಂಕೋಚದಿಂದ ಅವರು ನುಡಿದರು-ಶರಬತ್ತನ್ನು ಸೇವಿಸುವ ಅಭ್ಯಾಸ ನನಗಿಲ್ಲ, ಮಿಠಾಯಿಯನ್ನೇ ಫಲಾಹಾರ ಮಾಡುವೆನು.

ಭಾಲ—ಹಾಗಿದ್ದರೆ ಮಿಠಾಯಿಯನ್ನೇ ಅಂಗಡಿಯಿಂದ ತರಿಸಿಕೊಡಲೇ?

ಮೋಟಾರಾಮ—ಅದರಲ್ಲಿ ನನ್ನ ಅಭ್ಯಂತರವೇನೂ ಇಲ್ಲ.

ಭಾಲ—ಅಹುದು, ಪಂಡಿತಜೀ! ನೀವು ಹೇಳುವುದು ದಿಟ. ಈ ಮಡಿ ಮುಂತಾದವುಗಳನ್ನೆಲ್ಲಾ ಇಟ್ಟುಕೊಂಡರೆ ನಡೆಸುವುದು ಕಷ್ಟ. ಇವುಗಳೆಲ್ಲ ವನ್ನು ನಾನೂ ಒಪ್ಪುವುದಿಲ್ಲ. ಎಲೋ, ಯಾರಲ್ಲಿ? ಇದುವರೆಗೂ ಯಾರೂ ಬರಲಿಲ್ಲವೇ? ಗುರುದೀನ, ಭವಾನಿ, ರಾಮಗುಲಾಮ! ಯಾರೂ ಮಾತ ನಾಡುವುದಿಲ್ಲವೇಕೆ?

ಈಗಲೂ ಅದೇ ವೃದ್ಧ ನೌಕರನು ಕೆಮ್ಮುತ್ತ-ಕೆಮ್ಮುತ್ತ ಬಂದು ನಿಂತು ನುಡಿದನು—ಬಾಬೂಜೀ! ನನ್ನ ಸಂಬಳವನ್ನು ಸಲ್ಲಿಸಿಬಿಡಿ; ಈ ನೌಕರಿಯು ನನ್ನಿಂದ ಸಾಧ್ಯವಿಲ್ಲ. ಓಡಿ–ಓಡಿ ನನ್ನ ಕಾಲುಗಳೆಲ್ಲಾ ಬಿದ್ದು ಹೋಗುತ್ತವೆ.

ಭಾಲ—ಕೆಲಸ ಮಾಡಲಿ, ಮಾಡದಿರಲಿ; ಸಂಬಳ ಮಾತ್ರ ಸಲ್ಲಿಸಿ ಬಿಡ ಬೇಕು! ದಿನವೆಲ್ಲಾ ಕುಳಿತಲ್ಲಿ ಕುಳಿತು ಕೆಮ್ಮುತ್ತಿದ್ದರೆ ನಿನಗೆ ಸಲೀಸಾಗಿ ಸಂಬಳ ಕೊಡಬೇಡವೇ? ನಡೆ! ಅಂಗಡಿಗೆ ಓಡಿಹೋಗಿ ಒಂದಾಣೆಯ ಸಾಜಾ ಮಿಠಾಯಿಯನ್ನು ತೆಗೆದುಕೊಂಡು ಬಾ, ಹೋಗು! ನೌಕರನಿಗೆ ಈ ಮಾತನ್ನು ಹೇಳಿ ಬಾಬೂ ಸಾಹೇಬರು ಮನೆಯೊಳಗಡೆ ಹೋದರು. ಮತ್ತು ಪತ್ನಿಯೊಡನೆ ನುಡಿದರು—ಅಲ್ಲಿಂದ ಒಬ್ಬ ಪಂಡಿತಜೀ ಬಂದಿರುವರು. ಇದೋ, ಈ ಪತ್ರವನ್ನು ತಂದಿರುವರು, ಓದಿನೋಡು!

ಭಾಲಚಂದ್ರ ಬಾಬುಗಳ ಪತ್ನಿಯ ಹೆಸರು ರಂಗೀಲೀಬಾಯಿ. 'ಅಲ್ಲಿಯ ವಿವಾಹ ನಮಗೆ ಸಮ್ಮತವಿಲ್ಲವೆಂದು ತಿಳಿಸಿಬಿಟ್ಟಿರಷ್ಟೆ?' ಎಂದು ಕೇಳಿದಳು.

ಭಾಲ—ತಿಳಿಸಿಯೇನೋ ತಿಳಿಸಿದೆನು. ಆದರೆ ಸುಳ್ಳು ನುಡಿಯ ಬೇಕಾದ್ದರಿಂದ ಬಹಳ ಸಂಕೋಚವೆನಿಸಿತು. ಏನ್ಯೇನೋ ಇಲ್ಲದ ನೆಪಗಳನ್ನು ಹೇಳಬೇಕಾಯಿತು.

ರಂಗೀಲಿ—ಇರುವ ವಿಷಯವನ್ನು ತಿಳಿಸುವುದರಲ್ಲಿ ಸಂಕೋಚವೇನು? ನಮಗೆ ಇಷ್ಟವಿಲ್ಲ; ನಾವು ಮದುವೆ ಮಾಡಿಕೊಳ್ಳುವುದಿಲ್ಲ. ಬೇರೆ ಕಡೆಯಲ್ಲಿ ಹತ್ತು ಸಾವಿರ ರೂಪಾಯಿಗಳ ವರದಕ್ಷಿಣೆ ಸಿಗುವಾಗ ಅಲ್ಲೇಕೆ ಮಾಡಿಕೊಳ್ಳಬಾರದು? ಇವರ ಹುಡುಗಿ ಏನು ಚಿನ್ನದ ಪ್ರತಿಮೆಯೇ? ವಕೀಲ ಸಾಹೇಬರು ಜೀವಿಸಿದ್ದಿದ್ದರೆ ಎಷ್ಟೇ ಕಡಿಮೆ ಎಂದರೂ ಹದಿನೈದು ಇಪ್ಪತ್ತು ಸಾವಿರ ರೂಪಾಯಿಗಳನ್ನಾದರೂ ಕೊಟ್ಟೇಕೊಡುತ್ತಿದ್ದರು. ಈಗ ಅಲ್ಲೇನಿದೆ?

ಭಾಲ—ಒಮ್ಮೆ ಭಾಷೆ ಕೊಟ್ಟ ಬಳಿಕ ತಪ್ಪುವದು ತರವಲ್ಲ. ಜನರು ಮುಂದೆ ಆಡಿಕೊಳ್ಳದಿದ್ದರೂ ಹಿಂದೆ ನಿಂದಿಸದಿರುವರೇ? ಏನು ಮಾಡಲಿ? ನಿನ್ನ ಹಠದಿಂದ ವಿವಶನಾಗಿದ್ದೇನೆ.

ರಂಗೀಲೀಬಾಯಿಯು ತಾಂಬೂಲವನ್ನು ಸೇವಿಸುತ್ತ, ಪತ್ರವನ್ನು ಬಿಚ್ಚಿ ಓದತೊಡಗಿದಳು. ಬಾಬೂ ಸಾಹೇಬರಿಗಂತೂ ಹಿಂದಿಯ ಅಭ್ಯಾಸವೇ ಇರಲಿಲ್ಲ. ರಂಗೀಲೀಬಾಯಿಗೆ ಸಹ ಪುಸ್ತಕಗಳನ್ನು ಓದುವಷ್ಟು ತಿಳಿಯದಿದ್ದರೂ ಕಾಗದ-ಪತ್ರಗಳನ್ನು ಓದಿಕೊಳ್ಳುತ್ತಿದ್ದಳು. ಪತ್ರದ ಮೊದಲಿನ ಪಂಕ್ತಿಯನ್ನೋದುತ್ತಲೇ ಅವಳ ನಯನಗಳು ಸಜಲವಾದವು. ಪತ್ರವು ಪೂರ್ತಿಯಾಗುವಷ್ಟರಲ್ಲಿ ಅವಳ ಕಣ್ಣುಗಳಲ್ಲಿ ಕಂಬನಿಯು ಧಾರಾಕಾರವಾಗಿ ಪ್ರವಹಿಸುತ್ತಿತ್ತು. ಪತ್ರದ ಪ್ರತಿಯೊಂದು ಶಬ್ದದಲ್ಲಿಯೂ ಕರುಣಾರಸವು ತುಂಬಿ-ತುಳುಕುತ್ತಿತ್ತು. ರಂಗೀಲೀಬಾಯಿಯ ಕಠೋರತೆಯು ಕಲ್ಲಿನಂತಹದಲ್ಲ, ಅರಗಿನಂತಹದು. ಕಲ್ಯಾಣಿಯ ಕರುಣಾಜನಕ ಶಬ್ದಗಳು ಅವಳ ಸ್ವಾರ್ಥಪೂರಿತ ಹೃದಯವನ್ನು ಕರಗಿಸಿದುವು. ಗದ್ಗದ ಕಂಠದಿಂದ ನುಡಿದಳು—ಆ ಪಂಡಿತರು ಇನ್ನೂ ಕುಳಿತಿರುವರಷ್ಟೇ?

ಭಾಲಚಂದ್ರ ಬಾಬುಗಳು ಪತ್ನಿಯ ಕಣ್ಣೀರನ್ನು ಸಹಿಸುತ್ತಿರಲಿಲ್ಲ. ಪತ್ರವನ್ನು ಅವಳಿಗೇಕಾದರೂ ತೋರಿಸಿದೆನೆಂದು ಪೇಚಾಡಿಕೊಂಡರು. ಇಂತಹ ತಪ್ಪು ಕೆಲಸವನ್ನು ಅವರು ಹಿಂದೆಂದೂ ಮಾಡಿರಲಿಲ್ಲ. ಸಂದಿಗ್ಧಭಾವದಿಂದ ನುಡಿದರು—'ಕುಳಿತಿರಬಹುದು. ನಾನೇನೋ ಅವರನ್ನು ಹೋಗಲು ಹೇಳಿಬಂದೆ!' ರಂಗೀಲೀಬಾಯಿಯು ಕಿಟಕಿಯಿಂದ ಇಣಿಕಿ ನೋಡಿದಳು. ಪಂಡಿತ ಮೋಟಾರಾಮರು ಬಕಪಕ್ಷಿಯಂತೆ ಧ್ಯಾನಾಸಕ್ತರಾಗಿ ಅಂಗಡಿಯ ಕಡೆಗೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದರು. ಆಸೆಯಿಂದ

ಆತುರಗೊಂಡು, ಒಮ್ಮೆ ಅತ್ತ ಒಮ್ಮೆ ಇತ್ತ ತಿರುಗಿ ನೋಡುತ್ತಿದ್ದರು. 'ಒಂದಾಣೆಯ ಮಿಠಾಯಿ' ಎಂಬ ಮಾತಿನಿಂದಲೇ ಅವರ ಆಸೆಯು ಅರ್ಧ ವಾಗಿತ್ತು; ಅದರಲ್ಲೂ ಈ ವಿಳಂಬದಿಂದ ಅವರಿಗೆ ಬಹಳ ವ್ಯಾಕುಲತೆ ಯುಂಟಾಯಿತು. ಅವರು ಕಳೆತಿದ್ದುದನ್ನು ನೋಡಿ ರಂಗೀಲೀಬಾಯಿಯು ಹೇಳಿದಳು—ಅದೋ, ಕುಳಿತಿರುವರು. ನೀವು ಹೋಗಿ ವಿವಾಹ ಮಾಡಿ ಕೊಳ್ಳುವೆವೆಂದು ತಿಳಿಸಿಬನ್ನಿ. ಪಾಪ! ಆ ಅನಾಥೆಯು ಬಹಳ ಆಪತ್ತಿನಲ್ಲಿ ರುವಳು.

ಭಾಲ—ಒಮ್ಮೊಮ್ಮೆ ನೀನು ಮಕ್ಕಳಂತೆ ಮಾತನಾಡುವೆ. ಮದುವೆ ಮಾಡಿಕೊಳ್ಳಲು ಸಮ್ಮತವಿಲ್ಲವೆಂದು ಈಗತಾನೇ ನುಡಿದು ಬಂದಿರುವೆನು. ಅದಕ್ಕಾಗಿ ಎಷ್ಟು ಪೊಳ್ಳು ಪೀಠಿಕೆಯನ್ನು ಕಲ್ಪಿಸಬೇಕಾಯಿತು? ಈಗ ಹೋಗಿ ಈ ರೀತಿ ನುಡಿದರೆ, ಅವರು ಮನಸ್ಸಿನಲ್ಲಿ ಏನೆಂದುಕೊಳ್ಳುವರು? ನೀನೇ ಯೋಚಿಸಿ ನೋಡು! ಮದುವೆಯೆಂಬುದು ಮಹಾಪ್ರಶ್ನೆ; ಗಳಿಗೆಗೊಂದು ಮಾತನಾಡಲು ಮಕ್ಕಳಾಟವೆಂದು ತಿಳಿದೆಯಾ?

ರಂಗೀಲಿ—ನೀವು ಈ ಮಾತನ್ನು ಅವರಿಗೆ ತಿಳಿಸಲು ಸಾಧ್ಯವಾಗ ದಿದ್ದರೆ, ಆ ಪಂಡಿತರನ್ನೇ ಇಲ್ಲಿಗೆ ಕಳುಹಿಸಿ. ನನ್ನ ಹಾಗೂ ನಿಮ್ಮ,-ಇಬ್ಬರ ಮಾತುಗಳೂ ಉಳಿಯುವಂತೆ ನಾನವರಿಗೆ ತಿಳಿಸುವೆನು. ಇದರಲ್ಲಿ ನಿಮ್ಮ ಅಡ್ಡಿಯೇನೂ ಇಲ್ಲವಷ್ಟೆ?

ಭಾಲ—ಈ ಪ್ರಪಂಚದಲ್ಲಿ ನಿನ್ನ ಹೊರತು ಇತರರೆಲ್ಲರೂ ಏನೂ ಅರಿಯದವರೆಂದು ತಿಳಿದಿರುವೆಯಾ? ನಾನು ಹೇಳಿದರೇನು, ನೀನು ಹೇಳಿದ ರೇನು; ವಿಷಯ ಒಂದೇ ಅಲ್ಲವೆ? ಮಾತು ಒಮ್ಮೆ ನಿರ್ಧರವಾದನಂತರ ಪುನಃ ಬದಲಾಯಿಸಿ ಮಾತನಾಡಲಾರೆ! ಅಲ್ಲಿನ ವಿವಾಹವು ಸಮ್ಮತವಿಲ್ಲವೆಂದು ನೀನೇ ಬಾರಿ-ಬಾರಿಗೂ ಹೇಳುತ್ತಿದ್ದೆ. ನಿನ್ನ ಕಾರಣದಿಂದಲೇ ನಾನು ಕೊಟ್ಟ ಭಾಷೆಗೆ ತಪ್ಪಿಸಿಕೊಳ್ಳಬೇಕಾಯಿತು. ಈಗ ನೀನೇ ಮಾತನ್ನು ಬದಲಾಯಿಸುವೆಯಾ? ಇದರಿಂದ ನನ್ನ ಮನಸಿಗೆ ಅಸಮಾಧಾನವೆನಿಸುತ್ತದೆ. ನನ್ನ ಮಾನ ಅಪಮಾನಗಳ ಕಡೆಗೆ ನೀನು ಸ್ವಲ್ಪ ಗಮನ ಕೊಡಬೇಡವೆ?

ರಂಗೀಲಿ—ಪಾಪ! ಆ ವಿಧವೆಯು ಇಂತಹ ಹೀನ ದೆಶೆಯಲ್ಲಿರುವ ಳೆಂದು ನನಗೇನು ಗೊತ್ತಿತ್ತು? ಅವಳು ಪತಿಯ ಸಕಲ ಸಂಪತ್ತನ್ನೂ

ಬಚ್ಚಿಟ್ಟಿರುವಳೆಂದೂ, ಮತ್ತು ದಾರಿದ್ರ್ಯವೆಂಬ ಢೋಂಗನ್ನೂ ರಚಿಸಿ ಕೆಲಸವನ್ನು ಜರುಗಿಸಿಕೊಳ್ಳಲಪೇಕ್ಷಿಸುವಳೆಂದೂ ನೀವೇ ಹೇಳಿದ್ದಿರಿ. ನೀವು ಹೇಳಿದ ಮಾತಿಗೆ ನಾನು ಒಪ್ಪಿಕೊಂಡಿದ್ದೆನು. ಈಗಲಾದರೂ ಏನಾಯಿತು ? ಯಾರಿಗೇ ಆಗಲಿ ಒಳ್ಳೆಯದು ಮಾಡಿ, ನಂತರ ಕೆಟ್ಟದನ್ನು ಮಾಡಬೇಕಾದರೆ ನಾಚಿಕೆ ಹಾಗೂ ಸಂಕೋಚಪಡಬೇಕು. ಕೆಟ್ಟದನ್ನು ಮಾಡಿ ನಂತರ ಒಳ್ಳೆಯದನ್ನು ಮಾಡಲು ಸಂಕೋಚವೆಲ್ಲಿಯದು ? ನೀವು ಆಗಲೆಂದು ಒಪ್ಪಿಕೊಂಡು, ನಾನು ಬೇಡವೆಂದಿದ್ದರೆ ಆಗ ನಿಮ್ಮ ಸಂಕೋಚವು ಸೂಕ್ತವಾಗಿತ್ತು. ಆಗುವುದಿಲ್ಲವೆಂದು ತಿಳಿಸಿದ ನಂತರ ಈಗ ಆಗಲೆಂದು ಹೇಳುವುದರಲ್ಲಿ ಇನ್ನೂ ಹೆಮ್ಮೆಯಲ್ಲವೇ ?

ಭಾಲ—ನಿನಗೇನೋ ಇದರಿಂದ ಹೆಮ್ಮೆ ಎನಿಸಬಹುದು. ಆದರೆ ನನಗೆ ಹೀನಾಯವೆನಿಸುತ್ತದೆ. ಅದಿರಲಿ ! ನಾನು ವಕೀಲ-ಪತ್ನಿಯ ವಿಷಯದಲ್ಲಿ ಹೇಳಿದ ಮಾತುಗಳೆಲ್ಲವೂ ಸುಳ್ಳೆಂದು ನೀನು ಹೇಗೆ ಒಪ್ಪಿಕೊಂಡೆ ? ಕೇವಲ ಈ ಪತ್ರದ ಆಧಾರದಿಂದಲೇ ? ನಿನ್ನಂತೆಯೇ ಇತರರೂ ಸರಳಹೃದಯರೆಂದು ನೀನು ತಿಳಿದಿರುವೆ.

ರಂಗೀಲಿ—ಈ ಪತ್ರದಲ್ಲಿ ಬೂಟಾಟಿಕೆ ಏನೂ ಕಂಡುಬರುತ್ತಿಲ್ಲ. ತೋರಿಕೆಯ ಮಾತುಗಳು ಮನಸ್ಸನ್ನು ತಟ್ಟಲಾರವು !

ಭಾಲ —ಸತ್ಯವಾದ ಮಾತನ್ನು ಸಹ ಸಪ್ಪೆಗೊಳಿಸುವ ಶಕ್ತಿ ತೋರಿಕೆಯ ಮಾತಿನಲ್ಲಿ ಇದೆ. ಯಾವ ಕಥೆ-ಕವನಗಳನ್ನೂ ಓದಿ-ಓದಿ ನೀನು ಗಂಟೆಗಟ್ಟಲೆ ಕಣ್ಣೀರು ಸುರಿಸುವೆಯೋ ಅವುಗಳ ಕಥೆಗಾರರೆಲ್ಲರೂ ಸತ್ಯವನ್ನೇ ಬರೆಯುವರೇ ? ಸಕಲವೂ ಸುಳ್ಳಿನ ಸರಪಣಿ ! ಇದು ಕೇವಲ ಒಂದು ಕಲೆ !

ರಂಗೀಲಿ—ಈಗ ನನ್ನಿಂದ ಮಾತಿಗೆ ತಪ್ಪಿಸಿಕೊಳ್ಳುವಿರಾ ? ನಾನು ನಿಮ್ಮ ಮಾತುಗಳಿಗೆ ಒಪ್ಪಿಕೊಂಡ ಮಾತ್ರಕ್ಕೆ ನನ್ನನ್ನು ಮರುಳು ಮಾಡಿದೆನೆಂದು ತಿಳಿದಿರುವಿರಿ. ನನಗೆ ನಿಮ್ಮ ಸ್ವಭಾವದ ಸಾರವೆಲ್ಲವೂ ಗೊತ್ತು. ನಿಮ್ಮ ದೋಷಗಳನ್ನೆಲ್ಲಾ ನನ್ನ ತಲೆಗೆ ಹಚ್ಚಿ, ನೀವು ಮಾತ್ರ ನಿರ್ದೋಷಿಗಳಾಗಬೇಕೆಂದು ನೋಡುವಿರಿ. ಹೌದೋ, ಅಲ್ಲವೋ, ನೀವೇ ಹೇಳಿ ? ವಕೀಲ ಸಾಹೇಬರು ಜೀವಂತರಾಗಿದ್ದಾಗ ಈ ಮದುವೆಯ ಸಂಬಂಧದಲ್ಲಿ ನಿಶ್ಚಿತಾರ್ಥ ಮಾಡಿಕೊಳುವ ಅವಶ್ಯಕತೆ ಇಲ್ಲವೆಂದೂ ಅವರೇ ತಮಗೆ ಉಚಿತ ತೋರಿದಷ್ಟು

ಕೊಡುವರೆಂದೂ ತಿಳಿದಿದ್ದಿರಿ. ಈಗ ಅವರು ಸ್ವರ್ಗಸ್ಥರಾದ ನಂತರ ವಿಧ-ವಿಧವಾದ ಮಾತುಗಳನ್ನಾಡುವಿರಿ! ಇದು ನಿಮ್ಮ ದೊಡ್ಡತನವಲ್ಲ, ಅಲ್ಪ ತನ. ಇದರ ದೋಷವೆಲ್ಲವೂ ನಿಮಗೇ ಸೇರಿದ್ದು. ಇನ್ನುಮೇಲೆ ನಾನು ಈ ಮದುವೆಯ ಪ್ರಶ್ನೆಯಲ್ಲಿ ಕೈಹಾಕುವದಿಲ್ಲ; ನೀವೇ ಮನಬಂದಂತೆ ಮಾಡಿ! ಈ ಬೂಟಾಟಿಕೆಗಳೆಂದರೆ ನನಗೆ ಬಹಳ ಬೇಜಾರು. ಯಾವ ಮಾತನ್ನೇ ಆಗಲಿ (ಒಳ್ಳೆಯದೇ ಆಗಲಿ, ಕೆಟ್ಟದ್ದೇ ಆಗಲಿ) ಸ್ಪಷ್ಟವಾಗಿ ಆಡಿಬಿಡುವುದು ಒಳ್ಳೆಯದು. ಆನೆಗೆ ಅಗಿಯುವ ದಂತಗಳೇ ಬೇರೆ, ತೋರುವ ದಂತಗಳೇ ಬೇರೆ ಇರುವಂತೆ, ಈ ತೋರಿಕೆಯು ನಿಮಗೆ ತರವಲ್ಲ. ಈಗಲಾದರೂ ಹೇಳಿ! ಅಲ್ಲಿಯ ಸಂಬಂಧವನ್ನು ಮಾಡಿಕೊಳ್ಳುವಿರೇ, ಇಲ್ಲವೇ?

ಭಾಲ— ನಾನು ಅಸತ್ಯವಾದಿ–ಅನ್ಯಾಯಿಯೆಂದು ತಿಳಿದಬಳಿಕ ನನ್ನನ್ನೇಕೆ ಕೇಳುವೆ? ಅದಿರಲಿ, ಮನುಷ್ಯರ ಸ್ವಭಾವವನ್ನು ಇಷ್ಟು ಮಾತ್ರ ಗ್ರಹಿಸುವೆಯಲ್ಲಾ, ಆ ನಿನ್ನ ಬುದ್ಧಿಗೆ ಎಷ್ಟು ಹೇಳಿದರೂ ತೀರದು!

ರಂಗೀಲಿ—ಈ ರೀತಿ ಸುಳ್ಳು ಹೇಳುವುದಕ್ಕೆ ನಿಮಗೆ ನಾಚಿಕೆಯಾದರೂ ಆಗುವುದಿಲ್ಲವೇ? ಸತ್ಯವಾಗಿಯೂ ಹೇಳಿ! ನಾನು ನಿಮ್ಮ ಮನಸ್ಸನ್ನು ಅರಿತು ಕೊಂಡೆನೋ, ಇಲ್ಲವೋ?

ಭಾಲ— ಸರಿ, ಸರಿ ಸುಮ್ಮನಿರು! ಗಂಡನ ಸ್ವಭಾವವನ್ನು ಅರಿಯುವ ಹೆಂಡತಿಯರೇ ಬೇರೆ. ಸ್ತ್ರೀಯರ ದೃಷ್ಟಿಯು ಅತಿ ಸೂಕ್ಷ್ಮವಾದುದೆಂದು ನಾನು ಇದುವರೆಗೂ ತಿಳಿದುಕೊಂಡಿದ್ದೆ. ಆದರೆ ಇನ್ನು ಆ ನಂಬಿಕೆಯು ಮನಸ್ಸಿನಿಂದ ಮಾರಿಹೋಯಿತು; ಮತ್ತು ಮಹಾತ್ಮರು ಸ್ತ್ರೀಯರ ವಿಷಯದಲ್ಲಿ ಹೇಳಿರುವ ತತ್ವ–ನುಡಿಗಳನ್ನು ನಂಬಬೇಕಾಯಿತು!

ರಂಗೀಲಿ—ಸುಳ್ಳು ಹೇಳಿ ಸೋತಿರುವ ಆ ಮುಖವನ್ನಾದರೂ ಸ್ವಲ್ಪ ಕನ್ನಡಿಯ ಮುಂದೆ ನಿಂತು ನೋಡಿಕೊಳ್ಳಿ!

ಭಾಲ—ನಿಜವಾಗಿಯೂ ಹೇಳು, ಎಷ್ಟು ಸೋತಿರುವೆನು?

ರಂಗೀಲಿ—ಒಳ್ಳೆಯ ಮನಸಿನ ಕಳ್ಳನು ತನ್ನ ಕಳ್ಳತನವು ತಿಳಿದಬಳಿಕ ಎಷ್ಟು ಸೋಲುವನೋ, ಅಷ್ಟೇ ನೀವೂ ಸೋತಿರುವಿರಿ!

ಭಾಲ—ಸೋತರೆ ಚಿಂತೆಯಿಲ್ಲ! ಅಲ್ಲಿಯ ಸಂಬಂಧವು ಸಾಧ್ಯವಿಲ್ಲ.

ರಂಗೀಲಿ—ಹಾಗಾದರೆ ನಿಮ್ಮಿಷ್ಟ; ಎಲ್ಲಿ ಬೇಕಾದರೂ ಮಾಡಿಕೊಳ್ಳಿ! ಭುವನನನ್ನು ಒಂದು ಮಾತು ಕೇಳಿನೋಡಿದರೆ ಒಳ್ಳೆಯದಲ್ಲವೇ?

ಭಾಲ—ಹಾಗೆಯೇ ಆಗಲಿ; ಈ ವಿಷಯದ ನಿರ್ಧರವನ್ನು ಅವನಿಗೆ ಬಿಟ್ಟುಬಿಡೋಣ!

ರಂಗೀಲಿ—ಒಂದುವೇಳೆ ನೀವು ಅವನಿಗೆ ಸನ್ನೆಮಾಡಿ ಹೇಳಿಕೊಟ್ಟರೆ?

ಭಾಲ—ಇಲ್ಲ, ನಾನವನ ಕಡೆಗೆ ತಿರುಗಿ ಸಹ ನೋಡುವುದಿಲ್ಲ!

ಆಹೊತ್ತಿಗೆ ಸರಿಯಾಗಿ ಅಕಸ್ಮಾತ್ ಭುವನಮೋಹನನು ಅಲ್ಲಿಗೆ ಬಂದನು. ಅವನು ಸುಂದರನೂ ಪುಷ್ಟಕಾಯನೂ ಆದ ಯುವಕನಾಗಿದ್ದನು. ರೂಪದಲ್ಲಿ ತನ್ನ ತಾಯಿಯನ್ನೇ ಹೋಲುತ್ತಿದ್ದನು. ಹೊಂಬಿಳುಪಿನ ಗುಂಡಾದ ಮುಖ, ಗುಲಾಬಿಯ ತಳಿರಿನಂತಹ ತೆಳುವಾದ ತುಟಿಗಳು, ವಿಶಾಲವಾದ ಹಣೆ, ಅಗಲವಾದ ಕಣ್ಣುಗಳು; ಆದರೆ ನೀತಿ-ನಡವಳಿಕೆಗಳಲ್ಲಿ ಮಾತ್ರ ತಂದೆಯನ್ನು ಹೋಲುತ್ತಿದ್ದನು. ಉತ್ತಮವಾದ ಕೋಟು-ಷರಾಯಿ, ಟೈ, ಬೂಟ್ಸು ಮತ್ತು ಹ್ಯಾಟುಗಳಿಂದ ಶೋಭಿತನಾಗಿದ್ದನು. ಕೈಯಲ್ಲೊಂದು ಪುಟ್ಟ ಹಾಕೀ ಬೆತ್ತವನ್ನು ಹಿಡಿದಿದ್ದನು. ಮುಖದಲ್ಲಿ ಯೌವನದ ಕಳೆಯೂ, ನೇತ್ರಗಳಲ್ಲಿ ಆತ್ಮಗೌರವವೂ ಹೊರಸೂಸುತ್ತಿತ್ತು. ಪುತ್ರನನ್ನು ನೋಡಿ ರಂಗೀಲಿಯು ನುಡಿದಳು—ಈ ದಿನ ಕಾಲೇಜಿನಿಂದ ಬರಲು ಇಷ್ಟೇಕೆ ತಡ ವಾಯಿತು? ಇದೋ ನೋಡು, ನಿಮ್ಮ ಅತ್ತೆಯ ಮನೆಯಿಂದ ಕಾಗದ ಬಂದಿದೆ. ಅವರೇ ಬರೆದಿರುತ್ತಾರೆ. ನಿನಗೆ ಅವರ ಮಗಳನ್ನು ಮದುವೆಮಾಡಿ ಕೊಳ್ಳುವುದು ಸಮ್ಮತವೇ, ಇಲ್ಲವೇ? ಸ್ಪಷ್ಟವಾಗಿ ತಿಳಿಸಿಬಿಡು!

ಭುವನ—ಮದುವೆ ಮಾಡಿಕೊಳ್ಳಬೇಕೇನೋ ಹೌದು; ಆದರೆ ನಾನು ಮಾಡಿಕೊಳ್ಳುವುದಿಲ್ಲ ಅಮ್ಮಾ!

ರಂಗೀಲಿ—ಏಕೆ?

ಭುವನ—ಹೆಚ್ಚು ಹಣ ಸಿಕ್ಕುವಂತಹ ಯಾವುದಾದರೂ ಬೇರೆ ಸಂಬಂಧವನ್ನು ನೋಡೋಣಮ್ಮ! ಒಂದು ಲಕ್ಷ ರೂಪಾಯಿಗಳನ್ನಾದರೂ ಕೊಡಬೇಡವೇ? ಈಗ ಅಲ್ಲೇನಿಟ್ಟಿದೆ? ವಕೀಲ ಸಾಹೇಬರಂತೂ ಸ್ವರ್ಗಸ್ಥ ರಾದರು; ಆ ವಿಧವೆಯ ಬಳಿ ಈಗ ಏನಿರುವುದು?

ರಂಗೀಲಿ—ಭುವನ! ಈ ರೀತಿಯ ಮಾತನ್ನಾಡಲು ನಿನಗೆ ನಾಚಿಕೆ ಯಾಗುವುದಿಲ್ಲವೇ?

ಭುವನ—ಇದರಲ್ಲಿ ನಾಚಿಕೆಯೇನಮ್ಮಾ? ಹಣವು ಸಿಕ್ಕಿದರೆ ಅದರಲ್ಲಿ ಕೇಡೇನು? ಲಕ್ಷ ರೂಪಾಯಿಗಳೆಂದರೆ ಸುಮ್ಮನೆ ಸಿಗುವುದೇ? ಲಕ್ಷ ಜನ್ಮಗಳಲ್ಲಿ ಸಹ ಸಂಪಾದಿಸುವುದು ಕಷ್ಟ! ಈ ವರ್ಷ ಪರೀಕ್ಷೆಯಲ್ಲೂ ಉತ್ತೀರ್ಣನಾದೆನೆಂದರೆ ಇನ್ನೈದು ವರ್ಷಗಳು ಹಣದ ಮುಖವನ್ನು ಸಹ ಕಾಣುವುದು ದುರ್ಲಭ. ನಂತರ ನೂರು—ಇನ್ನೂರು ರೂಪಾಯಿಗಳ ಸಂಪಾದನೆ ಸಿಗಬಹುದು. ಅದು ಐನೂರು—ಆರು ನೂರಕ್ಕೆ ಏರುವ ಹೊತ್ತಿಗೆ ಅರ್ಧ ಆಯುಸ್ಸೇ ಕಳೆದು ಹೋಗುವುದು. ಬಳಿಕ ಹಣವನ್ನು ಶೇಖರಿಸುವುದಕ್ಕೆ ಆಗುವುದೇ ಇಲ್ಲ. ಈ ಪ್ರಪಂಚದಲ್ಲಿದ್ದು ಸ್ವಲ್ಪವಾದರೂ ಸುಖ-ಸಂತೋಷಗಳನ್ನು ಸವಿಯಬೇಡವೇ? ಆದ್ದರಿಂದ ಯಾವನಾದರೂ ಹಣವಂತನ ಹೆಣ್ಣುಮಗಳು ಸಿಕ್ಕರೆ ಉತ್ತಮ. ನನಗೆ ಹೆಚ್ಚೇನೂ ಬೇಡ; ಒಂದು ಲಕ್ಷ ರೂಪಾಯಿಗಳ ನಗದು ಕೊಟ್ಟರೆ ಸಾಕು! ಅಥವಾ ಯಾವುದಾದರೂ ಹಣವಂತ ವಿಧವೆಯ ಒಬ್ಬಳೇ ಹೆಣ್ಣುಮಗಳಾದರೂ ಸರಿಯೆ!

ರಂಗೀಲಿ—ಹುಡುಗಿಯು ಹೇಗಿದ್ದರೂ ಸರಿಯೆ, ಮಾಡಿಕೊಳ್ಳುವಿಯಾ?

ಭುವನ—ಧನವು ದೋಷಗಳೆಲ್ಲವನ್ನೂ ಮುಚ್ಚಿಬಿಡುವುದಮ್ಮಾ! ನನ್ನನ್ನು ಅವಳು ಒಂದುವೇಳೆ ಬೈದರೂ, ನಾನೇನೂ ಅನ್ನುವುದಿಲ್ಲ. ಹಾಲು ಕೊಡುವ ಹಸುವು ಒದ್ದರೂ ಸುಮ್ಮನಿರುವುದಿಲ್ಲವೇ?

ಬಾಲಚಂದ್ರ ಬಾಬುಗಳು ಪ್ರಶಂಸಾಸೂಚಕ ಭಾವದಿಂದ ಹೇಳಿದರು—ಭಗವಂತನು ಅವರಿಗೆ ಇಂತಹ ವಿಪತ್ತಿಯನ್ನು ತಂದೊಡ್ಡಿದುದಕ್ಕಾಗಿ ನಮಗೆ ಅತ್ಯಂತ ಸಂಕಟ ಹಾಗೂ ಸಹಾನುಭೂತಿಯೆನಿಸುತ್ತದೆ. ಆದರೂ ಬುದ್ಧಿವಂತಿಕೆಯಿಂದ ನಾವು ಯಾವ ಕೆಲಸವನ್ನೂ ನಿರ್ಧರಿಸಿಕೊಳ್ಳಬೇಕು. ಈಗ ಅಲ್ಲಿನ ಸಂಬಂಧವನ್ನು ಮಾಡಿಕೊಳ್ಳುವುದರಿಂದ ನಾಲ್ಕು ಜನರ ನಗೆಗೀಡಾಗಬೇಕೆಂಬುದು ಮಾತ್ರ ನಿಜ!

ರಂಗೀಲಿ—ತಂದೆ-ಮಗ ಇಬ್ಬರೂ ಒಂದೇ ತೂಕದಲ್ಲಿರುವಿರಿ! ಇಬ್ಬರೂ ಸೇರಿ ಆ ಕನ್ಯೆಯ ಕೊರಳು ಕುಯ್ಯಲೆಳಸುವಿರಾ?

ಭುವನ—ಬಡವರಾದವರು ಬಡವರ ಸಂಬಂಧವನ್ನೇ ಮಾಡಿಕೊಳ್ಳಬೇಕು. ತಮ್ಮ ಯೋಗ್ಯತೆ ಮೀರಿ........

ರಂಗೀಲಿ—ಸಾಕು, ಸುಮ್ಮನಿರು! ಬಹಳ ಯೋಗ್ಯತೆಯನ್ನು

ಕಂಡವನು ನೀನು! ನೀನಾದರೂ ಎಷ್ಟು ಘನ-ಧನಿಕ? ಬಾಗಿಲಲ್ಲಿ ಬಂದು ನಿಂತ ಭಿಕ್ಷುಕನಿಗೆ ಒಂದು ಲೋಟ ನೀರು ಕೊಡುವ ಯೋಗ್ಯತೆ ಇಲ್ಲ!

ಹೀಗೆನ್ನುತ್ತ ರಂಗೀಲಿಯು ಅಲ್ಲಿಂದ ಎದ್ದು, ಅಡಿಗೆಯ ಮನೆಗೆ ಹೊರಟು ಹೋದಳು. ಭುವನಮೋಹನನು ಮುಗುಳುನಗೆ ನಗುತ್ತ ತನ್ನ ಕೊಠಡಿಯನ್ನು ಹೊಕ್ಕನು. ಬಾಬೂ ಸಾಹೇಬರು ಮೀಸೆಯ ಮೇಲೆ ಕೈ ತಿರುಗಿಸುತ್ತ ಹೆಮ್ಮೆಯಿಂದ ಹೊರಕ್ಕೆ ಬಂದರು. ಪಂಡಿತ ಮೋಟಾರಾಮರಿಗೆ ತೀರ್ಮಾನವನ್ನು ತಿಳಿಸಿಬಿಡಬೇಕೆಂದು ನೋಡಲಾಗಿ, ಅವರು ಅಲ್ಲಿ ಇರಲೇ ಇಲ್ಲ.

ಮೋಟಾರಾಮರು ಸ್ವಲ್ಪ ಸಮಯದ ವರೆಗೆ ನೌಕರನನ್ನೇ ನಿರೀಕ್ಷಿಸುತ್ತ ಕುಳಿತಿದ್ದರು. ಅವನ ಬರುವಿಕೆಯು ತಡವಾದಷ್ಟೂ ಅವರ ತಾಳ್ಮೆಯು ಕಡಿಮೆಯಾಯಿತು! ಇಲ್ಲಿ ಸುಮ್ಮನೆ ಕುಳಿತಿರುವುದರಿಂದ ಕೆಲಸವು ಕೈಗೂಡುವುದಿಲ್ಲವೆಂದೂ, ಹೊಟ್ಟೆಗೇನೂ ಇಲ್ಲದೆ ಹಸಿವಿನಿಂದ ಹಾತೊರೆಯಬೇಕಾಗುವುದೆಂದೂ ತಿಳಿದು, ಕೈಗೆ ತಮ್ಮ ಬೆತ್ತವನ್ನು ತೆಗೆದುಕೊಂಡು ಆ ನೌಕರನು ಹೋದ ಕಡೆಗೇ ತಾವೂ ಹೊರಟರು. ಅಂಗಡಿಯು ಬಹಳ ದೂರವಿರಲಿಲ್ಲ; ಒಂದೇ ಕ್ಷಣದಲ್ಲಿ ಅಲ್ಲಿಗೆ ತಲುಪಿದರು. ನೋಡಲಾಗಿ ಆ ವೃದ್ಧ ನೌಕರನು ಒಂದು ಮಿಠಾಯಿ ಅಂಗಡಿಯ ಬಳಿ ಕುಳಿತು ಬೀಡಿ ಸೇದುತ್ತಿದ್ದನು. ಅವನನ್ನು ಕಂಡೊಡನೆಯೆ ಮೋಟಾರಾಮರು ಕೇಳಿದರು—ಏಕೆ? ಇನ್ನೂ ಯಾವ ಮಿಠಾಯಿಯೂ ತಯಾರಾಗಿಲ್ಲವೇ? ಎಲ್ಲಿ ಹೋಗಿ ಮಲಗಿಬಿಟ್ಟನೋ, ಅಥವಾ ಬೀಡಿ ಸೇದುತ್ತ ಬಿದ್ದಿರುವನೋ ಎಂದು ಬಾಬೂಜೀಯವರು ಬಹಳ ಕೂಗಾಡುತ್ತಿರುವರು. ಅದಕ್ಕೆ ನಾನಂದೆ—'ಬಹಳ ವಯಸ್ಸಾದ ಮುದುಕ. ನಿದಾನವಾಗಿ ನಡೆದು ಬರುತ್ತಿರಬಹುದು!' ಅಂತೂ ಬಹಳ ವಿಚಿತ್ರ ಮನುಷ್ಯರು. ಇವರ ಬಳಿ ಯಾವ ರೀತಿ ನೌಕರರು ನಿರ್ವಹಿಸುವರೋ, ನಾನರಿಯೆ!

ನೌಕರ—ನನ್ನೊಬ್ಬನ ಹೊರತು ಬೇರೆ ಯಾರೂ ನಿರ್ವಹಿಸಲಾರರು, ಪಂಡಿತಜೀ! ಒಂದು ವರ್ಷದಿಂದ ಸಂಬಳವನ್ನು ಸಲ್ಲಿಸಿಲ್ಲ; ಎಲ್ಲರನ್ನೂ ಇದೇ ರೀತಿ ಸತಾಯಿಸುವರು. ಸಂಬಳವನ್ನು ಕೇಳಿದರೆ ಸಾಕು; ಸಿಡಿಗುಟ್ಟುತ್ತ ಬೈಯುತ್ತಾರೆ! ಆದ್ದರಿಂದ ಕೆಲಸಕ್ಕೆ ಬಂದವರೆಲ್ಲಾ ಬಿಟ್ಟು

ಹೋಗುತ್ತಾರೆ. ಗಾಳೀ ಹಾಕುತ್ತ ನಿಂತಿದ್ದ ಆ ಇಬ್ಬರೂ ಸರಕಾರೀ ನೌಕರರು. ಆದ್ದರಿಂದಲೇ ಹೇಗೋ ಸುಧಾರಿಸಿಕೊಂಡು ಸುಮ್ಮನಿರುವರು. ನಾನೂ ಸಹ ಬಿಟ್ಟು ಹೊರಟುಹೋಗಬೇಕೆಂದು ಎಷ್ಟೋ ಬಾರಿ ಯೋಚಿಸುವೆನು. ಹತ್ತು ವರ್ಷಗಳನ್ನು ಹಾಗೂ ಹೀಗೂ ಕಳೆದೆನು; ಇನ್ನು ಒಂದೆರಡು ವರ್ಷಗಳನ್ನು ಹೀಗೆಯೇ ಕಳೆದುಬಿಡೋಣವೆಂದು ಯೋಚಿಸಿ ಸುಮ್ಮನಿರುವೆನು.

ಮೋಟಾರಾಮ— ಹಾಗಿದ್ದರೆ ನೀನೊಬ್ಬನೇ ನೌಕರನೇ? ಅಷ್ಟೊಂದು ಹೆಸರುಗಳನ್ನು ಹಿಡಿದು ಕೂಗಿದರಲ್ಲಾ?

ನೌಕರ—ಅವರೆಲ್ಲರೂ ಈ ಎರಡು ಮೂರು ತಿಂಗಳೊಳಗೆ ಬಂದು, ಬಿಟ್ಟು ಹೊರಟುಹೋದರು. ಬಾಬೂಜೀಯವರು ತಮ್ಮ ಜಂಭವನ್ನು ತೋರಿಸಿಕೊಳ್ಳುವುದಕ್ಕೋಸ್ಕರ ಈಗಲೂ ಅವರೆಲ್ಲರ ಹೆಸರನ್ನೂ ಹಿಡಿದು ಸುಮ್ಮ-ಸುಮ್ಮನೆ ಕೂಗುವರು. ಬೇರೆ ಎಲ್ಲಾದರೂ ನನಗೆ ನೌಕರಿ ಕೊಡಿಸು ವಿರಾ? ಬಂದುಬಿಡುವೆನು.

ಮೋಟಾರಾಮ—ನೌಕರಿಗೇನು? ಬೇಕಾದಷ್ಟಿವೆ! ಈ ದಿನಗಳಲ್ಲಿ ನೌಕರರು ಸಿಗುವುದೇ ಕಷ್ಟ. ಅದರಲ್ಲೂ ನೀನು ಹಳಬ, ಅನುಭವಸ್ಥ; ನಿನಗೆ ನೌಕರಿಗೇನು ಕಡಿಮೆ? ಅಂಗಡಿಯಲ್ಲಿ ತಿಂಡಿಗಳಾವುದಾದರೂ ತಯಾರಾಗಿವೆಯೋ? ನಿನ್ನ ಕೈಯಲ್ಲಿ ಅಡಿಗೆಯನ್ನಾಗಲೀ ಅಥವಾ ಹುಗ್ಗಿಯನ್ನಾಗಲೀ ಮಾಡಿಸಿಕೊಳ್ಳಿರೆಂದು ಬಾಬೂಜೀಯವರು ನನಗೆ ಹೇಳಿದರು. ಅದಕ್ಕೆ ನಾನೆಂದೆ—'ಪಾಪ, ವಯಸ್ಸಾದ ಮುದುಕ! ರಾತ್ರಿಯ ವೇಳೆಯಲ್ಲಿ ಅಡಿಗೆ ಮಾಡುವುದು ಅವನಿಗೆ ಕಷ್ಟವಾಗಬಹುದು. ಆದ್ದರಿಂದ ಅಂಗಡಿಯಲ್ಲಿ ಏನಾದರೂ ಫಲಾಹಾರ ಮಾಡುವೆನು.' ಅದಕ್ಕೆ ಅವರು 'ಹಾಗೆಯೇ ಆಗಲಿ, ನೌಕರನು ನಿಮಗೆ ಮಿಠಾಯಿ ಅಂಗಡಿಯ ಬಳಿ ಸಿಗುವನು, ಹೋಗಿ' ಎಂದು ಹೇಳಿದರು. ಸಾಹೂಜೀ! ತಾಜಾ ಮಿಠಾಯಿಗಳಾವುದಾದರೂ ತಯಾರಾಗಿವೆಯೇ? ಲಾಡುವೇನೋ ಹೊಸದಾಗಿ ಕಾಣಿಸುತ್ತೆ; ಒಂದು ಸೇರು ತೂಕ ಮಾಡಿ! ಒಳಗೇ ಬಂದು ಕುಳಿತುಕೊಳ್ಳಬಹುದಷ್ಟೇ?

ಹೀಗೆನ್ನುತ್ತ ಮೋಟಾರಾಮರು ಮಿಠಾಯಂಗಡಿಯ ಒಳಗಡೆ ಕುಳಿತು, ರುಚಿರುಚಿಯಾದ ತಿಂಡಿಗಳನ್ನೆಲ್ಲಾ ಬೇಕಾದಷ್ಟು ತಿನ್ನತೊಡಗಿದರು. ಸುಮಾರು ಮೂರು ಸೇರಿನಷ್ಟು ಮುಕ್ತಾಯವಾಯಿತು. ತಿನ್ನುತ್ತ

ಹೋದಂತೆಲ್ಲಾ ಮಿಠಾಯಂಗಡಿಯವರನ್ನು ಪ್ರಶಂಸಿಸುತ್ತಾ ಹೋಗುತ್ತಿದ್ದರು—ಸಾಹುಜೀ! ನಿಮ್ಮ ಅಂಗಡಿಯ ಹೆಸರಿಗೆ ತಕ್ಕಂತೆ ಪದಾರ್ಥಗಳೂ ಬಹಳ ಉತ್ತಮವಾಗಿವೆ. ಬನಾರಸಿನವರಿಗೆ ಇಂತಹ ರಸಗುಲ್ಲಾ ತಯಾರಿಸುವುದಕ್ಕೇ ಬರುವುದಿಲ್ಲ; ಜಿಲೇಬಿಯನ್ನು ಮಾತ್ರ ಚನ್ನಾಗಿ ಮಾಡುತ್ತಾರೆ! ಆದರೆ ನಿಮ್ಮದು ಅದಕ್ಕಿಂತ ಏನೂ ಕಡಿಮೆಯಾಗಿಲ್ಲ. ಕೇವಲ ಒಳ್ಳೆಯ ಪದಾರ್ಥಗಳನ್ನು ಹಾಕಿದ ಮಾತ್ರಕ್ಕೆ ರುಚಿಯುಂಟಾಗುವುದೇ? ಅದಕ್ಕೂ ವಿದ್ಯೆ ಬೇಕು!

ಮಿಠಾಯಂಗಡಿಯವ— ಇನ್ನೇನಾದರೂ ತೆಗೆದುಕೊಳ್ಳಿರಿ. ಸ್ವಲ್ಪ ಖೋವಾವನ್ನು ರುಚಿ ನೋಡಿ!

ಮೋಟಾರಾಮ—ಬೇಕಾಗೇನೂ ಇಲ್ಲ; ಆದರೂ ಒಂದು ಪಾವಿನಷ್ಟು ಕೊಡಿ, ನೋಡೋಣ!

ಮಿಠಾಯಂಗಡಿಯವ —ಒಂದು ಪಾವೇ ಸಾಕೇ? ಬಹಳ ಚನ್ನಾಗಿದೆ; ಅರ್ಧ ಸೇರನ್ನಾದರೂ ತೆಗೆದುಕೊಳ್ಳಿ.

ಕಂಠಪೂರ್ತಿಯಾಗುವವರೆಗೂ ತಿಂದನಂತರ, ಸ್ವಲ್ಪ ಸಮಯ ಸುತ್ತಾಡುತ್ತಿದ್ದು ಒಂಭತ್ತು ಹೊಡೆಯುವ ಹೊತ್ತಿಗೆ ಪಂಡಿತಜೀಯವರು ಮನೆಗೆ ಬಂದರು. ಮನೆಯಲ್ಲಿ ಎಲ್ಲರೂ ಮಲಗಿಬಿಟ್ಟಿದ್ದರು. ಅವರು ಕುಳಿತಿದ್ದ ಕೊಠಡಿಯಲ್ಲಿ ಒಂದು ದೀಪವು ಮಾತ್ರ ಉರಿಯುತ್ತಿತ್ತು. ಅಲ್ಲಿದ್ದ ಚಾಪೆಯ ಮೇಲೆ ತಾವು ತಂದಿದ್ದ ಬಟ್ಟೆಗಳನ್ನು ಹಾಸಿಕೊಂಡು ಹಾಗೆಯೇ ಮಲಗಿಕೊಂಡರು.

ಪ್ರಾತಃಕಾಲ ಪದ್ಧತಿಯ ಪ್ರಕಾರ ಎಂಟು ಗಂಟೆಗೆ ಎದ್ದು ನೋಡಲಾಗಿ ಬಾಬೂಜೀಯವರು ಶತ–ಪಥ ತಿರುಗುತ್ತಿದ್ದರು. ಪಂಡಿತಜೀಯವರು ಎದ್ದುದನ್ನು ಕಂಡು, ಕೇಳಿದರು - ಪಂಡಿತಜೀ! ನೀವು ರಾತ್ರಿ ಎಲ್ಲಿ ಹೊರಟು ಹೋದಿರಿ? ನಾನು ಬಹಳ ಹೊತ್ತಿನವರೆಗೂ ನಿಮ್ಮ ಹಾದಿಯನ್ನು ಕಾಯುತ್ತ ಕುಳಿತಿದ್ದೆ. ಭೋಜನದ ಸಾಮಾನೆಲ್ಲವನ್ನೂ ಇದುವರೆಗೂ ಇರಿಸಲಾಗಿತ್ತು. ನೀವು ಬರದಿದ್ದುದನ್ನು ಕಂಡು ಈಗಷ್ಟೇ ಎಲ್ಲವನ್ನೂ ಹೊರಗಿರಿಸಿಬಿಟ್ಟರು. ನೀವು ಏನಾದರೂ ಫಲಾಹಾರ ಮಾಡಿದಿರೋ, ಇಲ್ಲವೋ?

ಮೋಟಾರಾಮ—ಮಿಠಾಯಂಗಡಿಯಲ್ಲಿ ಏನೋ ಸ್ವಲ್ಪ ತಿಂದು ಬಂದೆ!

ಭಾಲ—ಮಿಠಾಯಿ–ಮೇವಾಗಳನ್ನು ಮೆದ್ದ ಮಾತ್ರಕ್ಕೆ ಉಂಡಂತಾಗುವುದೇ? ಹತ್ತು-ಹನ್ನೆರಡಾಣೆಯ ತಿಂಡಿತಾನೇ ತಿಂದಿದ್ದರೂ ಹೊಟ್ಟೆ ತುಂಬಿರಲಾರದು! ನೀವು ನನ್ನ ಅತಿಥಿಗಳಾದ್ದರಿಂದ, ಅದಕ್ಕಾಗಿ ಖರ್ಚಾಗಿರುವ ದುಡ್ಡನ್ನು ತೆಗೆದುಕೊಳ್ಳಿ.

ಮೋಟಾರಾಮ—ಈ ಮೂಲೆಯಲ್ಲಿರುವ ನಿಮ್ಮ ಮಿಠಾಯಂಗಡಿಯವರಲ್ಲೇ ತಿಂದು ಬಂದೆನು.

ಭಾಲ—ಲೆಖ್ಖ ಎಷ್ಟಾಯಿತು?

ಮೋಟಾರಾಮ—ತಮ್ಮ ಲೆಖ್ಖದಲ್ಲೇ ಬರೆಸಿ ಬಂದಿರುವೆನು.

ಭಾಲ—ಎಷ್ಟು ಮಿಠಾಯಿಯನ್ನು ತೆಗೆದು ತಿಂದಿರೆಂದು ತಿಳಿಸಿಬಿಡಿ. ಇಲ್ಲವಾದರೆ ಅಂಗಡಿಯವನು ಸುಳ್ಳು ಲೆಖ್ಖ ಬರೆಯುಬಹುದು.

ಮೋಟಾರಾಮ—ಅದೇ! ಮೂರು ಸೇರು ಮಿಠಾಯಿ ಮತ್ತು ಅರ್ಧ ಸೇರು ಖೋವಾ!

ಬಾಬೂಜೀಯವರು ಆಶ್ಚರ್ಯದಿಂದ, ಅರಳಿದ ನೇತ್ರಗಳೊಡಗೂಡಿ ಪಂಡಿತಜೀಯವರನ್ನು ದುರುಗುಟ್ಟಿ ನೋಡಿದರು. ತಿಂಗಳೆಲ್ಲಾ ತಿಂದರೂ ಮನೆಯ ಮಿಠಾಯಿ ಲೆಖ್ಖ ಮೂರು ಸೇರಾಗುತ್ತಿರಲಿಲ್ಲ. ಅಂತಹದರಲ್ಲಿ ಈ ಮಹಾಶಯನೊಬ್ಬನೇ ನಾಲ್ಕು ಸೇರಿನಷ್ಟು ನುಂಗಿಬಂದಿರುವನಲ್ಲಾ! ಇನ್ನೂ ಒಂದೆರಡು ದಿನ ಇಲ್ಲೇ ಉಳಿದರೆ ನಾವು ಬದುಕುವಂತಿಲ್ಲ. ಹೊಟ್ಟೆಯೋ-ಕೆರೆಕಟ್ಟೆಯೋ? ನಾಲ್ಕು ಸೇರು ಮಿಠಾಯಿ! ಮಿತಿಯೇ ಇಲ್ಲವೇ? ಎಂದುಕೊಳ್ಳುತ್ತ ಉದ್ವಿಗ್ನಭಾವದಿಂದ ಒಳಕ್ಕೆ ಓಡಿಹೋಗಿ ರಂಗೀಲಿಯೊಡನೆ ಹೇಳಿದರು—ಕೇಳಿದೆಯಾ? ಈ ಮಹಾಶಯರು ನಿನ್ನೆ ರಾತ್ರಿ ನಾಲ್ಕು ಸೇರು ಮಿಠಾಯಿ ನುಂಗಿ ಬಂದಿರುವರು. ರಂಗೀಲೀಬಾಯಿಯು ಅಚ್ಚರಿಯಿಂದ ನುಡಿದಳು—ನಾಲ್ಕು ಸೇರು ಮಿಠಾಯಿ ತಿನ್ನುವದೆಂದರೇನು? ಇರಲಾರದು! ಮನುಷ್ಯನೇ ಅಥವಾ ಎಮ್ಮೆಯೇ?

ಭಾಲ—ನಾಲ್ಕು ಸೇರೆಂದು ಅವನು ನುಡಿಯುತ್ತಿರುವನು. ಆದರೆ ಐದು ಸೇರಿಗಿಂತ ಕಡಿಮೆ ತಿಂದಿರಲಾರನೆಂದು ನನ್ನ ನಂಬಿಕೆ.

ರಂಗೀಲಿ—ಅಬ್ಬಾ! ಅವನ ಹೊಟ್ಟೆಯಲ್ಲೇನು ಹೊಕ್ಕಿದೆ?

ಭಾಲ—ಈ ದಿನ ಇಲ್ಲೇ ಇದ್ದರೆ, ಐದು ಸೇರಿನಿಂದ ಆರು ಸೇರಿಗೇರುವದು.

ರಂಗೀಲಿ—ಈ ದಿನ ಇರಬೇಕಾದರೂ ಏಕೆ? ಪತ್ರಕ್ಕೆ ಏನುತ್ತರ ಕೊಡುವಿರೋ ಅದನ್ನು ತಿಳಿಸಿ, ಅವನನ್ನು ಕಳುಹಿಸಿಬಿಡಿ. ಅಥವಾ ಹಾಗೆ ನಿಂತರೆ, ನವುಗೆ ಮಿಠಾಯಿ ಸುಮ್ಮನೆ ಸಿಗುವುದಿಲ್ಲವೆಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಡಿ! ಬೇಕಾದರೆ ಹುಗ್ಗಿಯನ್ನು ಮಾಡಿಸಿ ತಿನ್ನಲಿ; ಇಲ್ಲವಾದರೆ ಅವನ ಹಾದಿ ಹಿಡಿಯಲಿ!

ಆದರೆ ಪಂಡಿತಜೀಯವರು ಹೊರಡಲು ಸಿದ್ಧರಾಗಿಯೇ ಕುಳಿತಿದ್ದರು. ಆದ್ದರಿಂದ ಬಾಬೂ ಸಾಹೇಬರಿಗೆ ಕುಶಲತೆಯಿಂದ ಮಾತನಾಡಬೇಕಾದ ಅವಶ್ಯಕತೆಯುಂಟಾಗಲಿಲ್ಲ.

'ಇದೇನು, ಹೊರಡಲು ಸಿದ್ಧರಾಗಿಬಿಟ್ಟಿರಾ?' ಎಂದರು.

ಮೋಟಾರಾಮು—ಹೌದು, ಇನ್ನು ಹೊರಡುವೆನು. ಒಂಭತ್ತು ಗಂಟೆಯ ಗಾಡಿ ಸಿಗುವುದಷ್ಟೇ?

ಭಾಲ—'ಈ ಹೊತ್ತು ಒಂದು ದಿವಸ ಇದ್ದು ಹೋಗಬಾರದೇ?' ಎಂದು ಹೇಳುತ್ತಿದ್ದಂತೆಯೇ, ನಿಜವಾಗಿಯೂ ಎಲ್ಲಿ ಇದ್ದುಬಿಡುವರೋ ಎಂದು ಅವರಿಗೆ ಭಯುವಾಯಿತು. ಆದ್ದರಿಂದ ಒಡನೆಯೇ ಅವರು ನುಡಿದರು—ಪಾಪ! ಅಲ್ಲಿ ಎಲ್ಲರೂ ನಿಮ್ಮ ನಿರೀಕ್ಷಣೆಯಲ್ಲೇ ಇರಬಹುದು!

ಮೋಟಾರಾಮು—ಒಂದೆರಡು ದಿನಗಳ ವಿಷಯವಲ್ಲ; ನನಗೂ ತ್ರಿವೇಣೀ ಸ್ನಾನ ಮಾಡಿ ಹೋಗಬೇಕೆಂಬ ಮಹದಾಸೆಯಿತ್ತು. ಆದರೆ ತಾವೇನೂ ತಿಳಿದುಕೊಳ್ಳದಿದ್ದರೆ ಹೇಳುವೆನು—ನಿಮ್ಮಗಳಿಗೆ ಬ್ರಾಹ್ಮಣರೆಂದರೆ ಸ್ವಲ್ಪ ಮಾತ್ರವೂ ಶ್ರದ್ಧೆಯಿಲ್ಲ, ಮರ್ಯಾದೆಯಿಲ್ಲ! ನಮ್ಮ ಯಜಮಾನರೂ ಇರುವರು; ನಮ್ಮ ಮಾತೆಂದರೆ ಎಷ್ಟು ಆದರ-ಗೌರವ? ನಾವು ಅವರ ಬಾಗಿಲಿಗೆ ಬಂದೊಡನೆಯೇ ತಾವು ಧನ್ಯರಾದೆವೆಂದು ತಿಳಿಯುವರು. ಮತ್ತು ಮನೆ ಮಂದಿಯೆಲ್ಲರೂ ನಮ್ಮ ಸೇವೆ-ಸತ್ಕಾರದಲ್ಲಿ ಸನ್ನದ್ಧರಾಗುವರು. ಎಲ್ಲಿ ಆದರವಿಲ್ಲವೋ ಅಲ್ಲಿ ನಾನೊಂದು ಕ್ಷಣವೂ ಇರಲಾರೆ. ಬ್ರಾಹ್ಮಣರ ಮರ್ಯಾದೆ ಇಲ್ಲದೆಡೆಯಲ್ಲಿ ಕಲ್ಯಾಣವಿಲ್ಲ!

ಭಾಲ—ಪಂಡಿತಜೀ! ನಮ್ಮಿಂದ ಅಂತಹ ಅಪರಾಧವಾದರೂ ಏನಾಯಿತು?

ಮೋಟಾರಾಮು—ಅಪರಾಧವಾಗಲಿಲ್ಲವೇ? ಅಪರಾಧವೆಂದರೆ ಮತ್ತೇನೆಂದು ತಿಳಿದಿರುವಿರಿ? ಈಗತಾನೇ ನೀವು ಒಳಕ್ಕೆ ಹೋಗಿ ಈ ಮಹಾಶಯರು

ನಾಲ್ಕು ಸೇರು ಮಿಠಾಯಿ ತಿಂದು ಬಂದರೆಂದು ಹೇಳಲಿಲ್ಲವೇ ? ಇನ್ನೂ ತಿನ್ನು ವವರನ್ನಾದರೂ ನೀವೇನು ನೋಡಿರುವಿರಿ ? ಇಪ್ಪತ್ತೈದು ಸೇರು ಮಿಠಾಯಿ ಯನ್ನು ತಿಂದರೂ ತೇಗದಿರುವಂತಹ ಮಹಾಪುರುಷರಿದ್ದಾರೆ ! ಮಿಠಾಯಿ ಯನ್ನು ತಿನ್ನ ಹೇಳಿ, ಒಂದು ರೂಪಾಯಿಯನ್ನು ಕೊಡಲು ಬರುವಿರಿ. ನಾವು ನಿಮ್ಮ ದ್ವಾರದಲ್ಲಿ ಬಂದು ಬಿದ್ದಿರುವ ಭಿಕ್ಷುಕ ಬ್ರಾಹ್ಮಣರೆಂದು ಬಗೆ ದಿರಾ ? ತಮ್ಮ ಹೆಸರನ್ನು ಕೇಳಿ, ಗೌರವಿಸಿ ಬಂದೆನು. ಆದರೆ ಇಲ್ಲಿ ಒಂದು ಹೊತ್ತಿನ ಊಟಕ್ಕೆ ಸಹ ಉಪವಾಸವೆಂದು ತಿಳಿಯಲಿಲ್ಲ. ಆದರೂ ಚಿಂತೆ ಯಿಲ್ಲ; ಪರಮಾತ್ಮನು ನಿಮಗೆ ಕಲ್ಯಾಣವನ್ನುಂಟುಮಾಡಲಿ.

ಬಾಬೂ ಸಾಹೇಬರಿಗೆ ಮುಖಮುರಿದು, ಮುಂದೆ ಮಾತನಾಡದಂತಾ ಯಿತು. ಅವರ ಜೀವನದಲ್ಲಿ ಎಂದೂ ಯಾರೂ ಅವರನ್ನು ಈ ರೀತಿ ಖಂಡಿಸಿ ನುಡಿದಿರಲಿಲ್ಲ. ಮಾತನ್ನು ಮರೆಮಾಚಲು ಎಷ್ಟೋ ಯತ್ನಿಸಿದರು. 'ತಮ್ಮ ವಿಷಯವಲ್ಲ. ಯಾರೋ ಬೇರೆ ಮಹಾಶಯರ ವಿಷಯ ಮಾತನಾಡುತ್ತಿದ್ದೆವು.' ಎಂದರು. ಆದರೆ ಪಂಡಿತಜೀಯವರ ಕ್ರೋಧವು ಕಡಿಮೆಯಾಗಲಿಲ್ಲ. ಅವರು ಮತ್ತೇನನ್ನಾದರೂ ಸಹಿಸುತ್ತಿದ್ದರು; ಆದರೆ ಹೊಟ್ಟೆಯ ನಿಂದೆಯನ್ನು ಮಾತ್ರ ಸಹಿಸುತ್ತಿರಲಿಲ್ಲ. ಸ್ತ್ರೀಯರಿಗೆ ತಮ್ಮ ರೂಪ ನಿಂದೆಯು ಎಷ್ಟು ಅಪ್ರಿಯವೋ, ಪುರುಷರಿಗೆ ತಮ್ಮ ಹೊಟ್ಟೆಯ ನಿಂದೆಯೂ ಅಷ್ಟೇ ಅಪ್ರಿಯ ! ಬಾಬೂ ಸಾಹೇಬರು ಸಮಾಧಾನವೇನೋ ಹೇಳುತ್ತಿದ್ದರು; ಆದರೆ ಎಲ್ಲಿ ನಿಂತುಬಿಡುವರೋ ಎಂದು ಹಿಂದೆಯೇ ಹೆದರುತ್ತಿದ್ದರು. ತಮ್ಮ ಕೃಪಣತೆಯು ತಿಳಿದುಹೋಯಿತಲ್ಲಾ–ಎಂದು ಬಹಳ ಪೇಚಾಡಿಕೊಂಡರು; ಮತ್ತು ಅದನ್ನು ಬಚ್ಚಿಡಲು ಸಾಕಷ್ಟು ಪ್ರಯತ್ನ ಮಾಡಿದರು. 'ಈ ಮಾತನ್ನು ತಿಳಿಸಲು ಒಳ ಗಡೆಗೇಕಾದರೂ ಹೋದೆ ? ಈ ಮಹಾಶಯನು ಕಿವಿಕೊಟ್ಟು ಕೇಳುತ್ತಲೇ ಕುಳಿತಿದ್ದನು. ಯಾವ ಪಾಪಿಯ ಮುಖ ನೋಡಿದೆನೋ, ಈ ದಿನ ಇಂತಹ ವಿಪತ್ತು ಒದಗಿತು. ಇವನು ಇಲ್ಲಿಂದ ಕೋಪಿಸಿಕೊಂಡು ಹೊರಟುಹೋದರೆ ಆ ಊರಿನಲ್ಲೆಲ್ಲಾ ನಮ್ಮನ್ನು ನಿಂದಿಸುವನು; ನಮ್ಮ ಗುಟ್ಟೆಲ್ಲಾ ರಟ್ಟಾಗು ವುದು. ಆದ್ದರಿಂದ ಇನ್ನು ಹೇಗಾದರೂ ಮಾಡಿ ಇವನ ಬಾಯನ್ನು ಮುಚ್ಚ ಬೇಕು'–ಎಂದು ಯೋಚಿಸಿಕೊಳ್ಳುತ್ತಾ ಮನೆಯೊಳಕ್ಕೆ ಹೋಗಿ, ಹೆಂಡತಿ ಯೊಡನೆ ಹೇಳಿದರು—ಈ ದುಷ್ಟನು ನಮ್ಮ ಮಾತುಗಳನ್ನೆಲ್ಲಾ ಕೇಳಿ ಕೊಂಡಿರುವನು; ಮತ್ತು ಕೋಪದಿಂದ ಹೊರಟುಹೋಗುತ್ತಿರುವನು.

ರಂಗೀಲಿ— ಅವನು ಬಾಗಿಲಲ್ಲಿ ನಿಂತಿರುವನೆಂದು ತಿಳಿದೂತಿಳಿದೂ ನೀವು ಮೆಲ್ಲಗೇಕೆ ಮಾತನಾಡಲಿಲ್ಲ ?

ಭಾಲ—ವಿಪತ್ತಿ ಒದಗಬೇಕಾದರೆ ಹೀಗೆಯೇ! ಅವನು ಕಿವಿಗೊಟ್ಟು ಕೇಳುತ್ತಿರುವನೆಂದು ನನಗೇನು ಗೊತ್ತಿತ್ತು ?

ರಂಗೀಲಿ—ಬೆಳಗಾಗಿ ಯಾರ ಮುಖವನ್ನು ನೋಡಿದ್ದಿರೋ ?

ಭಾಲ— ಇದೇ ದುಷ್ಟನು ಎದುರಿಗೆ ಮಲಗಿದ್ದನು; ತಿಳಿದಿದ್ದರೆ ಅತ್ತ ಕಡೆ ತಿರುಗಿ ಸಹ ನೋಡುತ್ತಿರಲಿಲ್ಲ. ಈಗ ಇವನಿಗೇನಾದರೂ ಸ್ವಲ್ಪ ಕೈಗಿತ್ತು ಸಮಾಧಾನ ಮಾಡಬೇಕು !

ರಂಗೀಲಿ—ಹೂಂ ! ಹೋಗಲಿ, ಬಿಡಿ ! ಅಲ್ಲಿಯ ವಿವಾಹವನ್ನೇ ಮಾಡಿ ಕೊಳ್ಳದಿರುವಾಗ ಇವನದೇನು ಪರಿವೆ ? ಏನಾದರೂ ತಿಳಿದುಕೊಳ್ಳಲಿ, ಏನು ಬೇಕಾದರೂ ಆಡಿಕೊಳ್ಳಲಿ !

ಭಾಲ— ಇಲ್ಲ, ಹಾಗಾಗುವುದಿಲ್ಲ ! ಎಲ್ಲಿ ? ಹತ್ತು ರೂಪಾಯಿಗಳನ್ನು ತೆಗೆದುಕೊಂಡು ಬಾ ! ಹೋಗುವ ಸಮಯದಲ್ಲಿ ಅವನ ಕೈಗೆ ಕೊಡುವೆನು. ಭಗವಂತನ ಕೃಪೆಯಿಂದ ಇನ್ನಿಂತಹ ಸಹವಾಸ ಸಿಗದಿರಲಿ ! ರಂಗೀಲಿಯು ಮನಸಿನಲ್ಲೇ ಕೊರಗುತ್ತ, ಹತ್ತು ರೂಪಾಯಿಗಳನ್ನು ತಂದು ಬಾಬೂಜೀ ಯವರ ಕೈಗಿತ್ತಳು. ಅವರು ಅದನ್ನು ಪಂಡಿತಜೀಯವರಿಗೆ ತಂದೊಪ್ಪಿ ಸಿದರು. ಪಂಡಿತಜೀಯವರು ಮನಸ್ಸಿನಲ್ಲೇ ಅಂದುಕೊಂಡರು—ಎಲವೋ ಜಿಪುಣಾಗ್ರೇಸರ ! ಎಂದೆಂದೂ ನೆನಿಸಿಕೊಳ್ಳುವಂತೆ ನಿನಗೆ ಚೆನ್ನಾಗಿ ಕೈಕೊಟ್ಟೆ! ಹತ್ತು ರೂಪಾಯಿಗಳನ್ನು ಕೊಟ್ಟು, ನನ್ನ ಬಾಯಿ ಮುಚ್ಚಬೇಕೆಂದು ಬಗೆ ದೆಯಾ ? ನಿನ್ನ ಒಳಗುಟ್ಟೆಲ್ಲವೂ ರಟ್ಟಾಯಿತು !–ಎನ್ನುತ್ತ ಆ ರೂಪಾಯಿ ಗಳನ್ನು ಸೊಂಟದಲ್ಲಿ ಸಿಗಿಸಿ, ಆಶೀರ್ವಾದ ಮಾಡಿ, ತಮ್ಮ ಹಾದಿ ಹಿಡಿದರು.

ಬಾಬೂಜೀಯವರು ಬಹಳ ಹೊತ್ತಿನ ವರೆಗೂ ಅಲ್ಲೇ ನಿಂತು ಯೋಚಿ ಸುತ್ತಿದ್ದರು—ಇನ್ನೂ ನನ್ನನ್ನು ಕೃಪಣನೆಂದೇ ಕಾಣುವನೋ ? ಅಥವಾ ಮನಸು ಮಾರಿತೋ ? ಈ ಹತ್ತು ರೂಪಾಯಿಗಳೂ ಬೂದಿಯಲ್ಲಿ ಹೋಮ ಮಾಡಿದಂತಾಗುವುದೋ, ಏನೋ !

# ನಾಲ್ಕನೆಯ ಪರಿಚ್ಛೇದ

ಕಲ್ಯಾಣಿಯು ಈಗ ಒಂದು ವಿಷಮ-ಸಮಸ್ಯೆಯಲ್ಲಿ ಸಿಲುಕಿಕೊಂಡಳು. ಪತಿಯು ಸ್ವರ್ಗಸ್ಥರಾದ ನಂತರ ಇದೇ ಅವಳ ಮೊದಲನೆಯ ಕಟು ಅನುಭವ. ದರಿದ್ರ ವಿಧವೆಗೆ, ಮನೆಯಲ್ಲಿ ಮದುವೆಯಾಗದ ಪ್ರಾಯದ ಪುತ್ರಿಯನ್ನು ಇರಿಸಿಕೊಂಡಿರುವುದಕ್ಕಿಂತ ಬೇರೆ ವಿಪತ್ತಿ ಇನ್ನಾವುದು? ಗಂಡು ಮಕ್ಕಳಾದರೆ ಒಳ್ಳೆಯ ಬಟ್ಟೆಗಳಿಲ್ಲದೆ ಸಹ ಓದಲು ಹೋಗಬಹುದು; ಅಥವಾ ಮನೆ ಕೆಲಸಗಳನ್ನೆಲ್ಲಾ ತಾವೇ ಮಾಡಿಕೊಂಡು, ಸಿಕ್ಕದ್ದನ್ನು ತಿಂದು ಕಾಲಹರಣ ಮಾಡಬಹುದು; ಜೋಪಡಿಯಲ್ಲಾದರೂ ದಿನಗಳನ್ನು ದಬ್ಬಬಹುದು. ಆದರೆ ಪ್ರಾಯದ ಕನ್ಯೆಯನ್ನು ಮನೆಯಲ್ಲಿರಿಸಿಕೊಂಡಿರುವುದು ದುಸ್ಸಹ!

ಭಾಲಚಂದ್ರ ಬಾಬುಗಳ ವಿಷಯದಲ್ಲಿ ಕಲ್ಯಾಣಿಗೆ ಬಹಳ ಕ್ರೋಧ ಉಂಟಾಯಿತು. ತಾನೇ ಹೋಗಿ ಅವರ ಮುಖಕ್ಕೆ ಮಸಿ ಹಚ್ಚಿ ಬರಲೇ, ಎನ್ನುವಷ್ಟು ಮನಸಿಗೆ ಮಹಾ ರೋಷ ಉಂಟಾಯಿತು. ಕೊಟ್ಟ ಭಾಷೆಗೆ ತಪ್ಪಿದ ನೀನೆಂತಹ ಕಪಟಿ, ಎನ್ನಲೇ?–ಎನ್ನುವಷ್ಟು ಸಿಟ್ಟುಂಟಾಯಿತು. ಪಂಡಿತ ಮೋಟಾರಾಮರು ಅವರ ಕಪಟಲೀಲೆಯನ್ನೆಲ್ಲಾ ವಿಸ್ತಾರವಾಗಿ ವರ್ಣಿಸಿದ್ದರು. ಅವಳು ಕ್ರೋಧದಿಂದ ಕಳವಳಗೊಂಡು ಕುಳಿತಿರುವ ವೇಳೆಗೆ ಸರಿಯಾಗಿ ಕೃಷ್ಣಳು ಆಟವಾಡುತ್ತ ಅಲ್ಲಿಗೆ ಬಂದು ಕೇಳಿದಳು— ಇನ್ನೆಷ್ಟು ದಿವಸಕ್ಕೆ ಮದುವೆಯಮ್ಮಾ? ಪಂಡಿತಜೀಯವರು ಬಂದುಬಿಟ್ಟರಲ್ಲಾ? ಬೀಗರು ಬರುವುದೆಂದು?

ಕಲ್ಯಾಣಿ—ಬೀಗರ ಬರುವಿಕೆಯ ಮತ್ತು ಮದುವೆಯ ಕನಸನ್ನು ಕಂಡೆಯಾ?

ಕೃಷ್ಣಾ—ಇನ್ನು ಎರಡು-ಮೂರು ದಿನಗಳಲ್ಲೇ ಮದುವೆಯೆಂದು ಚಂದ್ರನು ಹೇಳುತ್ತಿದ್ದನಲ್ಲಾ! ಬೀಗರು ಬರುವುದಿಲ್ಲವೇ, ಅಮ್ಮಾ?

ಕಲ್ಯಾಣಿ—ಒಂದು ಬಾರಿ ಹೇಳಿದರೆ, ಪುನಃ-ಪುನಃ ಕೇಳಿ ನನ್ನ ತಲೆ ತಿನ್ನಬೇಡ!

ಕೃಷ್ಣಾ—ಎಲ್ಲರ ಮನೆಯಲ್ಲೂ ಮದುವೆ, ಬೀಗರ ಔತಣ! ನಮ್ಮ ಮನೆಯಲ್ಲೇಕಿಲ್ಲವಮ್ಮಾ?

ಕಲ್ಯಾಣಿ—ಇಲ್ಲಿಗೆ ಬರಬೇಕಾಗಿದ್ದ ಬೀಗರ ಮನೆಗೆ ಬೆಂಕಿಬಿದ್ದು ಹೋಯಿತು, ಹೋಗು !

ಕೃಷ್ಣಾ—ನಿಜವಾಗಿಯೂ ಹೌದೇನಮ್ಮಾ? ಹಾಗಿದ್ದರೆ ಇದುವರೆಗೆ ಅವರ ಮನೆಯೆಲ್ಲಾ ಸುಟ್ಟುಹೋಗಿರಬಹುದಲ್ಲವೇ ? ಅವರೆಲ್ಲಾ ಎಲ್ಲಿರುವರು? ಅಕ್ಕನು ಹೋಗಿ ಎಲ್ಲಿರುವಳು ?

ಕಲ್ಯಾಣಿ—ಅಯ್ಯೋ, ಹುಚ್ಚು ಹುಡುಗಿ ! ನಿನಗೇನು ಹೇಳಲಿ ? ನಿಜ ವಾಗಿಯೂ ಬೆಂಕಿ ಬಿದ್ದಿಲ್ಲ ! ಅವರು ನಮ್ಮ ಮನೆಯ ಮದುವೆ ಮಾಡಿ ಕೊಳ್ಳುವುದಿಲ್ಲ.

ಕೃಷ್ಣಾ—ಏಕಮ್ಮಾ ? ಮೊದಲು ಅಲ್ಲಿ ನಿಶ್ಚಯವಾಗಿರಲಿಲ್ಲವೇ ?

ಕಲ್ಯಾಣಿ—ಹೆಚ್ಚಾಗಿ ಹಣವನ್ನು ಕೇಳುವರು ಮಗು. ಅವರಿಗೆ ಕೊಡಲು ಅಷ್ಟೊಂದು ಹಣ ನನ್ನ ಹತ್ತಿರ ಎಲ್ಲಿಯದು ?

ಕೃಷ್ಣಾ—ಹಾಗಾದರೆ ಅವರು ಬಹಳ ದುರಾಸೆಯ ಮನುಷ್ಯರೇನಮ್ಮಾ?

ಕಲ್ಯಾಣಿ—ದುರಾಸೆಯವರಲ್ಲದೆ ಮತ್ತೇನು ? ಕಟುಕರು, ನಿರ್ದಯಿ ಗಳು, ದ್ರೋಹಿಗಳು !

ಕೃಷ್ಣಾ—ಹಾಗಿದ್ದರೆ ಅಕ್ಕನು ಅವರ ಮನೆಗೆ ಮದುವೆಯಾಗದಿದ್ದುದೇ ಒಳ್ಳೆಯದಾಯಿತು ! ಅಕ್ಕನು ಅವರ ಸಂಗಡ ಹೇಗಿರುವಳು ? ಇದಕ್ಕಾಗಿ ನಾವು ಸಂತೋಷಿಸಬೇಕು; ನೀನು ದುಃಖಿಸುವೆ ಏಕಮ್ಮಾ ?

ಕಲ್ಯಾಣಿಯು ಮಗಳನ್ನು ಸ್ನೇಹಮಯ ದೃಷ್ಟಿಯಿಂದ ದಿಟ್ಟಿಸಿದಳು. ನಿಜವಾಗಿಯೂ ಇವಳ ಮಾತು ಸತ್ಯ ! ಸರಳ ಶಬ್ದಗಳಲ್ಲಿ ಸಮಸ್ಯೆಯ ಎಂತಹ ಮಾರ್ಮಿಕ ನಿರೂಪಣೆ ! ಅಂತಹ ಮಹಾ ದ್ರೋಹಿಗಳಿಗೆ ಮಗಳನ್ನು ಕೊಡದಿರುವಂತಾದುದಕ್ಕಾಗಿ ನಿಜವಾಗಿಯೂ ಸಂತೋಷಿಸಬೇಕು. ಇದರಲ್ಲಿ ದುಃಖದ ವಿಷಯವೇನಿದೆ ? ಇಂತಹ ನೀಚರ ನಡುವೆ ನಮ್ಮ ನಿರ್ಮಲೆ ಯಾದರೂ ಹೇಗೆ ನಿರ್ವಹಿಸುವಳು. ತನ್ನ ಅದೃಷ್ಟಕ್ಕಾಗಿ ಅಳಬೇಕಾಗುತ್ತಿತ್ತು. ಅನ್ನವು ಸ್ವಲ್ಪ ಹೆಚ್ಚಾಗಿ ಬೆಂದರೆ ಬೈಗಳ ಸುರಿಮಳೆಯು ಕರೆಯುತ್ತಿತ್ತು. ಹುಡುಗನೂ ಸಹ ಮಹಾ ಲೋಭಿಯಂತೆಯೇ ತೋರುವನು. ಅಲ್ಲಿ ವಿವಾಹ ವಾಗದಿದ್ದುದು ಒಂದು ವಿಧದಲ್ಲಿ ಒಳ್ಳೆಯದೇ ಆಯಿತು !—ಎನ್ನುತ್ತಾ ಕಲ್ಯಾಣಿಯು ಅಲ್ಲಿಂದ ಎದ್ದಳು. ಅವಳ ಹೃದಯದ ಭಾರವು ತುಸು ಇಳಿ ದಂತಾಯಿತು.

ಆದರೆ ಅದೇ ವರ್ಷ ಮದುವೆಯನ್ನೇನೋ ಮಾಡಬೇಕಾಗಿತ್ತು. ಇಲ್ಲದಿದ್ದರೆ, ಮುಂದಿನ ವರ್ಷ ಅದಕ್ಕಾಗಿ ಎಲ್ಲ ಸಿದ್ಧತೆಗಳನ್ನೂ ಬೇರೆ ಮಾಡಿಕೊಳ್ಳಬೇಕಾಗುತ್ತಿತ್ತು. ಈಗವಳು ಒಳ್ಳೆಯ ಮನೆ, ಒಳ್ಳೆಯ ವರನೆಂದು ಯೋಚಿಸುವಂತೆ ಸಹ ಇರಲಿಲ್ಲ. ಆ ಅನಾಥ ವಿಧವೆಗೆ ಒಳ್ಳೆಯ ಮನೆ ಮತ್ತು ವರನು ಸಿಗುವುದಾದರೂ ಹೇಗೆ? ಮುಖ್ಯವಾಗಿ, ಹೇಗಾದರೂ ಮಗಳಿಗೆ ಮದುವೆ ಮಾಡಬೇಕಾಗಿತ್ತು. ಕನ್ಯೆಯು ರೂಪವತಿ, ಗುಣಶಾಲಿ, ಚತುರೆ. ಆದರೇನು? ವರದಕ್ಷಿಣೆ ಇಲ್ಲದಿದ್ದರೆ ಅವಳ ಗುಣಗಳೆಲ್ಲವೂ ದೋಷಗಳೇ! ವರದಕ್ಷಿಣೆ ಇದ್ದರೆ ಅವಳ ದೋಷಗಳೆಲ್ಲವೂ ಗುಣಗಳಾಗುತ್ತಿತ್ತು! ಆಹಾ! ಎಂತಹ ವಿಷಮ ಭಾಗ್ಯಲೀಲೆ!

ಕಲ್ಯಾಣಿಯ ದೋಷವೂ ಕಡಿಮೆಯೆಂದು ಹೇಳುವಂತಿರಲಿಲ್ಲ. ಅಬಲೆ ಮತ್ತು ವಿಧವೆಯಾದ ಮಾತ್ರಕ್ಕೆ ಅವಳು ದೋಷಗಳಿಂದ ಮುಕ್ತಳಾದಳೇ? ಅವಳಿಗೆ ತನ್ನ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳನ್ನು ಕಂಡರೆ ಪ್ರೀತಿ ಹೆಚ್ಚು. ಗಂಡು ಮಕ್ಕಳಿಗಾಗಿ, ನಂತರ ಉಳಿದದ್ದು ಹೆಣ್ಣು ಮಕ್ಕಳಿಗೆಂದು ಅವಳ ಭಾವನೆಯಾಗಿತ್ತು. ಸ್ವಂತ ಮನೆಯಿತ್ತು, ನಗದು ಹಣವಿತ್ತು, ಮತ್ತು ಸಹಸ್ರಾರು ರೂಪಾಯಿಗಳ ಒಡವೆಗಳಿವೆ. ಆದರೆ ಇನ್ನೂ ಎರಡು ಗಂಡು ಮಕ್ಕಳ ಪಾಲನೆ–ಪೋಷಣೆ ಮತ್ತು ವಿದ್ಯಾಭ್ಯಾಸದ ಭಾರವು ಅವಳ ತಲೆಯ ಮೇಲಿತ್ತು. ಕೊನೆಯ ಕನ್ಯೆಗೂ ಇನ್ನು ನಾಲ್ಕೈದು ವರ್ಷಗಳಲ್ಲೇ ಮದುವೆ ಮಾಡಬೇಕಾಗಿತ್ತು. ಗಂಡು ಮಕ್ಕಳಿಗೆ ಹೆಸರಿಗಾದರೂ ಸ್ವಲ್ಪ ತಂದೆಯ ಆಸ್ತಿಯನ್ನು ಉಳಿಸಬೇಡವೇ? ಆದ್ದರಿಂದ ವರದಕ್ಷಿಣೆಗೆ ಹೆಚ್ಚು ಹಣ ಕೊಡಲು ಅವಳಿಗೆ ಸಾಧ್ಯವಿರಲಿಲ್ಲ.

ಪಂಡಿತ ಮೋಟಾರಾಮರು ಲಕ್ನೋವಿನಿಂದ ಹಿಂತಿರುಗಿ ಹದಿನೈದು ದಿನಗಳಾಗಿದ್ದವು. ಹಿಂತಿರುಗಿದ ಮರುದಿನದಿಂದಲೇ ಅವರು ವರನನ್ನು ಹುಡುಕಲು ಹೊರಟಿದ್ದರು. 'ಈ ಲಕ್ನೋ ಜನರಿಗೆ ಚನ್ನಾಗಿ ಬುದ್ಧಿ ಕಲಿಸಬೇಕು. ಪ್ರಪಂಚದಲ್ಲಿ ನೀವೊಬ್ಬರೇ ಅಲ್ಲ; ನಿಮ್ಮಂತೆಯೇ ಬೇರೆ ಬೇಕಾದಷ್ಟು ಮಂದಿ ಇರುವರು, ಎಂದು ಇವರಿಗೆ ತೋರಿಸಿಕೊಡಬೇಕು'–ಎಂಬುದಾಗಿ ಪ್ರತಿಜ್ಞೆ ಮಾಡಿಕೊಂಡಿದ್ದರು. ಕಲ್ಯಾಣಿಯು ಪ್ರತಿದಿವಸವೂ ದಿನಗಳನ್ನೆಣಿಸುತ್ತಿದ್ದಳು. ಇಂದು ಅವಳು ಅವರಿಗೆ ಪತ್ರ ಬರೆಯಬೇಕೆಂದು ಯೋಚಿಸಿ, ಕಾಗದ

ಮುಸಿಕುಡಿಕೆ, ಲೇಖನಿಗಳನ್ನಿಟ್ಟುಕೊಂಡು ಕುಳಿತುಕೊಂಡಳು. ಅಷ್ಟರಲ್ಲೇ ಪಂಡಿತ ಮೋಟಾರಾಮರು ಪದಾರ್ಪಣ ಮಾಡಿದರು.

ಕಲ್ಯಾಣಿ—ದಯಮಾಡಿ ಪಂಡಿತಜೀ! ನಾನು ಈಗ ತಾನೇ ನಿಮಗೆ ಪತ್ರ ಬರೆಯೋಣವೆಂದು ಕುಳಿತುಕೊಂಡೆ. ಯಾವಾಗ ಹಿಂತಿರುಗಿದಿರಿ?

ಮೋಟಾರಾಮ—ಪ್ರಾತಃಕಾಲವೇ ಹಿಂತಿರುಗಿ ಬಂದೆ. ಆ ಹೊತ್ತಿಗೆ ಸರಿಯಾಗಿ ಭಾರಿಯ ಒಬ್ಬ ಸೇಠರಿಂದ ಆಹ್ವಾನ ಬಂದಿತ್ತು. ವೃಷ್ಟಾನ್ನ ಭೋಜನವನ್ನುಂಡು ಬಹಳ ದಿನಗಳಾಗಿದ್ದುವು. ಆದ್ದರಿಂದ ಅವರ ಆಹ್ವಾನ ವನ್ನು ಸ್ವೀಕರಿಸಿ ಅಲ್ಲಿಗೆ ಹೋಗಿದ್ದೆ. ಈಗ ಅಲ್ಲಿಂದಲೇ ಬರುತ್ತಿರುವೆನು. ಸುಮಾರು ಐನೂರು ಮಂದಿ ಬ್ರಾಹ್ಮಣರು ಆಹ್ವಾನಿಸಲ್ಪಟ್ಟಿದ್ದರು.

ಕಲ್ಯಾಣಿ— ಹೊರಟ ಕಾರ್ಯವು ಏನಾದರೂ ಕೈಗೂಡಿತೇ?

ಮೋಟಾರಾಮ—ಹೊರಟ ಕಾರ್ಯ ಕೈಗೂಡಲಿಲ್ಲವೇಕೆ? ಐದು ಕಡೆ ಗಳಲ್ಲಿ ಮಾತನಾಡಿ ಬಂದಿರುವೆನು. ಐದು ಕಡೆಯ ಭಾವಚಿತ್ರಗಳನ್ನೂ ತಂದಿರುವೆನು ಅದರಲ್ಲಿ ನಿಮಗೆ ಯಾವ ವರನು ಮನಸ್ಸಿಗೊಪ್ಪುವನೋ ನೋಡಿ! ಇದೋ ನೋಡಿ! ಈ ಹುಡುಗನ ತಂದೆಯು ಪೋಸ್ಟಾಫೀಸಿನಲ್ಲಿ ನೂರು ರೂಪಾಯಿಗಳ ಕೆಲಸದಲ್ಲಿರುವರು. ಹುಡುಗನು ಇನ್ನೂ ಕಾಲೇಜಿನಲ್ಲಿ ಓದುತ್ತಿರುವನು. ಇಷ್ಟರಲ್ಲೇ ಅವನಿಗೂ ಕೆಲಸ ಸಿಗುವುದು. ಆದರೆ ಆಸ್ತಿ-ಪಾಸ್ತಿ ಏನೂ ಇಲ್ಲ. ಹುಡುಗನು ಬುದ್ಧಿವಂತನಂತೆ ಕಾಣುವನು. ಮನೆತನವು ಉತ್ತಮವಾದುದು. ಎರಡು ಸಾವಿರ ರೂಪಾಯಿಗಳಿಗೆ ಒಪ್ಪಿಕೊಳ್ಳಬಹುದು.

ಕಲ್ಯಾಣಿ—ಹುಡುಗನಿಗೆ ಅಣ್ಣತಮ್ಮಂದಿರು ಇರುವರೇ?

ಮೋಟಾರಾಮ—ಇಲ್ಲ, ಆದರೆ ಮೂವರು ತಂಗಿಯರಿರುವರು. ಮೂರು ಮಂದಿಯೂ ಅವಿವಾಹಿತರು. ತಾಯಿಯು ಜೀವಂತಳಾಗಿರುವಳು. ಇದೋ ಈ ಎರಡನೆಯ ಭಾವಚಿತ್ರವನ್ನು ನೋಡಿ! ಈ ಹುಡುಗನು ರೈಲ್ವೆ ಇಲಾಖೆಯಲ್ಲಿ ಐವತ್ತು ರೂಪಾಯಿ ಸಂಬಳದಲ್ಲಿರುವನು. ತಾಯಿ-ತಂದೆ ಗಳಾರೂ ಇಲ್ಲ. ಹುಡುಗನು ರೂಪವಂತ, ಗುಣವಂತ, ಮತ್ತು ಪುಷ್ಟಕಾಯ ನಾದ ಯುವಕ. ಆದರೆ ವಂಶವು ಅಷ್ಟೇನೂ ಉತ್ತಮವಾದುದಲ್ಲ. ತಾಯಿಯು ನಾಯಿಂದರವಳೆಂದು ಅಲ್ಲಿಯ ಜನರು ಆಡಿಕೊಳ್ಳುವರು. ತಂದೆಯು ಯಾವುದೋ ಪ್ರಾಂತ್ಯದ ಪೊಖ್ತಿಯಾರರು. ಸ್ವಲ್ಪ ಜಮೀನುದಾರಿಯೂ ಇದೆ;

ಆದರೆ ಅದರ ಮೇಲೆ ಕೆಲವು ಸಾವಿರ ರೂಪಾಯಿಗಳ ಸಾಲವಿದೆ. ವರದಕ್ಷಿಣೆ ಏನೂ ಕೊಡಬೇಕಾದುದಿಲ್ಲ. ಹುಡುಗನ ವಯಸ್ಸು ಸುಮಾರು ಇಪ್ಪತ್ತಿರ ಬಹುದು.

ಕಲ್ಯಾಣಿ—ಮನೆತನವು ಉತ್ತಮವಾಗಿದ್ದರೆ ಒಪ್ಪಿಕೊಳ್ಳಬಹುದಾ ಗಿತ್ತು. ನೋಡಿನೋಡಿಯೂ ನೊಣವನ್ನು ನುಂಗುವುದು ಹೇಗೆ?

ಮೋಟಾರಾಮ—ಮೂರನೆಯ ಭಾವಚಿತ್ರವನ್ನು ನೋಡಿ! ಇವ ನೊಬ್ಬ ಜಮೀನ್ದಾರರ ಮಗ. ವರ್ಷಕ್ಕೆ ಸಾವಿರ ರೂಪಾಯಿಗಳ ಆದಾಯ ವಿದೆ. ಸ್ವಲ್ಪ ಗದ್ದೆ ತೋಟಗಳೂ ಇವೆ. ಹುಡುಗನು ಅಷ್ಟೇನೂ ಓದಿಲ್ಲ. ಆದರೆ ಕಛೇರಿಯ ಕೆಲಸದಲ್ಲಿ ಬಹಳ ಚತುರನು. ಎರಡನೆಯ ವರ; ಮೊದಲ ನೆಯ ಹೆಂಡತಿಯು ಹೋಗಿ ಎರಡು ವರ್ಷಗಳಾಗಿವೆ. ಸಂತಾನಗಳಾವುದೂ ಇಲ್ಲ. ಒಳ್ಳೆಯ ದೀರ್ಘಾಕೃತಿಯ ಮನುಷ್ಯ!

ಕಲ್ಯಾಣಿ—ವರದಕ್ಷಿಣೆ ಏನಾದರೂ ಕೇಳುವರೇ?

ಮೋಟಾರಾಮ—ಆ ವಿಷಯವನ್ನೇಕೆ ಕೇಳುವಿರಿ? ನಾಲ್ಕು ಸಾವಿರ ರೂಪಾಯಿಗಳನ್ನು ಕೇಳುವರು. ಇದೋ ಈ ನಾಲ್ಕನೆಯ ಭಾವಚಿತ್ರವನ್ನು ನೋಡಿ! ಹುಡುಗನು ವಕೀಲವೃತ್ತಿಯಲ್ಲಿರುವನು. ವಯಸ್ಸು ಸುಮಾರು ಮೂವತ್ತೈದು. ಮುನ್ನೂರು ನಾನೂರು ರೂಪಾಯಿಗಳ ವರಮಾನವಿದೆ. ಮೊದಲನೆಯ ಸ್ತ್ರೀಯು ಸ್ವರ್ಗಸ್ಥಳಾಗಿರುವಳು. ಅವಳಿಗೆ ಮೂರು ಮಂದಿ ಮಕ್ಕಳು ಇರುವರು. ಸ್ವಂತ ಮನೆ ಇದೆ. ಸ್ವಲ್ಪ ಆಸ್ತಿಯೂ ಇದೆ. ಇಲ್ಲಿನ ಸಂಬಂಧದಲ್ಲಿ ವರದಕ್ಷಿಣೆ ಕೊಡಬೇಕಾದುದಿಲ್ಲ.

ಕಲ್ಯಾಣಿ—ಮನೆತನವು ಎಂತಹದು, ಉತ್ತಮವಾದುದೇ?

ಮೋಟಾರಾಮ—ಬಹಳ ಒಳ್ಳೆಯ ಮನೆತನ. ಇನ್ನು ಈ ಐದನೆಯ ಭಾವಚಿತ್ರವನ್ನು ನೋಡಿ! ಹುಡುಗನ ತಂದೆಯು ಸ್ವಂತ ಮುದ್ರಣಾಲಯ ವನ್ನು ಇಟ್ಟಿರುವರು. ಹುಡುಗನು ಬಿ. ಎ. ಪರೀಕ್ಷೆಯಲ್ಲಿ ಪಾಸಾಗಿರುವನು. ಆದರೂ ತಂದೆಯ ಮುದ್ರಣಾಲಯದಲ್ಲೇ ಕೆಲಸ ಮಾಡುತ್ತಿರುವನು. ವಯಸ್ಸು ಹದಿನೆಂಟಿರಬಹುದು. ಆಸ್ತಿ-ಪಾಸ್ತಿ ಏನೂ ಇಲ್ಲ. ಸಾಲವು ಏನೂ ಇದ್ದಂತೆ ತೋರಲಿಲ್ಲ. ಮನೆತನವು ಸುಮಾರಾದುದು. ಹುಡುಗನು ಸುಂದ ರನೂ ಸುಶೀಲನೂ ಆಗಿರುವನು. ಮೂರು ಸಾವಿರ ರೂಪಾಯಿಗಳ ವರದಕ್ಷಿಣೆ

ಕೇಳುವರು. ಆದರೆ ಒಂದು ಸಾವಿರಕ್ಕೆ ತೀರ್ಮಾನ ಮಾಡಬಹುದು. ಈ ಐದು ವರಗಳ ಪೈಕಿ ನಿಮ್ಮ ಮನಸಿಗೆ ಒಪ್ಪಿಗೆ ಯಾವುದು ?

ಕಲ್ಯಾಣಿ – ನಿಮ್ಮ ಮನಸಿಗೆ ಯಾವ ವರನು ಉತ್ತಮನೆಂದು ತೋರುವುದು ಪಂಡಿತಜೀ !

ಮೋಟಾರಾಮು—ನನ್ನ ಮನಸಿಗೆ ಎರಡು ವರಗಳು ಮಾತ್ರ ಒಪ್ಪಿಗೆಯಾಗಿವೆ. ರೈಲ್ವೆ ಇಲಾಖೆಯಲ್ಲಿರುವವನೊಬ್ಬ ಮತ್ತು ಇದೇ ಈಗ ಹೇಳಿದ ಮುದ್ರಣಾಲಯದಲ್ಲಿರುವ ಹುಡುಗ.

ಕಲ್ಯಾಣಿ ಆದರೆ ಮೊದಲನೆಯ ಹುಡುಗನ ಮನೆತನದಲ್ಲಿ ದೋಷವಿರುವದೆಂದು ಹೇಳಿದಿರಲ್ಲಾ ?

ಮೋಟಾರಾಮು—ಹೌದು, ದೋಷವೇನೋ ಇದೆ ! ಆದ್ದರಿಂದ ಈ ಮುದ್ರಣಾಲಯದ ಹುಡುಗನೇ ಇರುವುದರಲ್ಲಿ ಉತ್ತಮನೆಂದು ತೋರುವನು.

ಕಲ್ಯಾಣಿ ಸರಿಯೆ, ಆದರೆ ವರದಕ್ಷಿಣೆಗೆ ಸಾವಿರ ರೂಪಾಯಿಗಳನ್ನು ಎಲ್ಲಿ ತರಲಿ ? ಒಂದು ಸಾವಿರ ರೂಪಾಯಿಗಳೆಂದು ನೀವು ಹೇಳುವಿರಿ; ಒಂದು ವೇಳೆ ಹೆಚ್ಚು ಕೇಳಿದರೂ ಕೇಳಬಹುದು. ನೀವು ನಮ್ಮ ಮನೆಯ ಪರಿಸ್ಥಿತಿಯನ್ನು ನೋಡಿಯೇ ಇರುವಿರಿ ! ಜೀವನನಿರ್ವಾಹ ಮಾಡುವುದೇ ಕಷ್ಟವಾಗಿದೆ; ಆದ್ದರಿಂದ ವರದಕ್ಷಿಣೆ ಕೊಡುವುದು ಅಸಾಧ್ಯ. ಜಮೀನ್ದಾರರು ನಾಲ್ಕು ಸಾವಿರ ರೂಪಾಯಿಗಳನ್ನು ಕೇಳುವರು. ಪೋಸ್ಟಾಫೀಸಿನವರು ಎರಡು ಸಾವಿರ ರೂಪಾಯಿಗಳನ್ನು ಕೇಳುವರು; ಇವರಿಬ್ಬರನ್ನೂ ಬಿಟ್ಟರೆ ಇನ್ನು ಉಳಿಯುವವರು ವಕೀಲರೊಬ್ಬರೆ ! ಮೂವತ್ತೈದು ವರ್ಷಗಳೇನೂ ಅಂತಹ ಹೆಚ್ಚಲ್ಲ. ಆದ್ದರಿಂದ ಇವರೇ ಏಕಾಗಬಾರದು ?

ಮೋಟಾರಾಮು – ನೀವು ಚೆನ್ನಾಗಿ ಯೋಚಿಸಿ, ತೀರ್ಮಾನ ಮಾಡಿಕೊಳ್ಳಿ. ನಿಮ್ಮ ಮನಸಿನಂತೆ ನಡೆಯುವುದು ನನ್ನ ಕೆಲಸ. ನೀವು ಎಲ್ಲಿ ಹೇಳಿದರೆ, ಅಲ್ಲಿ ನಿಶ್ಚಿತಾರ್ಥ ಮಾಡಿಕೊಂಡು ಬರುವೆನು. ಒಂದು ಸಾವಿರ ರೂಪಾಯಿಗಳ ಮುಖವನ್ನು ನೋಡದಿರುವುದಾದರೆ, ಮುದ್ರಣಾಲಯದ ಹುಡುಗನು ರತ್ನದಂತಹವನು. ನಿರ್ಮಲೆಯ ಜೀವನವು ಅವನ ಸಂಗಡ ಸಫಲವಾಗುವುದು. ನಿರ್ಮಲೆಯು ಹೇಗೆ ರೂಪಗುಣ ಸಂಪನ್ನಳೋ, ಹಾಗೆಯೇ ಹುಡುಗನೂ ಸುಂದರನು ಮತ್ತು ಸುಶೀಲನು.

ಕಲ್ಯಾಣಿ—ನನಗೂ ಇದೇ ವರನೇ ಇಷ್ಟ. ಆದರೆ ರೂಪಾಯಿಗಳನ್ನು ಎಲ್ಲಿಂದ ತರಲಿ, ಪಂಡಿತಜೀ! ಅಂತಹ ಉದಾರಿಗಳಾದರೂ ಯಾರಿರುವರು, ಹಣ ಕೊಡುವುದಕ್ಕೆ? ಚೆನ್ನಾಗಿದ್ದ ಕಾಲದಲ್ಲಿ ಎಲ್ಲರೂ ತಿಂದು ತೇಗಿ ಹೋದರು. ಈಗ ಯಾರೂ ಸುಳಿದು ಸಹ ನೋಡುವುದಿಲ್ಲ! ಮನೆಯಿಂದ ಕಳುಹಿಬಿಟ್ಟರೆಂದು ನಮ್ಮನ್ನೇ ಆಡಿಕೊಳ್ಳುವರು. ಆಗದ ಕೆಲಸಕ್ಕೆ ಇತರರ ಮುಂದೆ ಕೈನೀಡುವುದಾದರೂ ಏಕೆ? ತನ್ನ ಸಂತಾನವನ್ನು ಸುಖವಾಗಿರಿಸ ಬೇಕೆಂದು ಯಾವ ಮಾತೆಗೆ ತಾನೇ ಇಷ್ಟವಿಲ್ಲ? ಆದರೇನು ಮಾಡಲಿ? ಆದ್ದ ರಿಂದ ನೀವು ಹೋಗಿ ವಕೀಲ ಸಾಹೇಬರನ್ನೇ ನಿಶ್ಚಿತಾರ್ಥ ಮಾಡಿಕೊಂಡು ಬನ್ನಿ. ವಯಸ್ಸು ಸ್ವಲ್ಪ ಹೆಚ್ಚೇನೋ ಹೌದು. ಆದರೆ ಬದುಕುವುದು ಸಾಯು ವುದು ವಿಧಿ–ವಶ. ಮೂವತ್ತೈದು ವರ್ಷದ ಮನುಷ್ಯನನ್ನು ಮುದುಕನೆಂದು ಹೇಳಲಾಗುವುದಿಲ್ಲ. ಹುಡುಗಿಯ ಅದೃಷ್ಟದಲ್ಲಿ ಸುಖವು ಪ್ರಾಪ್ತಿಯಿದ್ದರೆ, ಎಲ್ಲಿ ಹೋದರೂ ಸುಖವನ್ನನುಭವಿಸುವಳು. ಕಷ್ಟವೇ ಪ್ರಾಪ್ತಿಯಿದ್ದರೆ, ಎಲ್ಲಿ ಹೋದರೂ ಕಷ್ಟವನ್ನೇ ಅನುಭವಿಸುವಳು. ನಮ್ಮ ನಿರ್ಮಲೆಗೆ ಮಕ್ಕಳೆಂದರೆ ಬಹಳ ಪ್ರೀತಿ. ಅವರ ಮಕ್ಕಳನ್ನು ತನ್ನ ಮಕ್ಕಳೆಂದೇ ತಿಳಿದು ಕಾಪಾಡು ವಳು. ನೀವು ಶುಭಮುಹೂರ್ತವನ್ನು ನೋಡಿ ನಿಶ್ಚಿತಾರ್ಥ ಮಾಡಿಕೊಂಡು ಬನ್ನಿ.

## ಐದನೆಯ ಪರಿಚ್ಛೇದ

ನಿರ್ಮಲೆಯ ವಿವಾಹವು ನೆರವೇರಿತು. ಅತ್ತೆಯ ಮನೆಗೂ ಬಂದಳು. ವಕೀಲ ಸಾಹೇಬರ ಹೆಸರು ಮುನ್ಷಿ ತೋತಾರಾಮರು. ಶ್ಯಾಮಲ ವರ್ಣದ, ಸುದೀರ್ಘಾಕೃತಿಯ ಮನುಷ್ಯ. ವಯಸ್ಸು ನಲವತ್ತಕ್ಕೆ ಕಡಿಮೆಯಾಗಿದ್ದರೂ ವಕಾಲತ್ತಿನ ಕಠಿಣ ಪರಿಶ್ರಮದಿಂದ ತಲೆಗೂದಲುಗಳು ನೆರೆತಿದ್ದುವು. ವ್ಯಾಯಾಮ ಮಾಡಲು ಅವರಿಗೆ ವೇಳೆಯೇ ಸಿಗುತ್ತಿರಲಿಲ್ಲ. ತುಸು ಹೊತ್ತು ತಿರುಗಾಡಲು ಸಹ ಹೋಗುತ್ತಿರಲಿಲ್ಲ; ಆದ್ದರಿಂದ ಅವರಿಗೆ ಬೊಜ್ಜು ಹೊಟ್ಟೆ ಬೆಳೆದಿತ್ತು. ಸ್ಥೂಲ ಶರೀರವಾದ್ದರಿಂದ ಅವರಿಗೆ ಒಂದಲ್ಲ ಒಂದು ಬಾಧೆ ಇರುತ್ತಲೇ ಇತ್ತು. ಮಂದ ಮತ್ತು ಅಜೀರ್ಣಗಳ ಸಂಬಂಧ ಅವರಿಗೆ ಚಿರ ಸ್ಥಾಯಿಯಾಗಿತ್ತು. ಆದ್ದರಿಂದ ಅವರು ಊಟದ ವಿಷಯದಲ್ಲಿ ಬಹಳ ಜಾಗ ರೂಕತೆಯಿಂದಲೇ ಇರುತ್ತಿದ್ದರು. ಅವರಿಗೆ ಮೂರು ಮಂದಿ ಮಕ್ಕಳಿದ್ದರು.

ದೊಡ್ಡವನಾದ ಮಾನಸರಾಮನು ಹದಿನಾರು ವರ್ಷದವನಾಗಿದ್ದನು. ಮಧ್ಯ ದವನಾದ ಜಯರಾಮನು ಹನ್ನೆರಡು ವರ್ಷದವನು; ಮತ್ತು ಕೊನೆಯವ ನಾದ ಶ್ರೀರಾಮನು ಏಳು ವರ್ಷದವನೂ ಆಗಿದ್ದರು. ಮೂವರೂ ಇಂಗ್ಲಿಷ್ ಓದುತ್ತಿದ್ದರು. ಮನೆಯಲ್ಲಿ ವಕೀಲಸಾಹೇಬರ ವಿಧವೆ–ಅಕ್ಕನೊಬ್ಬಳ ಹೊರತು ಮತ್ತಾರೂ ಹೆಂಗಸರಿರಲಿಲ್ಲ. ಅವಳೇ ಮನೆಯ ಯಜಮಾನಿಯಾ ಗಿದ್ದಳು. ಅವಳ ಹೆಸರು ರುಕ್ಮಿಣಿ. ವಯಸ್ಸು ಸುಮಾರು ಐವತ್ತಕ್ಕೆ ಮೀರಿತ್ತು. ಪತಿಯ ಗೃಹದಲ್ಲಿ ಬೇರೆ ಯಾರೂ ಇಲ್ಲದ್ದರಿಂದ ಅವಳು ವಕೀಲ ಸಾಹೇಬರ ಮನೆಯಲ್ಲೇ ಇರುತ್ತಿದ್ದಳು.

ತೋತಾರಾಮರು ದಾಂಪತ್ಯ–ವಿಜ್ಞಾನದಲ್ಲಿ ಅತಿ ಕುಶಲರಾಗಿದ್ದರು. ನಿರ್ಮಲೆಯನ್ನು ಪ್ರಸನ್ನಳಾಗಿರಿಸಲು ತಮ್ಮಲ್ಲಿದ್ದ ಲೋಪವನ್ನು ಅವರು ಉಪ ಹಾರ ವಸ್ತುಗಳ ಮೂಲಕ ಮುಚ್ಚಲೆಳಸುತ್ತಿದ್ದರು. ಅತ್ಯಂತ ಮಿತವ್ಯಯಿ ಗಳಾದರೂ, ನಿರ್ಮಲೆಗಾಗಿ ನಿತ್ಯವೂ ಏನಾದರೊಂದು ಪದಾರ್ಥವನ್ನು ತರು ತ್ತಿದ್ದರು. ಅನೇಕ ವೇಳೆ ದುಡ್ಡೆಷ್ಟು ಖರ್ಚಾಯಿತೆಂದು ಸಹ ಲೆಕ್ಕಿಸುತ್ತಿರ ಲಿಲ್ಲ. ನಿರ್ಮಲೆಗಾಗಿ ಮೇವಾ, ಮುರಬ್ಬ, ಮಿಠಾಯಿ ಮುಂತಾದವುಗಳನ್ನು ಬೇಕಾದಷ್ಟು ತರುತ್ತಿದ್ದರು. ಅವರು ತಮ್ಮ ಜೀವನದಲ್ಲೆಂದೂ ನೋಟ– ತಮಾಷೆಗಳನ್ನು ನೋಡಲು ಹೋದವರಲ್ಲ. ಆದರೆ ಇತ್ತೀಚೆಗೆ ರಜೆಯ ದಿನ ಗಳಲ್ಲಿ ನಿರ್ಮಲೆಯನ್ನು ಸಿನೆಮ, ಸರ್ಕಸ್ ಮತ್ತು ನಾಟಕಗಳಿಗೆ ಕರೆದು ಕೊಂಡು ಹೋಗುತ್ತಿದ್ದರು. ತಮ್ಮ ಬಹುಮೂಲ್ಯ ಸಮಯದ ಸ್ವಲ್ಪ ಭಾಗ ವನ್ನು ಅವಳ ಸಂಗಡ ಕುಳಿತು ಸಂಗೀತ ಕೇಳುವುದರಲ್ಲೂ ಕಳೆಯುತ್ತಿದ್ದರು.

ಆದರೆ ನಿರ್ಮಲೆಗೇಕೋ ತೋತಾರಾಮರ ಬಳಿ ಕುಳಿತು, ನಕ್ಕು ನಲಿ ಯುತ್ತ ಮಾತನಾಡಲು ಸಂಕೋಚವೆನಿಸುತ್ತಿತ್ತು. ' ಇದುವರೆಗೆ ಇದೇ ವಯಸ್ಸಿನ ಒಬ್ಬ ಪುರುಷನು ತನ್ನ ತಂದೆಯಾಗಿದ್ದನು. ಅವನೆದುರಿಗೆ ನಿಂತು ಮಾತನಾಡಲು ಮತ್ತು ಓಡಾಡಲು ನಾಚುತ್ತಿದ್ದಳು. ಈಗ ಅದೇ ವಯಸ್ಸಿನ ಒಬ್ಬ ಪುರುಷನು ತನ್ನ ಪತಿಯಾಗಿರುವನು ' ಎಂಬುದೇ ಇದರ ಕಾರಣವಿರ ಬಹುದು ಸಾಧ್ಯವಾದಷ್ಟೂ ಅವರಿಂದ ತಪ್ಪಿಸಿಕೊಂಡು ತಿರುಗುತ್ತಿದ್ದಳು. ಅವ ರನ್ನು ಕಂಡಕೂಡಲೇ ಅವಳ ಪ್ರಫುಲ್ಲತೆಯು ಪಲಾಯನವಾಗುತ್ತಿತ್ತು.

ಯುವತಿಯಾದ ಪತ್ನಿಯೊಡನೆ ಮನಃಪೂರ್ವಕವಾಗಿ, ಸಾಕಷ್ಟು

ಪ್ರೇಮದ ಮಾತುಗಳನ್ನಾಡಬೇಕು ಎಂಬುದು ವಕೀಲ ಸಾಹೇಬರ ದಾಂಪತ್ಯ ವಿಜ್ಞಾನದ ತತ್ವ. ಆದ್ದರಿಂದ ಅವರು ತಮ್ಮ ಪ್ರೇಮ–ದರ್ಶನದಲ್ಲಿ ಯಾವ ಬಾಕಿಯನ್ನೂ ಇಟ್ಟುಕೊಳ್ಳುತ್ತಿರಲಿಲ್ಲ. ಆದರೆ ನಿರ್ಮಲೆಗೆ ಈ ವಿಷಯಗಳಲ್ಲಿ ತಿರಸ್ಕಾರಭಾವವೇ ಉಂಟಾಗುತ್ತಿತ್ತು. ಇದೇ ಮಾತುಗಳು ಓರ್ವ ಯೋಗ್ಯ ಯುವಕನ ಬಾಯಿಂದ ಹೊರಬಿದ್ದಿದ್ದರೆ ಅವಳ ಹೃದಯವು ಪ್ರೇಮೋನ್ಮತ್ತ ವಾಗುತ್ತಿತ್ತು. ಆದರೆ ವಕೀಲಸಾಹೇಬರ ಮುಖದಿಂದ ಈ ನುಡಿಗಳನ್ನು ಕೇಳಿ ಅವಳ ಹೃದಯಕ್ಕೆ ಶರಸಮಾನವಾದ ಆಘಾತವಾಗುತ್ತಿತ್ತು. ಅವುಗಳಲ್ಲಿ ರಸ ವಿಲ್ಲ, ಉಲ್ಲಾಸವಿಲ್ಲ, ಉನ್ಮಾದವಿಲ್ಲ, ಹೃದಯವಿಲ್ಲ; ಕೇವಲ ತೋರಿಕೆ, ಕಪಟಗಳಿದ್ದವು. ಶುಷ್ಕ, ನೀರಸ ಶಬ್ದಾಡಂಬರವಾಗಿತ್ತು. ಅವಳಿಗೆ ಅಗರು–ಚಂದನಗಳೆಂದರೆ ಅಸಹ್ಯವೆನಿಸುತ್ತಿರಲಿಲ್ಲ; ನೋಟ–ತಮಾಷೆಗಳೆಂದರೆ ಬೇಸರ ವಿರಲಿಲ್ಲ; ಶೃಂಗಾರ–ಸೌಂದರ್ಯಗಳೆಂದರೆ ಪ್ರೇಡದಿರಲಿಲ್ಲ. ಆದರೆ, ತೋತಾ ರಾಮರ ಸಂಗಡ ಕುಳಿತುಕೊಳ್ಳುವುದೆಂದರೆ ಅವಳಿಗೆ ಸಹಿಸುತ್ತಿರಲಿಲ್ಲ. ತನ್ನ ರೂಪ–ಯೌವನಗಳನ್ನು ಕಂಡು ಸವಿಯುವ ಕಣ್ಣುಗಳು ಅವರಲ್ಲಿರಲಿಲ್ಲವೆಂದು ಅವಳ ಭಾವನೆ. ಪ್ರಭಾತ ಸಮೀರನ ಸ್ಪರ್ಶದಿಂದಲ್ಲವೇ ಸಣ್ಣ ಮೊಗ್ಗೆಯು ಅರಳುವುದು? ಆದರೆ ನಿರ್ಮಲೆಗೆ ಇಂತಹ ಪ್ರಭಾತ ಸಮೀರನೆಲ್ಲಿ? ಪಾಪ!

ಮೊದಲನೆಯ ಮಾಸವು ಮುಗಿಯುತ್ತಲೇ ತೋತಾರಾಮರು ನಿರ್ಮಲೆ ಯನ್ನು ತಮ್ಮ ಖಜಾಂಚಿಯನ್ನಾಗಿ ಮಾಡಿದರು. ಕಛೇರಿಯಿಂದ ಹಿಂತಿರುಗಿ ದೊಡನೆಯೇ ತಮ್ಮ ದಿನದ ಸಂಪಾದನೆಯನ್ನು ಅವಳ ಕೈಗೆ ಕೊಡುತ್ತಿದ್ದರು. ನಿರ್ಮಲೆಯು ಈ ಹಣವನ್ನು ಕಂಡು, ಹಿಡಿಸಲಾಗದಷ್ಟು ಸಂತೋಷ ಹೊಂದುವಳೆಂದು ಅವರ ಭಾವನೆಯಾಗಿತ್ತು. ನಿರ್ಮಲೆಯು ಈ ಖಜಾಂಚಿಯ ಕೆಲಸವನ್ನು ನಿಜವಾಗಿಯೂ ಚೆನ್ನಾಗಿ ನಿರ್ವಹಿಸುತ್ತಿದ್ದಳು. ಪ್ರತಿ ಕಾಸಿನ ಲೆಖ್ಖವನ್ನೂ ಬರೆಯುತ್ತಿದ್ದಳು; ಎಂದಾದರೂ ಹಣ ಕಡಿಮೆಯಿದ್ದರೆ 'ಇಂದೇಕೆ ಕಡಿಮೆಯಿದೆ?' ಎಂದು ಕೇಳುತ್ತಿದ್ದಳು. ಸಂಸಾರಕ್ಕೆ ಸಂಬಂಧಿ ಸಿದ ಮಾತುಗಳನ್ನು ಅವರ ಸಂಗಡ ಸಾಕಷ್ಟು ಆಡುತ್ತಿದ್ದಳು. ಈ ಮಾತು ಗಳಿಗೆ ಮಾತ್ರ ಅವರು ಯೋಗ್ಯರೆಂದು ಅವಳು ಭಾವಿಸಿದ್ದಳು. ವಿನೋದದ ಯಾವುದಾದರೂ ಒಂದು ಮಾತು ಅವರ ಮುಖದಿಂದ ಹೊರಟೊಡನೆಯೇ ಅವಳ ಮುಖವು ಮಲಿನವಾಗುತ್ತಿತ್ತು.

ನಿರ್ಮಲೆಯು ವಸ್ತ್ರಭೂಷಣಗಳಿಂದ ಅಲಂಕೃತಳಾಗಿ ಕನ್ನಡಿಯ ಮುಂದೆ ನಿಂತು, ತನ್ನ ಸೌಂದರ್ಯದ ಸೊಬಗನ್ನು ನೋಡಿಕೊಂಡರೆ ಅವಳ ಹೃದಯವು ಒಂದು ತೃಷಿತ-ಕಾಮನೆಯಿಂದ ತಡಪಿಸುತ್ತಿತ್ತು. ಆ ಸಮಯ ದಲ್ಲಿ ಅವಳ ಹೃದಯದಲ್ಲಿ ಒಂದು ಪರಿಯ ಜ್ವಾಲೆಯು ಉದ್ಭವಿಸುತ್ತಿತ್ತು. ಈ ಮನೆಗೆ ಬೆಂಕಿ ಹೊತ್ತಿಸಿಬಿಡಲೇ?-ಎನ್ನುವಷ್ಟು ಮನಸ್ಸಿಗೆ ಬೇಸರವಾಗು ತ್ತಿತ್ತು. ತನ್ನ ತಾಯಿಯ ವಿಷಯವಾಗಿ ಬಹಳ ಕ್ರೋಧವುಂಟಾಗುತ್ತಿತ್ತು. ಎಲ್ಲಕ್ಕಿಂತಲೂ ಹೆಚ್ಚಾಗಿ ನಿರಪರಾಧಿ ತೋತಾರಾಮರ ಮೇಲೆ ಮಿತಿಮೀರಿದ ಕೋಪ ಬರುತ್ತಿತ್ತು. ಅವಳನ್ನು ಸದಾಕಾಲವೂ ಇದೇ ತಾಪವು ಬಾಧಿಸು ತ್ತಿತ್ತು. ಉತ್ತಮ ಸವಾರನು ಕುಂಟು ಕುದುರೆಯ ಮೇಲೆ ಸವಾರಿ ಮಾಡ ಲಿಚ್ಛಿಸುವನೇ? ಅದಕ್ಕಿಂತ ಕಾಲುನಡಿಗೆಯೇ ನೂರು, ಪಾಲು ಮೇಲೆಂದು ಎಣಿಸುವನು. ನಿರ್ಮಲೆಯ ಸ್ಥಿತಿಯಾದರೂ ಈ ಉತ್ತಮ ಸವಾರನಂತೆಯೇ ಆಗಿತ್ತು! ಅವಳು ಅಪರಿಮಿತ ಆನಂದದ ದಿನಗಳನೇಕವನ್ನು ವಿದ್ಯುದ್ವೇಗ ದಿಂದ ಕಳೆಯಬೇಕೆಂದು ಮಹದಾಸೆಯಿಂದಿದ್ದಳು. ಆದರೆ ಅವಳ ಪಾಲಿಗೆ ಅದು ಪ್ರಾಪ್ತಿಯಿಲ್ಲದಾಯಿತು. ಮಕ್ಕಳ ಸಂಗಡ ಸ್ವಲ್ಪ ಸಮಯ ನಕ್ಕು ನಲಿ ದಾಡುವುದರಿಂದ ತನ್ನ ಮನಸಿನ ದುಃಖವನ್ನು ತುಸು ಮರೆಯುವ ಸಂಭವ ವಿತ್ತು. ಆದರೆ ರುಕ್ಮಿಣೀದೇವಿಯು ಮಕ್ಕಳನ್ನು ಅವಳ ಬಳಿಗೆ ಸಹ ಬರ ಗೊಡುತ್ತಿರಲಿಲ್ಲ. ರುಕ್ಮಿಣಿಯ ಸ್ವಭಾವವು ಅತಿ ವಿಚಿತ್ರ. ಯಾವ ಮಾತಿನಿಂದ ಅವಳ ಮನಸ್ಸು ಕೋಪಗೊಳ್ಳುವುದು, ಯಾವ ಮಾತಿನಿಂದ ಸಂತೋಷ ಉಂಟಾಗುವುದು ಎಂಬುದನ್ನು ಕಂಡುಹಿಡಿಯುವುದೇ ಕಷ್ಟವಾಗಿತ್ತು. ಒಮ್ಮೆ ಯಾವ ಮಾತಿನಿಂದ ಸಂತುಷ್ಟಳಾಗುತ್ತಿದ್ದಳೋ ಅದೇ ಮಾತಿನಿಂದ ಮತ್ತೊಮ್ಮೆ ಕೋಪಗೊಳ್ಳುತ್ತಿದ್ದಳು. ನಿರ್ಮಲೆಯು ತನ್ನ ಕೊಠಡಿಯಲ್ಲಿ ಕುಳಿತಿದ್ದರೂ ಸಹಿಸಳು. ಕೊಠಡಿಯನ್ನು ಬಿಟ್ಟು ಬಂದಾಗಲೀ ಅಥವಾ ಮಹಡಿಯ ಬಳಿಯಾಗಲಿ ನಿಂತು ಮಾತನಾಡಿದರೂ ಸೈರಿಸಳು. 'ಮಾನವಿಲ್ಲ, ಮರ್ಯಾದೆಯಿಲ್ಲ; ನಾಚಿಕೆಯಂತೂ ಮೊದಲೇ ಇಲ್ಲ. ಇನ್ನೆರಡು ದಿನ ಹೋದರೆ ಬೀದಿಯಲ್ಲೇ ನಿಂತು ನರ್ತಿಸುವಳೋ ಏನೋ'-ಎಂದು ಮುಂತಾಗಿ ಬೈಯುವಳು. ವಕೀಲಸಾಹೇಬರು ಹಣ-ಕಾಸನ್ನು ನಿರ್ಮಲೆಯ ಕೈಗೆ ಕೊಡಲಾರಂಭಿಸಿದಂದಿನಿಂದ ರುಕ್ಮಿಣಿಯು ಆಲೋಚನಾಕ್ರಾಂತ ಳಾಗಿದ್ದಳು ಮನೆಯಲ್ಲಿ ಪ್ರಳಯವಾಗಲು ಇನ್ನು ಬಹಳ ದಿನಗಳು ಬೇಕಿಲ್ಲ

ವೆಂದು ಅವಳು ತಿಳಿದಳು. ಹುಡುಗರಿಗೆ ಆಗಾಗ ಹಣದ ಅವಶ್ಯಕತೆಯುಂಟಾಗುತ್ತಿತ್ತು. ತಾನು ಮನೆಯ ಯಜಮಾನಿಯಾಗಿದ್ದಾಗ ಅವರಿಗೆ ಒಳ್ಳೆಯ ಮಾತುಗಳನ್ನಾಡಿ ಮರೆಸಿಬಿಡುತ್ತಿದ್ದಳು. ಈಗ ನೆಟ್ಟಗೆ ನಿರ್ಮಲೆಯ ಬಳಿಗೆ ಕಳುಹುತ್ತಿದ್ದಳು. ನಿರ್ಮಲೆಗೆ ಮಕ್ಕಳ ಗಲಾಟೆಯು ಸಹಿಸುತ್ತಿರಲಿಲ್ಲ; ಒಮ್ಮೊಮ್ಮೆ ಕಾಸು ಕೊಡಲು ಅವಳು ತಿರಸ್ಕರಿಸುತ್ತಿದ್ದಳು. ಆಗ ರುಕ್ಮಿಣಿಗೆ ತನ್ನ ಬೈಗಳ ಸುರಿಮಳೆ ಕರೆಯುವ ಸಮಯವು ಸಿಗುತ್ತಿತ್ತು. 'ಮನೆಯ ಯಜಮಾನಿಯಾಗಿಬಿಟ್ಟಳು; ಇನ್ನು ಮಕ್ಕಳ ಚಿಂತೆಯಾದರೂ ಇವಳಿಗೆಲ್ಲಿಯದು? ಮಾತೆಯಿಲ್ಲದ ಮಕ್ಕಳನ್ನು ಕೇಳುವವರಾರು? ರೂಪಾಯಿ–ರೂಪಾಯಿಗಳ ಮಿಠಾಯಿ ತಿನ್ನುತ್ತಿದ್ದರು; ಈಗ ಕಾಸು–ಕಾಸಿಗಾಗಿ ಕೈನೀಡಬೇಕಾಗಿದೆ!' ಎನ್ನುವಳು. ರುಕ್ಮಿಣಿಯ ಈ ಬೈಗಳಿಂದ ಬೇಸರಗೊಂಡು ನಿರ್ಮಲೆಯು ಎಂದಾದರೂ ಹೇಳದೆ–ಕೇಳದೆ ಹಣವನ್ನು ಕೊಟ್ಟುಬಿಟ್ಟರೆ ಅದಕ್ಕೂ ಅನ್ನುವಳು. 'ಮಕ್ಕಳು ಸತ್ತರೇನು ಇದ್ದರೇನು? ಇವಳಿಗೇತರ ಯೋಚನೆ? ಹೆಚ್ಚು ಮಿಠಾಯಿ ತಿನ್ನಬೇಡಿರೆಂದು ಮಕ್ಕಳಿಗೆ ಮಾತೆಯಲ್ಲದೆ ಮತ್ತಾರು ಹೇಳುವರು? ಹೆಚ್ಚು–ಕಡಿಮೆಯಾದರೆ ನನ್ನ ತಲೆ ಹೋಗುವದು; ಇವಳಿಗೇನು?' ಅನ್ನುವಳು. ಇಷ್ಟೇ ಆದರೆ ನಿರ್ಮಲೆಯು ಹಾಗೂ ಹೀಗೂ ಸಹಿಸಿಕೊಳ್ಳಬಹುದಾಗಿತ್ತು. ಆದರೆ ರುಕ್ಮಿಣಿಯು ಸಿ. ಐ. ಡಿ. ಪೋಲೀಸನವನಂತೆ ಸರ್ವದಾ ನಿರ್ಮಲೆಯನ್ನು ಹಿಂಬಾಲಿಸಿಯೇ ಇರುತ್ತಿದ್ದಳು. ನಿರ್ಮಲೆಯು ತನ್ನ ಕೋಣೆಯಲ್ಲಿ ಕಿಟಕಿಯ ಬಳಿ ನಿಂತಿದ್ದರೆ ಅವಳು ಆರನ್ನೋ ನೋಡುತ್ತಿರಬೇಕು; ಮಹಡಿಯಲ್ಲಿ ನಿಂತು ಮಾತನಾಡುತ್ತಿದ್ದರೆ ತನ್ನ ನಿಂದೆಯನ್ನೇ ಮಾಡುತ್ತಿರಬೇಕು; ಅಂಗಡಿಯಿಂದ ಯಾವುದಾದರೂ ಪದಾರ್ಥವನ್ನು ತರಿಸಿಕೊಂಡರೆ ಅದು ವಿಲಾಸ ವಸ್ತುವೇ ಆಗಿರಬೇಕು— ಎಂದು ಅನುಮಾನಿಸುತ್ತಿದ್ದಳು. ಅನೇಕ ವೇಳೆ ಅವಳ ಪತ್ರಗಳನ್ನು ಕಾಣದೆ ಓದುತ್ತಿದ್ದಳು. ಮರೆಯಲ್ಲಿ ನಿಂತು ಅವಳ ಮಾತುಗಳನ್ನು ಆಲಿಸುತ್ತಿದ್ದಳು. ರುಕ್ಮಿಣಿಯ ದುಷ್ಟ ಬುದ್ಧಿಯನ್ನು ಕಂಡು ನಿರ್ಮಲೆಯು ನಡುಗುತ್ತಿದ್ದಳು. ಒಂದು ದಿನ ಅವಳು ಈ ವಿಷಯವನ್ನು ಪತಿಯ ಸಂಗಡ ಹೇಳಿಬಿಟ್ಟಳು — ನೀವು ಅಕ್ಕನವರಿಗೆ ಸ್ವಲ್ಪ ತಿಳಿಯ ಹೇಳಿ! ಅವರು ನನ್ನನ್ನು ಸರ್ವದಾ ಏಕೆ ಹಿಂಬಾಲಿಸುವರು?

ತೋತಾರಾಮರು ಕೋಪಗೊಂಡು ಕೇಳಿದರು—ಏಕೆ? ನಿನಗೇನಾದರೂ ಅಂದಳೇ?

'ನಿತ್ಯವೂ ಅನ್ನುತ್ತಲೇ ಇರುವರು. ಏನೊಂದು ಮಾತನಾಡುವುದೂ ಕಷ್ಟವಾಗಿಬಿಟ್ಟಿದೆ. ಈಗ ನಾನು ಮನೆಯ ಯಜಮಾನಿಯಾಗಿಭಿಟ್ಟೆನೆಂಬ ಈರ್ಷೆಯೂ ಅವರ ಮನಸ್ಸಿನಲ್ಲಿದ್ದರೆ, ಇನ್ನು ಮುಂದೆ ಅವರೇ ಮನೆಯ ಯಜಮಾನಿಯಾಗಿರಲಿ. ನೀವು ಹಣ-ಕಾಸನ್ನು ನನ್ನ ಕೈಗೆ ಕೊಡದೆ ಅವರ ಕೈಗೇ ಕೊಟ್ಟುಬಿಡಿ. ನಾನು ಅವರ ಕಟುವಾಕ್ಯಗಳನ್ನು ಕೇಳಲಾರೆ'–ಎನ್ನುತ್ತಿದ್ದಂತೆಯೇ ನಿರ್ಮಲೆಯ ಕಣ್ಣುಗಳು ಕಂಬನಿದುಂಬಿದವು. ತೋತಾರಾಮರಿಗೆ ತಮ್ಮ ಪ್ರೇಮವನ್ನು ಪ್ರಕಟಿಸುವ ಸುಸಮಯವು ಈಗ ದೊರಕಿತು. ಅವರೆಂದರು—ನಾನು ಇಂದೇ ಅವಳನ್ನು ವಿಚಾರಿಸಿಕೊಳ್ಳುವೆನು. ಬಾಯಿ ಮುಚ್ಚಿಕೊಂಡು ಇರುವುದಾದರೆ ಇರಲಿ, ಇಲ್ಲವಾದರೆ ತನ್ನ ಹಾದಿ ಹಿಡಿಯಲಿ ಎಂದು ಸ್ಪಷ್ಟವಾಗಿ ತಿಳಿಸಿಬಿಡುವೆನು. ಈ ಮನೆಯ ಯಜಮಾನಿ ಅವಳಲ್ಲ, ನೀನು. ಅವಳು ಇರುವುದು ಕೇವಲ ನಿನ್ನ ಸಹಾಯಕ್ಕೋಸ್ಕರ. ನಿನಗೆ ಸಹಾಯ ಮಾಡುವ ಬದಲು ಸಂಕಟಮೀಯುವುದಾದರೆ ಅವಳು ಇಲ್ಲಿರಬೇಕಾದ ಅವಶ್ಯಕತೆಯೇ ಇಲ್ಲ. 'ಪಾಪ, ವಿಧವೆ, ಅನಾಥೆ! ಹಾಕಿದ್ದನ್ನು ತಿಂದುಕೊಂಡು ಇರುವಳು. ಎಷ್ಟೋ ಜನ ನೌಕರ-ಚಾಕರರು ತಿಂದು ಹೋಗುವ ಕಡೆಯಲ್ಲಿ ಅಕ್ಕನಿಗಿಷ್ಟು ಅನ್ನ ಹಾಕಿದರೇನು? ಅದೂ ಅಲ್ಲದೆ ಹುಡುಗರನ್ನು ನೋಡಿಕೊಂಡಿರುವುದಕ್ಕೂ ಸ್ವಲ್ಪ ಅನುಕೂಲವಾಗುವುದು'–ಎಂದು ಯೋಚಿಸಿ ಅವಳನ್ನು ಇರಿಸಿಕೊಂಡೆನು. ಅಂದ ಮಾತ್ರಕ್ಕೆ ಅವಳು ನಿನ್ನ ಮೇಲೆ ಶಾಸನ ಮಾಡಬೇಕೆಂದರ್ಥವಲ್ಲ!

ನಿರ್ಮಲೆಯು ನುಡಿದಳು—ಅಮ್ಮನ ಬಳಿಗೆ ಹೋಗಿ ಕಾಸು ಕೇಳಿರೆಂದು ಹುಡುಗರಿಗೆ ಹೇಳಿಕೊಟ್ಟು, ಆಗಾಗ ಕಳುಹಿಸುವರು. ಹುಡುಗರು ಬಂದು ನನ್ನ ಪ್ರಾಣ ತೆಗೆಯುವರು. ಒಂದು ಘಳಿಗೆ ನಿದ್ದೆ ಮಾಡಲೂ ಆಗುವುದಿಲ್ಲ. ಮಕ್ಕಳನ್ನು ಗದರಿಸಿದರೆ, ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನನ್ನನ್ನೇ ನೋಡುವರು. ಮಕ್ಕಳನ್ನು ಕಂಡರೆ ನನಗೆ ಮತ್ಸರವೆಂದು ತಿಳಿದಿರುವರು. ಹುಡುಗರನ್ನು ನಾನೆಷ್ಟು ಪ್ರೀತಿಸುವೆನೆಂದು ಆ ಪರಮಾತ್ಮನೊಬ್ಬನೇ ಬಲ್ಲ! ಅವರು ನನ್ನ ಮಕ್ಕಳೇ ಅಲ್ಲವೇ? ನನಗೆ ಅವರ ಮೇಲೇಕೆ ಮತ್ಸರ?

ತೋತಾರಾಮರ ಕಣ್ಣುಗಳಿಂದ ಕ್ರೋಧದ ಕಿಡಿಗಳು ಕಾರತೊಡಗಿದವು. ಅವರೆಂದರು—ಮಕ್ಕಳು ಬಂದು, ನಿನ್ನನ್ನು ಬೇಜಾರುಪಡಿಸಿದರೆ ಅವರಿಗೆ ಒಂದೆರಡೇಟು ಕೊಡು! ಇತ್ತೀಚೆಗೆ ಬಹಳ ತುಂಟರಾಗಿರುವರೆಂಬದುದು ನನ್ನ ಮನಸಿಗೂ ತೋರಿಬರುತ್ತಿದೆ. ಮಾನಸರಾಮನನ್ನಂತೂ ಬೋರ್ಡಿಂಗ್ ಹೌಸಿಗೆ ಕಳುಹಿಸಿಬಿಡುವೆನು. ಉಳಿದ ಇಬ್ಬರನ್ನು ಈ ದಿನವೇ ಮಾರ್ಗಕೆ ತರುವೆನು!

ಆ ಸಮಯದಲ್ಲಿ ತೋತಾರಾಮರು ಕಛೇರಿಗೆ ಹೊರಟಿದ್ದರು. ಆದ್ದರಿಂದ ಯಾವ ಮಾತನ್ನೂ ಆಡಲಾಗಲಿಲ್ಲ ಕಛೇರಿಯಿಂದ ಮನೆಗೆ ಹಿಂತಿರುಗಿದೊಡನೆಯೇ ಒಳಕ್ಕೆ ಹೋಗಿ ರುಕ್ಮಿಣಿಯನ್ನು ಕೇಳಿದರು—ಏಕಕ್ಕಾ, ನಿನಗೆ ಈ ಮನೆಯಲ್ಲಿರಲು ಇಷ್ಟವಿಲ್ಲವೆ? ಇರಬೇಕಾಗಿದ್ದರೆ ಶಾಂತರೀತಿಯಿಂದಿರು. ಇತರರಿಗೆ ತೊಂದರೆ ಕಷ್ಟಗಳನ್ನು ಕೊಡುವೆಯೇಕೆ?

ನಿರ್ಮಲೆಯು ಪತಿಯೊಡನೆ ನಡೆದ ಸಂಗತಿ ಎಲ್ಲವನ್ನೂ ತಿಳಿಸಿರುವಳೆಂದು ರುಕ್ಮಿಣಿಯು ಅರಿತುಕೊಂಡಳು. ಆದರೆ ಅವಳು ಹೆದರುವ ಹೆಂಗಸಾಗಿರಲಿಲ್ಲ. ತೋತಾರಾಮರಿಗಿಂತ ವಯಸ್ಸಿನಲ್ಲಿ ಹಿರಿಯಳಾಗಿದ್ದಳು; ಅಲ್ಲದೆ ಈ ಮನೆಯ ಸೇವೆಯಲ್ಲೇ ತನ್ನ ಜೀವನವನ್ನೆಲ್ಲಾ ಕಳೆದಿದ್ದಳು. ಆದ್ದರಿಂದ ಅವಳಿಗೆ ಅನ್ನುವಷ್ಟು ಧೈರ್ಯ ಯಾರಿಗೂ ಇರಲಿಲ್ಲ. ತಮ್ಮನ ಈ ನೀಚತನವನ್ನು ನೋಡಿ ಅವಳು ಅಚ್ಚರಿಗೊಂಡಳು. 'ಹಾಗಾದರೆ ನನ್ನನ್ನು ಮನೆಯ ಕೆಲಸದವಳಂತೆ ಇರಿಸಿಕೊಳ್ಳಬೇಕೆಂದು ಅಪೇಕ್ಷಿಸುವಿಯಾ? ಮತ್ತೆಲ್ಲಾದರೂ ಕೆಲಸ ಮಾಡಿ ಜೀವಿಸಿದರೂ ಸರಿಯೆ, ಈ ಮನೆಕೆಲಸವನ್ನು ಮಾತ್ರ ನಾನು ನಿರ್ವಹಿಸಲಾರೆ. ಮನೆ ಹಾಳಾಗುತ್ತಿದ್ದರೆ, ಸುಮ್ಮನೆ ನಿಂತು ನೋಡುತ್ತಿರಲೆ? ಮನೆಯಲ್ಲಿರುವವರು ಅಪಮಾರ್ಗವನ್ನು ಹಿಡಿದರೆ, ಏನೂ ಹೇಳದೆ ಸುಮ್ಮನಿರಲೇ? ಎಲ್ಲರೂ ತಮ್ಮ ಮನಬಂದಂತೆ ಮಾಡುತ್ತಿದ್ದರೆ ನಾನು ಮಣ್ಣಿ ಬೊಂಬೆಯಂತೆ ಮಾತನಾಡದೆ ಕುಳಿತಿರಲೇ? ಇದು ನನ್ನಿಂದ ಸಾಧ್ಯವಿಲ್ಲ! ನಿನಗಿಷ್ಟು ಕೋಪ ಬರಲು ಕಾರಣವಾದರೂ ಏನು? ನಿನ್ನ ಬುದ್ಧಿವಂತಿಕ್ಕೆ ಎಲ್ಲಾ ಎಲ್ಲಿ ಹೋಯಿತು? ನಿನ್ನೆ-ಮೊನ್ನೆ ತಾನೇ ಬಂದವಳ ತಾಳಕ್ಕೆ ತಕ್ಕಂತೆ ಕುಣಿಯುತೊಡಗಿದೆಯಲ್ಲಾ? ನಡೆದ ವಿಷಯವೇನೆಂಬುದನ್ನು ಕೇಳದೆಯೇ ಕೂಗಾಡುತ್ತಿರುವೆ! ಅವಳ ಚಾಡಿಯ ಮಾತುಗಳನ್ನು ಕೇಳಿ, ನೀನು ಸಿಪಾಯಿಯಂತೆ ನಿನ್ನ ಪೌರುಷವನ್ನು ತೋರತೊಡಗಿದೆಯಾ?

ತೋತಾರಾಮ ನೀನು ಪ್ರತಿಯೊಂದು ಮಾತಿಗೂ ಆಕ್ಷೇಪಿಸುತ್ತ ಬೈಯುವೆಯೆಂದು ತಿಳಿಯಬಂತು. ಹಾಗೇನಾದರೂ ತಿಳಿವಳಿಕೆ ಹೇಳಬೇಕಾಗಿದ್ದರೆ ಒಳ್ಳೆಯ ಮಾತಿನಲ್ಲಿ ತಿಳಿಯಹೇಳು. ಬೈಯುವುದರಿಂದ ಬುದ್ಧಿ ಬರುವ ಬದಲು, ಮನಸ್ಸು ಮಲಿನವಾಗುವುದು.

ರುಕ್ಮಿಣಿ— ಹಾಗಿದ್ದರೆ ನಾನು ಯಾವ ವಿಷಯದಲ್ಲೂ ಮಾತನಾಡಬಾರದೆಂದು ನಿನ್ನ ಅಪೇಕ್ಷೆಯಷ್ಟೆ! ಹಾಗೆಯೇ ಆಗಲಿ! ಆದರೆ ಮತ್ತಾವಾಗಲಾದರೂ ಏನಾದರೂ ಸಂಭವಿಸಿದರೆ ' ನೀನು ಹಿರಿಯಳಾಗಿ ಮನೆಯಲ್ಲಿದ್ದೂ ತಿಳಿವಳಿಕೆ ಏಕೆ ಹೇಳಲಿಲ್ಲ '–ಎಂದು ಮಾತ್ರ ಹೇಳಬೇಡ. ನನ್ನ ವಾಕ್ಯಗಳು ವಿಷಪ್ರಾಯವಾಗಿರುವಾಗ ನಾನೇಕೆ ಮಾತನಾಡಲಿ? ಮನೆ–ಸೊಸೆಯು ಮನೆಯನ್ನು ಹೇಗೆ ನಿರ್ವಹಿಸುವಳೆಂದು ನಾನೂ ನೋಡುವೆನು!

ಅಷ್ಟರಲ್ಲಿ ಶ್ರೀರಾಮ ಮತ್ತು ಜಯರಾಮರು ಶಾಲೆಯಿಂದ ಹಿಂತಿರುಗಿದರು. ಬರುತ್ತಿರುವಂತೆಯೇ ಇಬ್ಬರೂ ರುಕ್ಮಿಣಿಯನ್ನು ತಿಂಡಿ ಕೇಳತೊಡಗಿದರು. ರುಕ್ಮಿಣಿಯು ನುಡಿದಳು - ನಿಮ್ಮ ಹೊಸ ಅಮ್ಮನ ಹತ್ತಿರ ಹೋಗಿ ಕೇಳಿರಿ; ನನ್ನನ್ನೇಕೆ ಹಿಂಸಿಸುವಿರಿ? ನಾನು ಮಾತನಾಡಬಾರದೆಂದು ಆಜ್ಞೆಯಾಗಿದೆ.

ತೋತಾರಾಮ—ನೀವು ಆ ಕೊಠಡಿಗೆ ಕಾಲಿಟ್ಟರೆ, ನಿಮ್ಮ ಕಾಲುಗಳನ್ನು ಕತ್ತರಿಸಿಬಿಡುವೆನು. ದುಷ್ಟರಿರಾ! ಇತ್ತೀಚೆಗೆ ನಿಮ್ಮ ಮೊಂಡತನವು ಮೇರೆಮೀರಿದೆ.

ಜಯರಾಮನು ಸ್ವಲ್ಪ ಧೈರ್ಯಶಾಲಿ. ' ನೀವು ಅವರನ್ನೇನೂ ಅನ್ನುವುದಿಲ್ಲ, ನಮ್ಮನ್ನೇ ಗದರಿಸುವಿರಿ! ಯಾವಾಗ ಕೇಳಿದರೂ ಕಾಸನ್ನೇ ಕೊಡುವುದಿಲ್ಲ ' ಎಂದನು.

ಶ್ರೀರಾಮನು ಅಣ್ಣನ ಹೇಳಿಕೆಯನ್ನು ಅನುಮೋದಿಸುತ್ತ ನುಡಿದನು— ' ನನ್ನನ್ನು ಹಿಂಸಿಸಿದರೆ, ಕಿವಿಗಳನ್ನು ಕತ್ತರಿಸಿಬಿಡುವೆನು ' ಎನ್ನುವರು ಅಲ್ಲವೇ ಜಯರಾಮ?

ಈ ಮಾತನ್ನು ಕೇಳಿದೊಡನೆಯೇ ತೋತಾರಾಮರು ಕ್ರೋಧದ ಕಿಡಿಗಳನ್ನು ಕಾರುತ್ತ, ಶ್ರೀರಾಮನ ಎರಡೂ ಕಿವಿಗಳನ್ನು ಬಲವಾಗಿ ಹಿಂಡಿದರು. ಹುಡುಗನು ಚಿಟ್ಟನೆ ಚೀರುತ್ತ ಅಳತೊಡಗಿದನು.

ರುಕ್ಮಿಣಿಯು ಒಳಗಿನಿಂದ ಓಡಿಬಂದು ತೋತಾರಾಮರ ಕೈಯಿಂದ ಹುಡುಗನನ್ನು ಬಿಡಿಸಿಕೊಂಡು ಹೇಳಿದಳು—ಸಾಕು ಸಾಕು; ಸುಮ್ಮನಿರು! ಕಂದನನ್ನು ಕೊಂದುಬಿಡುವೆಯಾ? ಅಯ್ಯೋ! ಕಿವಿಗಳೆರಡೂ ಕೆಂಪಾಗಿ ಹೋದವು. ಹೊಸ ಹೆಂಡತಿಯನ್ನು ಹೊಂದಿ, ಪುರುಷನು ಅಂಧನಾಗುವ ನೆಂಬ ಹೇಳಿಕೆಯು ಸುಳ್ಳಲ್ಲ! ಈಗಲೇ ಈ ಗತಿಯಾದರೆ ಮುಂದೇನಾಗು ವುದೋ ಭಗವಂತನೇ ಬಲ್ಲ!

ನಿರ್ಮಲೆಯು ತನ್ನ ವಿಜಯಕ್ಕಾಗಿ ಮನಸ್ಸಿನಲ್ಲೇ ಸಂತೋಷ ಗೊಂಡಳು. ಆದರೆ ತೋತಾರಾಮರು ಮಗುವಿನ ಕಿವಿಗಳನ್ನು ಹಿಡಿದು ಹಿಂಡಿ ದಾಗ ಅವಳಿಂದ ಸಹಿಸಲಾಗಲಿಲ್ಲ. ಬಿಡಿಸಿಕೊಳ್ಳಬೇಕೆಂದು ಓಡಿ ಬಂದಳು. ಅಷ್ಟರಲ್ಲೇ ರುಕ್ಮಿಣಿಯು ಅಲ್ಲಿಗೆ ಬಂದಿದ್ದಳು. 'ಬೆಂಕಿಯನ್ನು ಬೇಕೆಂದು ಹೊತ್ತಿಸಿಬಿಟ್ಟು, ಈಗ ಆರಿಸಬಂದಿರುವೆಯಾ? ನಿನ್ನ ಮಕ್ಕಳಾದರೆ ಆಗ ಬುದ್ಧಿ ಬರುವುದು! ಇತರರ ನೋವನ್ನು ನೀನೇನು ಬಲ್ಲೆ?–ಎಂದಳು.

ನಿರ್ಮಲೆ—ಇಲ್ಲೇ ನಿಂತಿರುವರಲ್ಲ? ನಾನೇನು ಬೆಂಕಿ ಹೊತ್ತಿಸಿದೆ ನೆಂದು ಅವರನ್ನೇ ಕೇಳಿಕೊಳ್ಳಿ! ಹುಡುಗರು ಆಗಾಗ ಬಂದು ಕಾಸು ಕೊಡೆಂದು ಹಿಂಸೆ ಮಾಡುವರು—ಎಂದಷ್ಟು ಮಾತ್ರ ನುಡಿದೆನು. ಇಷ್ಟಲ್ಲದೆ ಬೇರೇನಾದರೂ ನನ್ನ ಬಾಯಿಂದ ಬಂದಿದ್ದರೆ ನನ್ನ ಕಣ್ಣುಗಳು ಇಂಗಿ ಹೋಗಲಿ!

ತೋತಾರಾಮ—ಈಚೆಗೆ ಕೆಲವು ದಿನಗಳಿಂದ ಈ ಹುಡುಗರ ದುಷ್ಟ ತನ ಬಹಳ ಹೆಚ್ಚಿದೆ. ನಾನು ನೋಡುತ್ತಿಲ್ಲವೇ? ನನಗೂ ಕಣ್ಣುಗಳು ಕಾಣಿಸುತ್ತವೆ. ಮೂವರೂ ಬಹಳ ದುಷ್ಟರೂ, ಧೂರ್ತರೂ ಆಗಿರುವರು. ಈಗಲೇ ದೊಡ್ಡವನನ್ನು ಈ ದಿನವೇ ಹಾಸ್ಟಲಿಗೆ ಕಳುಹಿಸಿಬಿಡುವೆನು.

ರುಕ್ಮಿಣಿ—ಇದುವರೆಗೂ ಅವರ ದುಷ್ಟತನಗಳು ನಿನ್ನ ಕಣ್ಣಿಗೆ ಬೀಳು ತ್ತಿರಲಿಲ್ಲವೇ? ಇಂದೇಕೆ ನಿನ್ನ ನೇತ್ರಗಳು ಇಷ್ಟು ಸೂಕ್ಷ್ಮವಾದವು?

ತೋತಾರಾಮ—ಹುಡುಗರನ್ನು ನೀನೇ ಇಷ್ಟೆಲ್ಲಾ ಹೆಚ್ಚಿಸಿರುವೆ?

ರುಕ್ಮಿಣಿ—ಹಾಗಿದ್ದರೆ ನಾನೇ ವಿಷಬೀಜವೆಂದು ನಿನ್ನ ಭಾವನೆಯಾ ಗಿದೆ. ನನ್ನಿಂದಲೇ ನಿನ್ನ ಮನೆಯು ಹಾಳಾಗುತ್ತಿರುವುದೆಂದು ತಿಳಿದಿರುವೆ.

ತೋತಾರಾಮ ನೀನು ಪ್ರತಿಯೊಂದು ಮಾತಿಗೂ ಆಕ್ಷೇಪಿಸುತ್ತ ಬೈಯುವೆಯೆಂದು ತಿಳಿಯಬಂತು. ಹಾಗೇನಾದರೂ ತಿಳಿವಳಿಕೆ ಹೇಳಬೇಕಾಗಿದ್ದರೆ ಒಳ್ಳೆಯ ಮಾತಿನಲ್ಲಿ ತಿಳಿಯಹೇಳು. ಬೈಯುವುದರಿಂದ ಬುದ್ಧಿ ಬರುವ ಬದಲು, ಮನಸ್ಸು ಮಲಿನವಾಗುವುದು.

ರುಕ್ಮಿಣಿ— ಹಾಗಿದ್ದರೆ ನಾನು ಯಾವ ವಿಷಯದಲ್ಲೂ ಮಾತನಾಡ ಬಾರದೆಂದು ನಿನ್ನ ಅಪೇಕ್ಷೆಯಷ್ಟೆ! ಹಾಗೆಯೇ ಆಗಲಿ! ಆದರೆ ಮತ್ತಾವಾಗ ಲಾದರೂ ಏನಾದರೂ ಸಂಭವಿಸಿದರೆ ' ನೀನು ಹಿರಿಯಳಾಗಿ ಮನೆಯಲ್ಲಿದ್ದೂ ತಿಳಿವಳಿಕೆ ಏಕೆ ಹೇಳಲಿಲ್ಲ '–ಎಂದು ಮಾತ್ರ ಹೇಳಬೇಡ. ನನ್ನ ವಾಕ್ಯಗಳು ವಿಷಪ್ರಾಯವಾಗಿರುವಾಗ ನಾನೇಕೆ ಮಾತನಾಡಲಿ? ಮನೆ–ಸೊಸೆಯು ಮನೆ ಯನ್ನು ಹೇಗೆ ನಿರ್ವಹಿಸುವಳೆಂದು ನಾನೂ ನೋಡುವೆನು!

ಅಷ್ಟರಲ್ಲಿ ಶ್ರೀರಾಮ ಮತ್ತು ಜಯರಾಮರು ಶಾಲೆಯಿಂದ ಹಿಂತಿರು ಗಿದರು. ಬರುತ್ತಿರುವಂತೆಯೇ ಇಬ್ಬರೂ ರುಕ್ಮಿಣಿಯನ್ನು ತಿಂಡಿ ಕೇಳತೊಡ ಗಿದರು. ರುಕ್ಮಿಣಿಯು ನುಡಿದಳು – ನಿಮ್ಮ ಹೊಸ ಅಮ್ಮನ ಹತ್ತಿರ ಹೋಗಿ ಕೇಳಿರಿ; ನನ್ನನ್ನೇಕೆ ಹಿಂಸಿಸುವಿರಿ? ನಾನು ಮಾತನಾಡಬಾರದೆಂದು ಆಜ್ಞೆ ಯಾಗಿದೆ.

ತೋತಾರಾಮ—ನೀವು ಆ ಕೊಠಡಿಗೆ ಕಾಲಿಟ್ಟರೆ, ನಿಮ್ಮ ಕಾಲು ಗಳನ್ನು ಕತ್ತರಿಸಿಬಿಡುವೆನು. ದುಷ್ಟರಿರಾ! ಇತ್ತೀಚೆಗೆ ನಿಮ್ಮ ಮೊಂಡ ತನವು ಮೇರೆಮೀರಿದೆ.

ಜಯರಾಮನು ಸ್ವಲ್ಪ ಧೈರ್ಯಶಾಲಿ. ' ನೀವು ಅವರನ್ನೇನೂ ಅನ್ನುವು ದಿಲ್ಲ, ನಮ್ಮನ್ನೇ ಗದರಿಸುವಿರಿ! ಯಾವಾಗ ಕೇಳಿದರೂ ಕಾಸನ್ನೇ ಕೊಡುವು ದಿಲ್ಲ ' ಎಂದನು.

ಶ್ರೀರಾಮನು ಅಣ್ಣನ ಹೇಳಿಕೆಯನ್ನು ಅನುಮೋದಿಸುತ್ತ ನುಡಿದನು– ' ನನ್ನನ್ನು ಹಿಂಸಿಸಿದರೆ, ಕಿವಿಗಳನ್ನು ಕತ್ತರಿಸಿಬಿಡುವೆನು ' ಎನ್ನುವರು ಅಲ್ಲವೇ ಜಯರಾಮ?

ಈ ಮಾತನ್ನು ಕೇಳಿದೊಡನೆಯೇ ತೋತಾರಾಮರು ಕ್ರೋಧದ ಕಿಡಿ ಗಳನ್ನು ಕಾರುತ್ತ, ಶ್ರೀರಾಮನ ಎರಡೂ ಕಿವಿಗಳನ್ನು ಬಲವಾಗಿ ಹಿಂಡಿದರು. ಹುಡುಗನು ಚಿಟ್ಟನೆ ಚೀರುತ್ತ ಅಳತೊಡಗಿದನು.

ರುಕ್ಮಿಣಿಯು ಒಳಗಿನಿಂದ ಓಡಿಬಂದು ತೋತಾರಾಮರ ಕೈಯಿಂದ ಹುಡುಗನನ್ನು ಬಿಡಿಸಿಕೊಂಡು ಹೇಳಿದಳು—ಸಾಕು ಸಾಕು; ಸುಮ್ಮನಿರು! ಕಂದನನ್ನು ಕೊಂದುಬಿಡುವೆಯಾ? ಅಯ್ಯೋ! ಕಿವಿಗಳೆರಡೂ ಕೆಂಪಾಗಿ ಹೋದವು. ಹೊಸ ಹೆಂಡತಿಯನ್ನು ಹೊಂದಿ, ಪುರುಷನು ಅಂಧನಾಗುವನೆಂಬ ಹೇಳಿಕೆಯು ಸುಳ್ಳಲ್ಲ! ಈಗಲೇ ಈ ಗತಿಯಾದರೆ ಮುಂದೇನಾಗುವುದೋ ಭಗವಂತನೇ ಬಲ್ಲ!

ನಿರ್ಮಲೆಯು ತನ್ನ ವಿಜಯಕ್ಕಾಗಿ ಮನಸ್ಸಿನಲ್ಲೇ ಸಂತೋಷಗೊಂಡಳು. ಆದರೆ ತೋತಾರಾಮರು ಮಗುವಿನ ಕಿವಿಗಳನ್ನು ಹಿಡಿದು ಹಿಂಡಿದಾಗ ಅವಳಿಂದ ಸಹಿಸಲಾಗಲಿಲ್ಲ. ಬಿಡಿಸಿಕೊಳ್ಳಬೇಕೆಂದು ಓಡಿ ಬಂದಳು. ಅಷ್ಟರಲ್ಲೇ ರುಕ್ಮಿಣಿಯು ಅಲ್ಲಿಗೆ ಬಂದಿದ್ದಳು. 'ಬೆಂಕಿಯನ್ನು ಬೇಕೆಂದು ಹೊತ್ತಿಸಿಬಿಟ್ಟು, ಈಗ ಆರಿಸಬಂದಿರುವೆಯಾ? ನಿನ್ನ ಮಕ್ಕಳಾದರೆ ಆಗ ಬುದ್ಧಿ ಬರುವುದು! ಇತರರ ನೋವನ್ನು ನೀನೇನು ಬಲ್ಲೆ?–ಎಂದಳು.

ನಿರ್ಮಲೆ—ಇಲ್ಲೇ ನಿಂತಿರುವರಲ್ಲ? ನಾನೇನು ಬೆಂಕಿ ಹೊತ್ತಿಸಿದೆನೆಂದು ಅವರನ್ನೇ ಕೇಳಿಕೊಳ್ಳಿ! ಹುಡುಗರು ಆಗಾಗ ಬಂದು ಕಾಸು ಕೊಡೆಂದು ಹಿಂಸೆ ಮಾಡುವರು—ಎಂದಷ್ಟು ಮಾತ್ರ ನುಡಿದೆನು. ಇಷ್ಟಲ್ಲದೆ ಬೇರೇನಾದರೂ ನನ್ನ ಬಾಯಿಂದ ಬಂದಿದ್ದರೆ ನನ್ನ ಕಣ್ಣುಗಳು ಇಂಗಿ ಹೋಗಲಿ!

ತೋತಾರಾಮ—ಈಚೆಗೆ ಕೆಲವು ದಿನಗಳಿಂದ ಈ ಹುಡುಗರ ದುಷ್ಟತನ ಬಹಳ ಹೆಚ್ಚಿದೆ. ನಾನು ನೋಡುತ್ತಿಲ್ಲವೇ? ನನಗೂ ಕಣ್ಣುಗಳು ಕಾಣಿಸುತ್ತವೆ. ಮೂವರೂ ಬಹಳ ದುಷ್ಟರೂ, ಧೂರ್ತರೂ ಆಗಿರುವರು. ಈಗಲೇ ದೊಡ್ಡವನನ್ನು ಈ ದಿನವೇ ಹಾಸ್ಟಲಿಗೆ ಕಳುಹಿಸಿಬಿಡುವೆನು.

ರುಕ್ಮಿಣಿ—ಇದುವರೆಗೂ ಅವರ ದುಷ್ಟತನಗಳು ನಿನ್ನ ಕಣ್ಣಿಗೆ ಬೀಳುತ್ತಿರಲಿಲ್ಲವೇ? ಇಂದೇಕೆ ನಿನ್ನ ನೇತ್ರಗಳು ಇಷ್ಟು ಸೂಕ್ಷ್ಮವಾದವು?

ತೋತಾರಾಮ—ಹುಡುಗರನ್ನು ನೀನೇ ಇಷ್ಟೆಲ್ಲಾ ಹೆಚ್ಚಿಸಿರುವೆ?

ರುಕ್ಮಿಣಿ—ಹಾಗಿದ್ದರೆ ನಾನೇ ವಿಷಬೀಜವೆಂದು ನಿನ್ನ ಭಾವನೆಯಾಗಿದೆ. ನನ್ನಿಂದಲೇ ನಿನ್ನ ಮನೆಯು ಹಾಳಾಗುತ್ತಿರುವುದೆಂದು ತಿಳಿದಿರುವೆ.

ಇದೋ, ಈಗಲೇ ಹೊರಟುಹೋಗುವೆನು. ನಿನ್ನ ಮಕ್ಕಳು; ಬೇಕಾದ್ದನ್ನು ಮಾಡು; ಹೊಡಿ! ಬಡಿ! ಕಡಿ! ನಾನೇನೂ ಅನ್ನುವುದಿಲ್ಲ.

ಎಂದು ಹೇಳುತ್ತ ಅಲ್ಲಿಂದ ಹೊರಟುಹೋದಳು. ಹುಡುಗನು ಅಳುತ್ತಿರುವುದನ್ನು ಕಂಡು ನಿರ್ಮಲೆಯು ವಿಹ್ವಲಳಾದಳು. ಅವಳು ಅವನನ್ನು ಎತ್ತಿಕೊಂಡು ಎದೆಗಪ್ಪಿಕೊಳ್ಳುತ್ತ, ತನ್ನ ಕೊಠಡಿಗೆ ಕರೆದುಕೊಂಡು ಹೋಗಿ ಮುದ್ದಾಡತೊಡಗಿದಳು. ಆದರೆ ಬಾಲಕನು ಮತ್ತಷ್ಟು ಬಿಕ್ಕಿ ಬಿಕ್ಕಿ ಅಳ ತೊಡಗಿದನು. ಯಾವ ಮಾತೃಸ್ನೇಹದಿಂದ ವಿಧಿಯು ಅವನನ್ನು ವಂಚಿಸಿದ್ದಿತೋ, ಆ ಸ್ನೇಹವು ಅವನ ಅಬೋಧ ಹೃದಯಕ್ಕೆ ಇಲ್ಲಿ ಸಿಗಲಿಲ್ಲ. ಈ ವಸ್ತುವಿನ ಮೇಲೆ ಅವನದಾವ ಅಧಿಕಾರವೂ ಇರಲಿಲ್ಲ. ಭಿಕ್ಷೆಯ ರೂಪದಲ್ಲಿ ಕೊಟ್ಟುದನ್ನು ಮಾತ್ರ ಸ್ವೀಕರಿಸಬೇಕಾಗಿತ್ತು. ತನ್ನ ತಾಯಿ ಜೀವಂತಳಾಗಿದ್ದಾಗಲೂ ತಂದೆಯು ಅವನನ್ನು ಒಂದೆರಡು ಬಾರಿ ಹೊಡೆದಿದ್ದರು. ಆದರೆ ಆಗ ಅವನ ಮಾತೆಯು ಅವನನ್ನು ಎದೆಗಪ್ಪಿಕೊಂಡು ಅಳುತ್ತಿರಲಿಲ್ಲ. ಅಪ್ರಸನ್ನತೆಯನ್ನು ಸೂಚಿಸಿ, ಸ್ವಲ್ಪ ಸಮಯ ಸುಮ್ಮನಿದ್ದು ಬಿಡುತ್ತಿದ್ದಳು. ನಂತರ ಅವನು ಎಲ್ಲವನ್ನೂ ಮರೆತು ಪುನಃ ಮಾತೆಯ ಬಳಿಗೆ ಓಡಿಹೋಗುತ್ತಿದ್ದನು. ದುಷ್ಟತನಕ್ಕಾಗಿ ಶಿಕ್ಷೆ ದೊರೆಯುವುದೆಂದು ಅವನು ತಿಳಿದಿದ್ದನು. ಆದರೆ ಶಿಕ್ಷೆ ದೊರೆತ ಸಮಯದಲ್ಲಿ ಮುದ್ದಾಡಲ್ಪಡುವುದು ಅವನಿಗೆ ಅರ್ಥವಾಗುತ್ತಿರಲಿಲ್ಲ. ಮಾತೃಪ್ರೇಮದಲ್ಲಿ ಕಠೋರತೆ ಇರುತ್ತಿತ್ತು. ಆದರೆ ಮೃದುಲತೆಯಿಂದ ಮಿಲಿತವಾಗಿರುತ್ತಿತ್ತು. ಈ ಪ್ರೇಮದಲ್ಲಿ ಕರುಣೆ ಇತ್ತು. ಆದರೆ ಆತ್ಮೀಯತೆಯ ಗುಪ್ತ ಸಂದೇಶವಾದ ಆ ಕಠೋರತೆ ಇರಲಿಲ್ಲ. ಮನುಷ್ಯನ ಅಂಗಾಂಗಗಳು ಸ್ವಸ್ಥವಾಗಿದ್ದಾಗ ಅವನಿಗೆ ಅದರ ಕಡೆ ಗಮನವಿರುವುದಿಲ್ಲ; ಆದರೆ ಅದೇ ಅಂಗವು ಯಾವುದಾದರೊಂದು ಯಾತನೆಯನ್ನು ಹೊಂದಿದಾಗ ಅದಕ್ಕೆ ಯಾವ ಏಟೂ ತಾಕದಂತೆ ಕಾಪಾಡಿಕೊಳ್ಳಲಿಚ್ಛಿಸುವನು. ನಿರ್ಮಲೆಯ ಕರುಣ ರೋದನವು ಬಾಲಕನಿಗೆ ತನ್ನ ಅನಾಥತನವನ್ನು ಸೂಚಿಸುತ್ತಿತ್ತು. ಅವನು ಬಹಳ ಹೊತ್ತಿನ ವರೆಗೆ ನಿರ್ಮಲೆಯ ತೊಡೆಯಲ್ಲೇ ಮಲಗಿ ಅಳುತ್ತಿದ್ದನು. ಅಳುತ್ತಿರುವಂತೆ, ಹಾಗೆಯೇ ನಿದ್ದೆ ಮಾಡಿದನು. ನಿರ್ಮಲೆಯು ಅವನನ್ನು ಮಂಚದ ಮೇಲೆ ಮಲಗಿ.ಸಹೋದಳು. ಆದರೆ ಬಾಲಕನು ಸುಪ್ತಾವಸ್ಥೆಯಲ್ಲಿ ತನ್ನ ಕೋಮಲ ಕರಗಳೆರಡನ್ನೂ ಅವಳ ಕುತ್ತಿಗೆಯ

ಸುತ್ತ ಹಾಕಿ, ಬಿಗಿಯಾಗಿ ಅಪ್ಪಿಕೊಂಡನು. ಶಂಕೆ ಮತ್ತು ಭಯಗಳಿಂದ ಅವನ ಮುಖವು ವಿಕೃತವಾಯಿತು. ನಿರ್ಮಲೆಯು ಬಾಲಕನನ್ನು ಪುನಃ ತೊಡೆಯ ಮೇಲೆಯೇ ಮಲಗಿಸಿಕೊಂಡಳು, ಮಂಚದ ಮೇಲೆ ಮಲಗಿಸಲಿಲ್ಲ. ಬಾಲಕನನ್ನು ತೊಡೆಯ ಮೇಲೆ ಮಲಗಿಸಿಕೊಂಡ ಆ ಸಮಯದಲ್ಲಿ ಅವಳಿಗೆ ಹಿಂದೆಂದೂ ಆಗದ ಆನಂದವಾಯಿತು. ಯಾವ ಆತ್ಮವೇದನೆ ಇಲ್ಲದೆ ಮಾನವನಿಗೆ ತನ್ನ ಕಣ್ತೆರೆಯುವುದಿಲ್ಲವೋ ಕರ್ತವ್ಯ ಮಾರ್ಗವು ಕಾಣಬರುವುದಿಲ್ಲವೋ ಅಂತಹ ಆತ್ಮವೇದನೆಯು ಇಂದು ಮೊದಲನೆಯ ಬಾರಿ ಅವಳಿಗುಂಟಾಯಿತು.

## ಆರನೆಯ ಪರಿಚ್ಛೇದ

ಅಂದು ತಮ್ಮ ಪ್ರಗಾಢ ಪ್ರಣಯವನ್ನು ಪ್ರಕಟಿಸಿದ್ದರಿಂದ ನಿರ್ಮಲೆಯ ಪ್ರೀತಿಯನ್ನು ಗಳಿಸಬಹುದೆಂದು ಮುನ್ಷಿ ತೋತಾರಾಮರು ಆಶಿಸಿದ್ದರು. ಆದರೆ ಅವರ ಆಶೆಯು ಲೇಶಮಾತ್ರವೂ ಪೂರ್ಣವಾಗಲಿಲ್ಲ. ಈ ಮುನ್ನ ನಿರ್ಮಲೆಯು ಒಮ್ಮೊಮ್ಮೆಯಾದರೂ ಅವರ ಸಂಗಡ ನಕ್ಕು-ನುಡಿಯುತ್ತಿದ್ದಳು. ಇತ್ತೀಚೆಗೆ ಕೇವಲ ಮಕ್ಕಳ ಲಾಲನೆ-ಪಾಲನೆಯಲ್ಲೇ ನಿರತಳಾಗಿರುತ್ತಿದ್ದಳು. ಯಾವ ವೇಳೆಯಲ್ಲಿ ನೋಡಿದರೂ ಮಕ್ಕಳು ಅವಳ ಬಳಿ ಕುಳಿತಿರುತ್ತಿದ್ದರು ಒಮ್ಮೆ ಅವರಿಗೆ ಊಟ ಮಾಡಿಸುತ್ತಿದ್ದಳು; ಮತ್ತೊಮ್ಮೆ ಸ್ನಾನ ಮಾಡಿಸಿ ಬಟ್ಟೆಯನ್ನು ಹಾಕುತ್ತಿದ್ದಳು; ಇನ್ನೊಮ್ಮೆ ಅವರನ್ನು ಆಟವಾಡಿಸುತ್ತ ಕಥೆ ಹೇಳುತ್ತಿದ್ದಳು. ನಿರ್ಮಲೆಯ ತೃಷಿತ ಹೃದಯವು ಪ್ರಣಯದಿಂದ ನಿರಾಶೆ ಹೊಂದಿ ಮಕ್ಕಳ ಕಡೆಗೆ ತಿರುಗಿತ್ತು. ಮಕ್ಕಳ ಸಂಗಡ ನಕ್ಕು-ನಲಿದಾಡುವುದರಿಂದ ಅವಳ ಮಾತೃಕಲ್ಪನೆಯು ತೃಪ್ತಿಗೊಳ್ಳುತ್ತಿತ್ತು. ಪತಿಯ ಸಂಗಡ ನಕ್ಕು-ನುಡಿಯಲು ಅವಳಿಗೆ ಒಂದು ಬಗೆಯ ಸಂಕೋಚ, ಅನಿಚ್ಛೆ ಮತ್ತು ಅರುಚಿಯುಂಟಾಗುತ್ತಿತ್ತು. ಒಮ್ಮೊಮ್ಮೆ ಎದ್ದು ಓಡಿಹೋಗಲೇ—ಎನಿಸುತ್ತಿತ್ತು. ಆದರೆ, ಬಾಲಕರ ಸ್ವಚ್ಛ ಸರಳ ಸ್ನೇಹದಿಂದ ಅವಳ ಚಿತ್ತವು ಪ್ರಸನ್ನವಾಗುತ್ತಿತ್ತು. ಮೊದಮೊದಲು ಮಾನಸರಾಮನು ಅವಳ ಬಳಿ ಬರಲು ಹಿಂಜರಿಯುತ್ತಿದ್ದನು. ಈತ್ತೀಚೆಗೆ ಅವನೂ ಒಂದೊಂದು ಸಲ ಬಂದು

ಕುಳಿತುಕೊಳ್ಳುತ್ತಿದ್ದನು. ಅವನು ನಿರ್ಮಲೆಯ ಸಮವಯಸ್ಕನೇ; ಆದರೆ ಮಾನಸಿಕ ವಿಕಾಸದಲ್ಲಿ ಅವಳಿಗಿಂತ ಐದುವರ್ಷ ಕಡಿಮೆಯೆನ್ನಬಹುದು ಹಾಕೀ ಮತ್ತು ಫುಟ್‌ಬಾಲ್‌ಗಳೇ ಅವನ ಪ್ರಪಂಚ, ಕಲ್ಪನೆಯ ಮುಕ್ತ-ಕ್ಷೇತ್ರ ಮತ್ತು ಕಾಮನೆಗಳ ಹೂದೋಟವಾಗಿತ್ತು. ಮಾನಸರಾಮನು ಸುಂದರ ವದನದ, ಹಸನ್ಮುಖಿ, ಲಜ್ಜಾಶೀಲ ಯುವಕ. ಊಟದ ಸಮಯದಲ್ಲಿ ಮಾತ್ರ ಅವನು ಮನೆಯಲ್ಲಿರುತ್ತಿದ್ದನು. ಬಾಕಿಯ ವೇಳೆಯನ್ನೆಲ್ಲ ಆಟ-ಪಾಟಗಳಲ್ಲಿ ಕಳೆಯುತ್ತಿದ್ದನು. ಅವನ ಬಾಯಿಂದ ಆಟದ ಮಾತುಗಳನ್ನು ಕೇಳಿ, ನಿರ್ಮಲೆಯು ತುಸು ಹೊತ್ತು ತನ್ನ ಚಿಂತೆಗಳನ್ನು ಮರೆಯುತ್ತಿದ್ದಳು. ಮತ್ತು ಹಿಂದೆ ತಾನೂ, ತನ್ನ ತಂಗಿಯೂ ಬೊಂಬೆಯಾಟವಾಡುತ್ತ ಬೊಂಬೆಯ ಮದುವೆಯನ್ನು ಮಾಡುತ್ತಿದ್ದ ಆ ದಿನಗಳು ಪುನಃ ಬರಬಾರದೇ ಎಂದು ಯೋಚಿಸುತ್ತಿದ್ದಳು !

ಮುನ್ಷಿ ತೋತಾರಾಮರು ಇತರ ಏಕಾಂತಸೇವೀ ಮಾನವರಂತೆ ವಿಷಯಾಸಕ್ತರಾಗಿದ್ದರು. ಮೊದಮೊದಲು ಕೆಲವು ದಿನಗಳ ವರೆಗೆ ಅವರು ನಿರ್ಮಲೆಯನ್ನು ನೋಟ-ತಮಾಷೆಗಳಿಗೆ ಕರೆದುಕೊಂಡು ಹೋಗುತ್ತಿದ್ದರು. ಆದರೆ, ಅದರಿಂದ ಯಾವ ಫಲವೂ ಆಗಲಿಲ್ಲವೆಂದರಿತು ಪುನಃ ಏಕಾಂತ ಸೇವನೆ ಮಾಡತೊಡಗಿದರು ಪ್ರತಿದಿವಸದ ಕಠಿಣ ಮಾನಸಿಕ ಪರಿಶ್ರಮದ ನಂತರ ಅವರ ಮನವು ಆಮೋದ-ಪ್ರಮೋದಗಳಿಗಾಗಿ ಆತುರಗೊಳ್ಳುತ್ತಿತ್ತು. ತಮ್ಮ ವಿನೋದವಾಟಿಕೆಯನ್ನು ಪ್ರವೇಶಿಸಿ ಅಲ್ಲಿನ ಗಿಡಗಳು ಒಣಗಿರುವುದನ್ನೂ, ಪುಷ್ಪಗಳು ಸೊರಗಿರುವುದನ್ನೂ ಕಂಡು ಅವರ ಮನವು ಬೇಸರಗೊಳ್ಳುತ್ತಿತ್ತು. ಈ ವಾಟಿಕೆಯನ್ನು ನಾಶಮಾಡಿಬಿಡಲೇ ಎಂದುಕೊಳ್ಳುತ್ತಿದ್ದರು. ನಿರ್ಮಲೆಯು ತಮ್ಮಿಂದ ಏಕೆ ವಿರಕ್ತಳಾಗಿರುವಳು-ಎಂಬುದನ್ನು ಅವರು ಅರಿಯಲಾರದೆ ಹೋದರು. ದಾಂಪತ್ಯ-ಶಾಸ್ತ್ರದ ಮಂತ್ರಗಳನೆಲ್ಲಾ ಮನನ ಮಾಡಿದರೂ ಅವರ ಮನೋರಥವು ಪೂರ್ತಿಯಾಗಲಿಲ್ಲ. ಮತ್ತೇನು ಮಾಡಬೇಕೆಂದು ಅವರಿಗೆ ತಿಳಿಯಲಿಲ್ಲ!

ಒಂದು ದಿನ ಅವರು ಇದೇ ಚಿಂತೆಯಲ್ಲಿ ಮಗ್ನರಾಗಿ ಕುಳಿತಿದ್ದಾಗ ಅವರ ಸಹಪಾಠಿಯಾದ ನಯನಸುಖರಾಮರು ಅಲ್ಲಿಗೆ ಬಂದರು. ನಮಸ್ಕಾರ ಮಾಡಿ ನಸುನಗುತ್ತ ನುಡಿದರು—ಇತ್ತೀಚೆಗೆ ಹೊಸ ಹೆಂಡತಿಯನ್ನು ಹೊಂದಿ

ಆನಂದವೇ ಆನಂದವೆಂದು ಕಾಣುವುದು! ನೀನೇ ಭಾಗ್ಯಶಾಲಿ! ನನ್ನ ಪಾಡನ್ನು ನೋಡು; ಕೆಲವು ದಿನಗಳಿಂದ ಪತ್ನಿಯು ಕೋಪಗೊಂಡಿರುವಳು. ನಾನಾದರೂ ಬೇರೆ ಮದುವೆಯ ಚಿಂತೆಯಲ್ಲೇ ಇರುವೆನು. ನಿನಗೆಲ್ಲಾದರೂ ತಿಳಿದಿದ್ದರೆ ಏರ್ಪಾಡು ಮಾಡಿಕೊಡು!

ತೋತಾರಾಮರು ಗಂಭೀರ ಭಾವದಿಂದ ನುಡಿದರು—ಆ ಮೂರ್ಖತನವನ್ನು ಮಾತ್ರ ಮಾಡಬೇಡ; ನಂತರ ಪಶ್ಚಾತ್ತಾಪಪಡುವೆ! ಯುವತಿಯರು ಯಾವಾಗಲೂ ಯುವಕನನ್ನೇ ಅಪೇಕ್ಷಿಸುವರು. ನನ್ನಂಥ–ನಿನ್ನಂಥವರಿಂದ ಅವರಿಗೆ ಸಂತೋಷವಿಲ್ಲ. ನಿಜವಾಗಿಯೂ ನುಡಿಯುವೆನು, ಮದುವೆ ಮಾಡಿಕೊಂಡು ನಾನೀಗ ಪಶ್ಚಾತ್ತಾಪ ಪಡುತ್ತಿರುವೆನು. ಇನ್ನು ನಾಲ್ಕಾರು ವರ್ಷಗಳು ಜೀವನದ ಸುಖವನ್ನು ಸವಿಯೋಣವೆಂದು ಆಶಿಸುತ್ತಿದ್ದೆ. ಆದರೆ ಎಲ್ಲವೂ ವ್ಯತಿರಿಕ್ತವಾಯಿತು.

ನಯನ—ನೀನೇನು ಮಾತಾಡುತ್ತಿರುವೆ? ಯುವತಿಯರನ್ನು ಬಲೆಗೆ ಹಾಕಿಕೊಳ್ಳುವುದೇನು ಕಷ್ಟ? ಸ್ವಲ್ಪ ನೋಟ–ತಮಾಷೆಗಳನ್ನು ತೋರಿಸಿಬಿಡು; ಅವರ ರೂಪ–ಲಾವಣ್ಯಗಳನ್ನು ಪ್ರಶಂಸಿಸಿ ಬಿಡು; ನಿನ್ನ ಕಾರ್ಯವು ನೆರವೇರಿದಂತೆಯೇ!

ತೋತಾರಾಮ—ಇದೆಲ್ಲವನ್ನೂ ಮಾಡಿ ಸೋತೆನು!

ನಯನ—ಅದಿರಲಿ! ಅತ್ತರು–ಸೆಂಟುಗಳು, ಫಲ-ಪುಷ್ಪಗಳು ಮುಂತಾದುವನ್ನು ತಂದುಕೊಟ್ಟು ನೋಡಿದೆಯಾ?

ತೋತಾರಾಮ—ಅದೆಲ್ಲವನ್ನೂ ಮಾಡಿದೆನು, ನಯನ! ದಾಂಪತ್ಯ ಶಾಸ್ತ್ರದ ಮಂತ್ರಗಳನ್ನೆಲ್ಲಾ ಪರೀಕ್ಷಿಸಿದೆನು; ಎಲ್ಲವೂ ಬರಿಯ ಬುರುಡೆ!

ನಯನ—ನನ್ನ ಇನ್ನೊಂದು ಸಲಹೆಯನ್ನು ಕೇಳು; ನಿನ್ನ ರೂಪವನ್ನು ಸ್ವಲ್ಪ ಉತ್ತಮಗೊಳಿಸಿಕೊ! ಈಚೆಗೆ ಇಲ್ಲಿಗೊಬ್ಬ ವೈದ್ಯರು ಬಂದಿರುವರು. ಅವರ ಚಿಕಿತ್ಸೆಯಿಂದ ವೃದ್ಧಾಪ್ಯದ ಕುರುಹುಗಳೆಲ್ಲ ಮಾಯವಾಗುವುವು. ಮುಖದ ಮುದ್ದುರೆಲ್ಲ ಹೋಗಿ, ನೆರತ ಕೂದಲುಗಳು ಕಪ್ಪಗಾಗುವುವು. ನಿಜವಾಗಿಯೂ ಯಕ್ಷಿಣಿಯಂತಹ ಚಿಕಿತ್ಸೆ! ಮನುಷ್ಯನ ರೂಪೇ ಬದಲಾಯಿಸಿ ಹೋಗುವುದು!

ತೋತಾರಾಮ—"ಫೀಜ್" ಏನು ತೆಗೆದುಕೊಳ್ಳುವರು?

ನಯನ—ಫೀಜೇನೋ ಹೆಚ್ಚಾಗಿ ತೆಗೆದುಕೊಳ್ಳುವರು; ಬಹುಶಃ ಐನೂರು ರೂಪಾಯಿಗಳಿರಬಹುದು!

ತೋತಾರಾಮ—ಇದೆಲ್ಲಾ ಮೂರ್ಖರನ್ನು ಮೋಸಗೊಳಿಸುವ ಉಪಾಯ; ಯಾವುದೋ ಮುಲಾಮನ್ನು ಹಚ್ಚಿ ಕೆಲವು ದಿನಗಳ ಮಟ್ಟಿಗೆ ಮುಖವು ಮೃದುವಾಗಿರುವಂತೆ ಮಾಡಬಹುದು! ಈ ವೈದ್ಯರಲ್ಲಿ ನನಗಂತೂ ನಂಬಿಗೆಯೇ ಇಲ್ಲ! ಐದು ಹತ್ತು ರೂಪಾಯಿಗಳ ವಿಷಯವಾಗಿದ್ದರೆ ಒಂದು ಸಲ ಪರೀಕ್ಷಿಸಿ ನೋಡಬಹುದಾಗಿತ್ತು. ಐನೂರು ರೂಪಾಯಿಗಳೆಂದರೇನು?

ನಯನ—ಐನೂರು ರೂಪಾಯಿಗಳು ನಿನಗೊಂದು ದೊಡ್ಡ ವಿಷಯವೇ? ಒಂದು ತಿಂಗಳ ಸಂಪಾದನೆ! ನನ್ನ ಹತ್ತಿರ ಐನೂರು ರೂಪಾಯಿಗಳು ಇದ್ದಿದ್ದರೆ ಎಲ್ಲಕ್ಕಿಂತಲೂ ಮೊದಲು ಈ ಕೆಲಸ ಮಾಡುತ್ತಿದ್ದೆ. ಯೌವನದ ಒಂದು ಗಂಟೆಯ ಬೆಲೆಯು ಐನೂರು ರೂಪಾಯಿಗಳಿಗೂ ಮಿಗಿಲಾದುದು!

ತೋತಾರಾಮ—ಇದೆಲ್ಲವೂ ಬೇಡ; ಯಾವುದಾದರೂ ನಾರು ಬೇರು ಅಥವಾ ಅಗ್ಗದಲ್ಲಾಗುವ ಔಷಧಿಯನ್ನು ಹೇಳು! ರೇಡಿಯಂ ಚಿಕಿತ್ಸೆಗಳೆಲ್ಲಾ ಶ್ರೀಮಂತರಿಗೇ ಇರಲಿ!

ನಯನ—ಹಾಗಾದರೆ, ಉಡುಪು-ವಸ್ತ್ರಗಳಲ್ಲಿ ಸ್ವಲ್ಪ ಶೋಕು ಮಾಡಿಕೋ! ನಿನ್ನ ದೊಗಳೆ ಕೋಟು-ಷರಾಯಿಗಳನ್ನು ಬಿಸಾಡು. ಅಂದವಾದ ಪಾಯಿಜಾಮ ಕೋಟುಗಳನ್ನು ಧರಿಸು. ತಲೆಗೆ ಜಯಪುರಿ ರುಮಾಲು, ತಲೆಕೂದಲಿಗೆ ಸುವಾಸನೆಯ ತೈಲ ಉಪಯೋಗಿಸು. ನಿನ್ನ ಬೊಜ್ಜು ಹೊಟ್ಟೆಯನ್ನು ಮೊದಲು ಸ್ವಲ್ಪ ಕರಗಿಸಿಕೋ! ಬಲವಾಗಿ ಕಮರಬಂದನ್ನು ಕಟ್ಟು. ಸ್ವಲ್ಪ ತೊಂದರೆಯಾಗುವುದು; ಆದರೂ ಉಡುಪಿನ ಅಂದವು ಎದ್ದು ಕಾಣುವುದು. ಕೆಲವು ಪ್ರೇಮಗೀತೆಗಳನ್ನು ಕಲಿತು ಸಮಯವರಿತು ಹಾಡು; ಶೃಂಗಾರ ರಸಭರಿತವಾದ ಮಾತುಗಳನ್ನಾಡು; ಪ್ರಿಯತಮೆಯ ವಿನಾ ಇನ್ನಾವ ಚಿಂತೆಯೂ ನಿನಗಿಲ್ಲವೆಂಬಂತೆ ನಟಿಸು! ಆಗಾಗ ಪೌರುಷ ಸಾಹಸದ ಕೆಲಸವನ್ನು ಮಾಡಿತೋರಿಸು. ರಾತ್ರಿಯಲ್ಲಿ ಸುಳ್ಳುಸುಳ್ಳೇ ಕಳ್ಳ ಬಂದನೆಂದು ಕೂಗಿಕೊಂಡು ಕತ್ತಿಯನ್ನು ಹಿಡಿದು ಹೊರಡು. ಆದರೆ, ನಿಜವಾಗಿಯೂ ಕಳ್ಳನು ಬಂದು, ಅವನನ್ನು ಅಟ್ಟಿಕೊಂಡು ಹೋಗುವಂತೆ ಮಾತ್ರ ಮಾಡಿಕೊಳ್ಳಬೇಡ! ಒಂದು ವೇಳೆ ಹಾಗಾದರೂ, ಕಳ್ಳನಿರುವವರೆಗೆ ಏನೂ ತಿಳಿಯ

ದವನಂತೆ ಸುಮ್ಮನಿದ್ದು. ಅವನು ಓಡಿಹೋಗುವ ಹೊತ್ತಿಗೆ ನೀನು ಕತ್ತಿಯನ್ನು ಹಿಡಿದು 'ಕಳ್ಳನೆಲ್ಲಿ-ಕಳ್ಳನೆಲ್ಲಿ' ಎಂದು ಕೂಗಿಕೊಳ್ಳುತ್ತಾ ಹೊರಕ್ಕೆ ಓಡಿ ಬಾ ! ನನ್ನ ಮಾತುಗಳನ್ನು ಕೇವಲ ಒಂದು ತಿಂಗಳಕಾಲ ಪರೀಕ್ಷಿಸಿ ನೋಡು; ಅದರಿಂದ ನಿನಗೆ ಪ್ರಯೋಜನವಾಗದಿದ್ದರೆ, ನೀನು ಕೇಳಿದ ದಂಡವನ್ನು ತೆರುವೆನು !

ತೋತಾರಾಮರು ಆ ಹೊತ್ತಿನಲ್ಲಿ ವ್ಯವಹಾರ ಕುಶಲರಂತೆ ನಟಿಸಿ, ಅವನ ಮಾತುಗಳನ್ನು ತಮಾಷೆ ಮಾಡಿಬಿಟ್ಟರು; ಆದರೆ ಕೆಲವು ವಿಷಯಗಳು ಮಾತ್ರ ಅವರ ಮನಸ್ಸಿನಲ್ಲಿ ಬಲವಾಗಿ ನಾಟಿದವು. ಸ್ವಲ್ಪ ಸ್ವಲ್ಪವಾಗಿ ತಮ್ಮ ಉಡುಪುಗಳನ್ನು ಬದಲಾಯಿಸಿಕೊಂಡರು; ಒಂದೆರಡು ತಿಂಗಳಲ್ಲೇ ಅವರ ಸ್ವರೂಪವು ಮಾರ್ಪಟ್ಟಿತು! ಪ್ರೇಮಗೀತೆಗಳನ್ನು ಹಾಡುವುದು ಅವರಿಗೆ ಹಾಸ್ಯಾಸ್ಪದವಾಗಿ ತೋರಿತು; ಆದರೆ ವೀರತೆಯ ಆಟವನ್ನು ಹೂಡುವುದರಲ್ಲೇನೂ ಅಡ್ಡಿಯಿರಲಿಲ್ಲ.

ಅಂದಿನಿಂದ ಅವರು ತಮ್ಮ ಶೌರ್ಯ ಸಾಹಸದ ಯಾವುದಾದರೂ ಪ್ರಸಂಗವನ್ನು ಬಣ್ಣಿಸುತ್ತಿದ್ದರು. ಅವರ ಈ ಪರಿಯನ್ನು ಕಂಡು ನಿರ್ಮಲೆಗೆ 'ಇವರಿಗೆ ಉನ್ಮಾದ ರೋಗ ಹಿಡಿದಿಲ್ಲವಷ್ಟೇ ?' ಎಂದು ಸಂದೇಹವಾಯಿತು. ಅವರೊಡನೆ ಪ್ರೀತಿಯುಂಟಾಗುವ ಬದಲು ದಯೆಯುಂಟಾಯಿತು. ಕ್ರೋಧ ಮತ್ತು ತಿರಸ್ಕಾರ ಭಾವಗಳು ತೊಲಗಿದವು. ಹೌದು; ಹುಚ್ಚು ಮನುಷ್ಯನು ನಿಜವಾಗಿಯೂ ದಯಾಪಾತ್ರನು. ಕ್ರೋಧ ಮತ್ತು ತಿರಸ್ಕಾರಗಳು ಬುದ್ಧಿ ಸರಿಯಾಗಿರುವವನ ಮೇಲೆ ಮಾತ್ರ ! ಹುಚ್ಚನನ್ನು ತಮಾಷೆ ಮಾಡುವಂತೆ ನಿರ್ಮಲೆಯು ಮಾತುಮಾತಿಗೂ ಅವರನ್ನು ತಮಾಷೆಮಾಡತೊಡಗಿದಳು. 'ಪಾಪ, ತಮ್ಮ ಪಾಪದ ಪ್ರಾಯಶ್ಚಿತ್ತವನ್ನು ಅನುಭವಿಸುತ್ತಿರುವರು. ಈ ಆಟಗಳೆಲ್ಲವೂ ನನ್ನ ದುಃಖವನ್ನು ಮರೆಸುವದಕ್ಕೋಸ್ಕರ ಅಲ್ಲವೇ ? ನನ್ನ ಭಾಗ್ಯವನ್ನು ಬದಲಾಯಿಸಲಳವೇ ? ಈ ಬಡಪ್ರಾಣಿಯ ಮನಸ್ಸನ್ನು ನಾನೇಕೆ ನೋಯಿಸಲಿ ? ಎಂದುಕೊಳ್ಳುತ್ತಿದ್ದಳು.

ಒಂದು ದಿನ ತೋತಾರಾಮರು ರಾತ್ರಿ ಒಂಭತ್ತು ಗಂಟೆಗೆ ಮನೆಗೆ ಹಿಂತಿರುಗಿ, ನಿರ್ಮಲೆಯೊಡನೆ ನುಡಿದರು—ಈ ದಿನ ಶಿವಪುರದ ಕಡೆ ಸ್ವಲ್ಪ ಕೆಲಸವಿತ್ತು; ಹೋಗಿದ್ದೆ. ಅಲ್ಲಿ ಮೂರು ಮಂದಿ ಕಳ್ಳರನ್ನು ಎದುರಿಸಬೇಕಾ

ಯಿತು ! ಬಹಳ ಕತ್ತಲೆಯಾಗಿತ್ತು. ರೈಲು ಹಾದಿಯ ಬಳಿ ಹೋದೊಡನೆಯೇ ಕತ್ತಿಯನ್ನು ಹಿಡಿದು ಮೂರು ಮಂದಿ ಇದ್ದಕ್ಕಿದ್ದಂತೆಯೇ ಮೇಲೆ ನುಗ್ಗಿದರು. ಮೂವರೂ ಕಾಳದೇವರಂತೆಯೇ ಇದ್ದರು. ನಾನು ಒಬ್ಬೊಂಟಿಗ. ಕೈಯ ಲ್ಲೊಂದು ಬೆತ್ತ ಮಾತ್ರ ! ಆ ಮೂರು ಮಂದಿಯ ಕೈಯಲ್ಲೂ ಕತ್ತಿಗಳು ! ನಿಜವಾಗಿಯೂ ಪ್ರಾಣ ಹಾರಿಹೋದಂತೆಯೇ ಆಯಿತು ! ಇಂದೇ ನನ್ನ ಜೀವನದ ಕಡೆಯೆಂದು ತಿಳಿದೆನು. 'ಸಾಯುವುದೇ ಸ್ಥಿರವಾಗಿರುವಾಗ ವೀರ ನಂತೆ ಸಾಯಬಾರದೇಕೆ ?' ಎಂದು ಯೋಚಿಸಿದೆನು. ಅಷ್ಟರಲ್ಲಿ ಒಬ್ಬನು ಕೂಗಿ ಹೇಳಿದನು—'ನಿನ್ನ ಬಳಿ ಇರುವುದನ್ನೆಲ್ಲ ಇಲ್ಲಿಟ್ಟು, ಸುಮ್ಮನೆ ಹೊರಟು ಹೋಗು'

ನಾನು ಬೆತ್ತವನ್ನು ಗಿರಗಿರನೆ ತಿರಗಿಸುತ್ತ, ಶೌರ್ಯದಿಂದ ನುಡಿದೆನು— ನನ್ನ ಹತ್ತಿರ ಇರುವುದು ಈ ಬೆತ್ತ ಮಾತ್ರ ! ಇದರ ಬೆಲೆ ಏನು ಗೊತ್ತೆ ? ಒಂದೇಟಿಗೆ ಒಬ್ಬ ಮನುಷ್ಯನ ತಲೆ !

ನನ್ನ ಮುಖದಿಂದ ಈ ಮಾತುಗಳು ಹೊರಬಿದ್ದೊಡನೆಯೇ ಮೂವರೂ ಕತ್ತಿಯನ್ನೆಳೆದು ಮುನ್ನುಗ್ಗಿದರು ಅವರ ಪ್ರಹಾರವನ್ನು ಬೆತ್ತದಿಂದ ತಡೆ ದೆನು. ಮೇಲಿಂದಮೇಲೆ ಅವರು ಪ್ರಹರಿಸುತ್ತಲೇ ಇದ್ದರು. ನಾನು ತಡೆ ಯುತ್ತ ಹೋದೆನು. ಹತ್ತು ನಿಮಿಷಗಳ ವರೆಗೆ ಅವರು ತಮ್ಮ ಕೈಲಾದಷ್ಟು ಕಾದಿದರು. ಕೊನೆಗೆ ಅವರ ಬೇಳೆ ಬೇಯಲಿಲ್ಲ ! ನನ್ನ ಬಳಿ ಕತ್ತಿ ಇದ್ದಿದ್ದರೆ ನಿಜವಾಗಿಯೂ ಒಬ್ಬೊಬ್ಬನನ್ನೂ ಕಡಿದು ತುಂಡುಮಾಡಿಬಿಡುತ್ತಿದ್ದೆ. ಎಷ್ಟು ವರ್ಣಿಸಿದರೇನು ? ಆಹೊತ್ತಿನ ನನ್ನ ಶೌರ್ಯವು ಪ್ರೇಕ್ಷಣೀಯವಾಗಿತ್ತು. ಈ ಚಪಲತೆ ನನಗೆಲ್ಲುಂಟಾಯಿತೆಂದು ನನಗೇ ಆಶ್ಚರ್ಯ ! ಸೋತೆವೆಂದು ತಿಳಿದ ನಂತರ ಮೂವರೂ ಕತ್ತಿಯನ್ನು ಒರೆಯಲ್ಲಿ ಸೇರಿಸಿ, ಕೈಮುಗಿದು ನುಡಿದರು— ನಿಮ್ಮಂತಹ ವೀರರನ್ನು ನಾವು ಇದುವರೆಗೂ ಕಂಡಿರಲಿಲ್ಲ. ನಾವು ಮೂವರೂ ಎಷ್ಟೋ ಗ್ರಾಮ–ಗ್ರಾಮಗಳನ್ನೇ ಲೂಟಿ ಹೊಡೆದಿರುವೆವು. ಇಂದು ನಿಮ್ಮ ಬಳಿ ಸೋಲಬೇಕಾಯಿತು ಎಂದು ಅಲ್ಲಿ ನಿಲ್ಲದೆ ಪಲಾಯನ ಮಾಡಿದರು.

ನಿರ್ಮಲೆಯು ಗಂಭೀರಭಾವದಿಂದ ನಸುನಕ್ಕು ನುಡಿದಳು—ಹಾಗಿದ್ದರೆ ಈ ಬೆತ್ತದ ಮೇಲೆ ಕತ್ತಿಯ ಅನೇಕ ಗುರುತುಗಳು ಇರಬೇಕಲ್ಲವೇ ?

ಮುನ್ನಿಯವರು ಈ ಪ್ರಶ್ನೆಗೆ ಸಿದ್ಧರಾಗಿರಲಿಲ್ಲ; ಅಂತೂ ಏನಾದರೊಂದು ಉತ್ತರ ಕೊಡಲೇಬೇಕಾಯಿತು. ಅವರೆಂದರು—ಅವರ ಪ್ರಹಾರಗಳೆಲ್ಲಾ ಕೆಳಗೆ ಬೀಳುವಂತೆ ತಡೆದೆನು; ಹಾಗೂ ಒಂದೆರಡೇಟು ಬೆತ್ತದ ಮೇಲೆ ಬಿತ್ತು. ಆದರೆ, ಅದರಿಂದ ಯಾವ ಗುರುತೂ ಆಗಿಲ್ಲ.

ಈ ಮಾತು ಮುಗಿಯುವಷ್ಟರಲ್ಲೇ ರುಕ್ಮಿಣಿಯು ಒಳಗಿಂದ ಗಾಬರಿಗೊಂಡು ಓಡಿಬಂದು, ಮೇಲುಸಿರು ಬಿಡುತ್ತ ನುಡಿದಳು—ತೋತಾ, ಎಲ್ಲಿರುವೆ ತೋತಾ? ನನ್ನ ಕೊಠಡಿಯಲ್ಲಿ ಒಂದು ಸರ್ಪವು ಸೇರಿಬಿಟ್ಟಿದೆ. ನನ್ನ ಮಂಚದ ಕೆಳಗಡೆ ಮಲಗಿದೆ. ಅಬ್ಬಬ್ಬಾ! ಎರಡು ಗಜ ಉದ್ದವಿರಬಹುದು. ಹೆಡೆಯನ್ನು ಬಿಚ್ಚಿ ಬುಸುಗುಟ್ಟುತ್ತಿದೆ! ಸ್ವಲ್ಪ ಬೇಗ ಬಾ, ದೊಣ್ಣೆಯನ್ನು ತೆಗೆದುಕೊಂಡು ನಡೆ!

ತೋತಾರಾಮರ ಮುಖದ ಬಣ್ಣವೇ ಬದಲಾಯಿಸಿ ಹೋಯಿತು; ಬಾಯಿಂದ ಮಾತು ಹೊರಡದಾಯಿತು. ಆದರೂ ಮನಸಿನ ಭಾವಗಳನ್ನು ಬಚ್ಚಿಟ್ಟುಕೊಂಡು ನುಡಿದರು—ಸರ್ಪ ಇಲ್ಲೆಲ್ಲಿ ಬರುವುದು? ನೀನು ಮೋಸ ಹೋಗಿರುವೆ! ಯಾವುದೋ ಹಗ್ಗವಿರಬೇಕು.

ರುಕ್ಮಿಣಿ—ನಾನು ಕಣ್ಣಾರೆ ನೋಡಿ ಬಂದಿರುವೆನು. ಸ್ವಲ್ಪ ನೋಡು ನಡೆ! ಗಂಡಸಾಗಿ ಹೆದರುವೆಯಾ?

ಮುನ್ನಿಯವರು ಕೊಠಡಿಯಿಂದ ಹೊರಗೆ ಬಂದರು; ಆದರೆ ವರಾಂಡದಲ್ಲೇ ನಿಂತುಬಿಟ್ಟರು. ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು; ಕಾಲುಗಳು ನಿಂತಲ್ಲೇ ನಿಂತವು! ಸರ್ಪವು ಕ್ರೂರ ಪ್ರಾಣಿ; ಎಲ್ಲಾದರೂ ಕಚ್ಚಿಬಿಟ್ಟರೆ, ಅನ್ಯಾಯವಾಗಿ ಪ್ರಾಣ ತೆರಬೇಕಾಗುವುದು—ಎಂದು ಯೋಚಿಸಿ ನುಡಿದರು—ನನಗೇನೂ ಹೆದರಿಕೆಯಿಲ್ಲ; ಹುಲಿಯಲ್ಲ, ಸಿಂಹವಲ್ಲ! ಸರ್ಪ ತಾನೇ? ಆದರೆ ದೊಣ್ಣೆಯಿಂದ ಸರ್ಪವು ಸಾಯುವುದಿಲ್ಲ. ಯಾರನ್ನಾದರೂ ಕಳುಹಿಸುವೆನು; ಪಕ್ಕದ ಮನೆಯಿಂದ ಒನಕೆ ತರಲಿ!

ಹೀಗೆಂದು ನುಡಿದು ಮುನ್ನಿಯವರು ತಟ್ಟನೆ ಹೊರಕ್ಕೆ ಬಂದುಬಿಟ್ಟರು. ಮಾನಸರಾಮನು ಊಟಮಾಡುತ್ತ ಕುಳಿತಿದ್ದನು. ಅವನು ಊಟವನ್ನು ಬಿಟ್ಟು ತನ್ನ ಹಾಕಿಯ ಬೆತ್ತವನ್ನು ತೆಗೆದುಕೊಂಡು ಕೊಠಡಿಯನ್ನು ಪ್ರವೇಶಿಸಿದನು. ಮಂಚವನ್ನು ಒತ್ತಟ್ಟಿಗೆಳೆದನು. ಸರ್ಪವು ಮಸ್ತವಾಗಿತ್ತು. ಓಡಿ

ಹೋಗುವ ಬದಲು ಹೆಡೆಯನ್ನಾಡಿಸುತ್ತ ನಿಂತಿತು. ಮಾನಸರಾಮನು ಮಂಚದ ಮೇಲಿದ್ದ ದುಪಟಿಯನ್ನು ಅದರ ಮೇಲೆಸೆದು, ಹಾಕೀ ಬೆತ್ತದಿಂದ ಮೂರು ನಾಲ್ಕು ಏಟುಗಳನ್ನು ಹೊಡೆದನು. ಸರ್ಪವು ಸತ್ತುಹೋಯಿತು. ಆಗ ಅದನ್ನು ಬೆತ್ತದಿಂದೆತ್ತಿಕೊಂಡು ಹೊರಗೆ ಬಂದನು. ಮುನ್ಷಿಯವರು ಐದಾರು ಮಂದಿ ಆಳುಗಳನ್ನು ಕರೆದುಕೊಂಡು ಎದುರಿಗೆ ಬರುತ್ತಿದ್ದರು. ಮಾನಸರಾಮನು ಸರ್ಪವನ್ನು ತರುತ್ತಿರುವುದನ್ನು ಕಂಡು ಅಕಸ್ಮಾತ್ ಅವರು ಬೆಚ್ಚಿಬಿದ್ದರು. ಆದರೆ, ಒಡನೆಯೇ ಚೇತರಿಸಿಕೊಂಡು ನುಡಿದರು—ನಾನು ಬರುತ್ತಿದ್ದೆ! ಅಷ್ಟರಲ್ಲೇಕೆ ಅವಸರಪಟ್ಟೆ? ಅವರ ಕೈಗೆ ಕೊಟ್ಟುಬಿಡು; ಯಾರಾದರೂ ಬಿಸಾಡಿ ಬರುವರು.

ಹೀಗೆನ್ನುತ್ತಾ ಹೆಮ್ಮೆಯೊಡನೆ ಮುನ್ಷಿಯವರು ರುಕ್ಮಿಣಿಯ ಕೊಠಡಿಯ ಬಳಿ ಬಂದು ನಿಂತರು. ಕೊಠಡಿಯನ್ನು ಚನ್ನಾಗಿ ಪರೀಕ್ಷಿಸಿ ನೋಡಿ, ಮೀಸೆಯ ಮೇಲೆ ಕೈತಿರುಗಿಸುತ್ತಾ ನಿರ್ಮಲೆಯ ಬಳಿ ಬಂದು ನುಡಿದರು—ನಾನು ಬರುವಷ್ಟರಲ್ಲೇ ಮಾನಸರಾಮನು ಸರ್ಪವನ್ನು ಸಾಯಿಸಿಬಿಟ್ಟಿರುವನು ಬುದ್ಧಿಯಿಲ್ಲದ ಹುಡುಗ! ಸರ್ಪವನ್ನು ಯಾವಾಗಲೂ ದೊಣ್ಣೆಯಿಂದ ಕೊಲ್ಲಬಾರದು; ಒನಕೆಯಿಂದ ಹೊಡೆಯಬೇಕು. ಹುಡುಗರಲ್ಲಿರುವ ದೋಷವೇ ಇದು! ಇಂತಹ ಸರ್ಪಗಳನ್ನು ನಾನೆಷ್ಟು ಕೊಂದಿರುವೆನೋ? ಸರ್ಪವನ್ನು ಆಡಿಸಿ ಆಡಿಸಿ ಕೊಲ್ಲುವೆನು! ಅನೇಕ ಸರ್ಪಗಳನ್ನು ಮುಷ್ಟಿಯಲ್ಲಿ ಹಿಡಿದು ಹಿಂಡಿಬಿಟ್ಟಿರುವೆನು!

ರುಕ್ಮಿಣಿ—ಸಾಕು ಸುಮ್ಮನಿರು! ನಿನ್ನ ಪೌರುಷವನ್ನು ಪರೀಕ್ಷಿಸಿಬಿಟ್ಟದ್ದಾಯಿತು.

ಮುನ್ಷಿಯವರು ಸಿಟ್ಟಿನಿಂದ 'ಹಾಗೆಯೇ ಆಗಲಿ, ಹೋಗು! ನಾನು ಹೇಡಿಯೆಂದೇ ತಿಳಿ! ನಿನ್ನಿಂದ ನನಗಾವ ಬಹುಮಾನವೂ ಬೇಕಿಲ್ಲ. ಊಟಕ್ಕೆ ಬಡಿಸುವಂತೆ ಅಡಿಗೆಯವರಿಗೆ ಹೇಳು!' ಎಂದರು.

ಮುನ್ಷಿಯವರು ಭೋಜನಕ್ಕಾಗಿ ಒಳಗೆ ಹೋದರು. ನಿರ್ಮಲೆಯು ದ್ವಾರದ ಬಳಿ ನಿಂತು ಯೋಚಿಸಿದಳು. 'ಪರಮಾತ್ಮಾ! ಇದೆಲ್ಲಿಯ ಭೀಷಣ ರೋಗ ಇವರಿಗೆ? ನನ್ನ ದೆಸೆಯನ್ನು ಮತ್ತಷ್ಟು ದಾರುಣ ಮಾಡಲೆಳಸುವರೇ? ನಾನು ಇವರ ಸೇವೆ ಮಾಡಬಲ್ಲೆ; ಸನ್ಮಾನ ಮಾಡಬಲ್ಲೆ; ನನ್ನ

ಜೀವನವನ್ನು ಇವರ ಚರಣಗಳಲ್ಲಿ ಅರ್ಪಿಸಬಲ್ಲೆ; ಆದರೆ ನನ್ನಿಂದ ಪೂಜಾ ಳಾಗದುದನ್ನು ಮಾತ್ರ ಮಾಡಲಾರೆ! ಅವಸ್ಥಾಭೇದವನ್ನು ಅಳಿಸುವುದು ನನ್ನಿಂದ ಸಾಧ್ಯವಿಲ್ಲ. ಇವರು ನನ್ನಿಂದ ಅಪೇಕ್ಷಿಸುವುದಾದರೂ ಏನೆಂದು ಈಗ ತಿಳಿಯಿತು. ಹಾ! ಈ ವಿಷಯವು ಮೊದಲೇ ತಿಳಿದಿದ್ದರೆ? ಇದಕ್ಕಾಗಿ ಇವರು ಇಷ್ಟೇಕೆ ಆಟ ಹೂಡಬೇಕಾಗಿತ್ತು; ತಪಸ್ಯೆ ಮಾಡಬೇಕಾಗಿತ್ತು?

## ಏಳನೆಯ ಪರಿಚ್ಛೇದ

ಅಂದಿನಿಂದ ನಿರ್ಮಲೆಯ ನಡೆನುಡಿಗಳು ಬದಲಾಯಿಸತೊಡಗಿದವು ಕರ್ತವ್ಯಕ್ಕಾಗಿ ತನ್ನ ಬಲಿದಾನ ಮಾಡುವುದೆಂದು ಅವಳು ನಿಶ್ಚಯಿಸಿಬಿಟ್ಟಳು ನಿರಾಶೆ ಮತ್ತು ಸಂತಾಪಗಳು ಇದುವರೆಗೆ ಅವಳನ್ನು ಕರ್ತವ್ಯದ ಕಡೆಗೆ ಗಮನ ಕೊಡಲು ಬಿಡಲಿಲ್ಲ ಅವಳ ಹೃದಯವನ್ನು ವಿಪ್ಲವದ ಜ್ವಾಲೆಯು ದಹಿಸುತ್ತಿತ್ತು. ಅದರ ಅಸಹ್ಯ ವೇದನೆಯಿಂದ ಅವಳು ವಿವೇಕಶೂನ್ಯಳಾಗಿ ದ್ದಳು. ಈಗ ಆ ವೇದನೆಯ ವೇಗವು ಶಾಂತವಾಗತೊಡಗಿತು. 'ಈ ಜೀವನ ದಲ್ಲಿ ನನಗಾವ ಆನಂದವೂ ಇಲ್ಲ. ಅದಕ್ಕಾಗಿ ಆಸೆಪಟ್ಟು ನನ್ನ ಜೀವನವನ್ನೇಕೆ ಹಾಳು ಮಾಡಿಕೊಳ್ಳಲಿ? ಪ್ರಪಂಚದಲ್ಲಿನ ಪ್ರತಿಯೊಂದು ಪ್ರಾಣಿಯೂ ಸುಖ ಶಯ್ಯೆಯ ಮೇಲೇ ಪವಡಿಸುವುದೇ? ಅಂತೆಯೇ ನಾನೂ ಓರ್ವ ಅಭಾಗಿನಿ! ದುಃಖದ ಹೊರೆಯನ್ನು ಹೊರುವುದಕ್ಕಾಗಿಯೇ ದೇವರು ನನ್ನನ್ನು ಸೃಷ್ಟಿಸಿರು ವನು; ಆ ಹೊರೆಯನ್ನು ಇಳಿಸಲು ಸಾಧ್ಯವಿಲ್ಲ, ಬಿಸುಡಲೂ ಸಾಧ್ಯವಿಲ್ಲ. ಅದರ ಭಾರದಿಂದ ಕಣ್ಣು ಕತ್ತಲೆಗವಿದರೂ ಸರಿಯೆ, ಕುತ್ತಿಗೆ ಉಳುಕಿದರೂ ಸರಿಯೆ, ಅಡಿಯನ್ನು ಮುಂದಿಡಲಾರದೆ ಹೋದರೂ ಸರಿಯೆ; ಹೊರೆಯನ್ನು ಮಾತ್ರ ಹೊತ್ತೇ ತೀರಬೇಕು ಆಜೀವ ಶಿಕ್ಷೆ ಹೊಂದಿದ ಕೈದಿಯು ಎಷ್ಟು ಅತ್ತರೇನು? ಅವನ ಅಳುವನ್ನು ಕೇಳುವವರಾರು? ಅವನ ಮೇಲೆ ಯಾರಿಗೆ ದಯೆಯುಂಟಾಗಬೇಕು? ಅಳುವುದರಿಂದ ಮತ್ತಷ್ಟು ಕಷ್ಟವನ್ನೇ ಅನುಭವಿಸ ಬೇಕು!' ಎಂದವಳು ಅರಿತುಕೊಂಡಳು.

ಮರುದಿನ ವಕೀಲಸಾಹೇಬರು ಕಛೇರಿಯಿಂದ ಮನೆಗೆ ಹಿಂತಿರುಗಿದಾಗ ನಿರ್ಮಲೆಯ ಸಹಾಸ್ಯ ಮೂರ್ತಿಯು ಕೋಣೆಯ ಬಾಗಿಲಲ್ಲಿ ನಿಂತಿರುವುದನ್ನು

ಕೊಂಡರು. ಅವಳ ಅನಿಂದ್ಯ ಸುಂದರ ರೂಪವನ್ನು ಕಂಡು ಅವರ ಕಂಗಳು ತೃಪ್ತಿ ಹೊಂದಿದವು. ಬಹುದಿನಗಳ ನಂತರ ಇಂದು ಈ ಕಮಲವು ಅರಳಿರುವುದನ್ನು ಅವರು ಕಂಡರು. ಕೊಠಡಿಯಲ್ಲಿ ಗೋಡೆಯ ಮೇಲೆ ಒಂದು ದೊಡ್ಡ ಕನ್ನಡಿಯು ಹಾಕಲ್ಪಟ್ಟಿತ್ತು. ಅದರ ಮೇಲೆ ಒಂದು ಪರದೆಯು ಯಾವಾಗಲೂ ಇದ್ದೇ ಇರುತ್ತಿತ್ತು. ಇಂದು ಆ ಪರದೆಯು ಕನ್ನಡಿಯಿಂದ ದೂರವಾಗಿತ್ತು. ವಕೀಲಸಾಹೇಬರು ಕೊಠಡಿಯಲ್ಲಿ ಕಾಲಿಟ್ಟೊಡನೆಯೇ ಕನ್ನಡಿಯ ಕಡೆಗೆ ಅವರ ದೃಷ್ಟಿ ಬಿತ್ತು. ತಮ್ಮ ರೂಪವು ಅದರಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿತವಾಯಿತು. ಅದನ್ನು ನೋಡಿ ಅವರ ಹೃದಯವು ನೊಂದಿತು. ದಿನದ ಪರಿಶ್ರಮದಿಂದ ಮುಖದ ಕಾಂತಿಯು ಮಲಿನವಾಗಿತ್ತು; ಪೌಷ್ಟಿಕ ಪದಾರ್ಥಗಳನ್ನು ಸಾಕಷ್ಟು ತಿಂದಿದ್ದರೂ ಮುಖದ ಮುದುರು ಮಾಯವಾಗಿರಲಿಲ್ಲ. ಬಲವಾಗಿ ಬಿಗಿದು ಕಟ್ಟಿದ್ದರೂ ಬೊಜ್ಜು ಹೊಟ್ಟೆಯು ಮಾತ್ರ ಎದ್ದು ಕಾಣುತ್ತಲೇ ಇತ್ತು. ಕನ್ನಡಿಯ ಮುಂದೆ ನಿರ್ಮಲೆಯೂ ಬೇರೊಂದು ಕಡೆಗೆ ನೋಡುತ್ತಾ ನಿಂತಿದ್ದಳು ಎರಡು ರೂಪಗಳಲ್ಲೂ ಎಷ್ಟು ಅಂತರ? ಒಂದು ರತ್ನ ಜಟಿತ ವಿಶಾಲ ಭವನ! ಮತ್ತೊಂದು ಮುರುಕು ಪಾಳು ಗುಡಿಸಲು! ಅವರು ಕನ್ನಡಿಯ ಮುಂದೆ ನಿಲ್ಲಲಾರದೆ ಹೋದರು. ತಮ್ಮ ಈ ಹೀನ ಅವಸ್ಥೆಯನ್ನು ನೋಡಿ ತಮಗೇ ಅಸಹ್ಯವೆನಿಸಿತು. ಕನ್ನಡಿಯಿಂದ ದೂರ ಸರಿದು, ತಮ್ಮನ್ನು ತಾವೇ ತಿರಸ್ಕರಿಸಿಕೊಂಡರು. ಅಂದಬಳಿಕ ಈ ಸುಂದರ ಯುವತಿಯು ಅವರನ್ನು ತಿರಸ್ಕರಿಸುವುದರಲ್ಲಿ ಅಚ್ಚರಿಯೇನು? ನಿರ್ಮಲೆಯ ಕಡೆಗೆ ದಿಟ್ಟಿಸುವ ಸಾಹಸ ಸಹ ಅವರಿಗಾಗಲಿಲ್ಲ. ಅವಳ ಅನುಪಮ ಸೌಂದರ್ಯವು ಅವರ ಎದೆ-ಶೂಲವಾಯಿತು!

ನಿರ್ಮಲೆಯು ನುಡಿದಳು—ಇಂದು ಇಷ್ಟೊಂದು ಹೊತ್ತೇಕೆ? ನಿಮ್ಮ ಹಾದಿ ಕಾದು ಕಾದು ಕಣ್ಣುಗಳೆಲ್ಲಾ ಕೆಂಪಾಗಿ ಹೋದವು!

ತೋತಾರಾಮರು ಕಿಟಕಿಯ ಕಡೆಗೆ ನೋಡುತ್ತ ಉತ್ತರವಿತ್ತರು—ಮೊಕದ್ದಮೆಗಳು ಬಹಳವಾದುದರಿಂದ ಉಸಿರಾಡಿಸಲು ಸಹ ಬಿಡುವಿಲ್ಲ! ಇನ್ನೂ ಒಂದು ಮೊಕದ್ದಮೆ ಬಾಕಿ ಉಳಿದಿತ್ತು; ತಲೆನೋವಿನ ನೆಪ ಹೇಳಿ ಎದ್ದು ಬಂದುಬಿಟ್ಟೆ.

ನಿರ್ಮಲೆ—ಅಷ್ಟು ಮೊಕದ್ದಮೆಗಳನ್ನು ಏಕೆ ತೆಗೆದುಕೊಳ್ಳಬೇಕು ? ಆರಾಮದಿಂದ ಆಗುವಷ್ಟು ಕೆಲಸವನ್ನು ಮಾತ್ರ ಮಾಡಬೇಕು. ಪ್ರಾಣ ಬಿಟ್ಟುಕೊಂಡಾದರೂ ಕೆಲಸ ಮಾಡಬೇಕೆ ? ಹೆಚ್ಚು ಮೊಕದ್ದಮೆಗಳನ್ನು ತೆಗೆದುಕೊಳ್ಳಬೇಡಿ. ನನಗೆ ಹಣದಾಸೆಯಿಲ್ಲ; ನೀವು ಆರಾಮದಿಂದಿದ್ದರೆ ಬೇಕಾದಷ್ಟು ಹಣ ದೊರಕುವುದು.

ತೋತಾರಾಮ—ಕೈಗೆ ಬಂದ ಲಕ್ಷ್ಮಿಯನ್ನು ಜೇಡವೆನ್ನುವುದು ಹೇಗೆ ?

ನಿರ್ಮಲೆ—ರಕ್ತ ಮಾಂಸಗಳನ್ನು ಸವೆಸಿ ಲಕ್ಷ್ಮಿಯು ಬರುವುದಾದರೆ, ಅವಳು ಬರದಿರುವುದೇ ಮೇಲು ! ನಾನು ಧನಲೋಭಿಯಲ್ಲ !

ಈ ಹೊತ್ತಿಗೆ ಸರಿಯಾಗಿ ಮಾನಸರಾಮನು ಶಾಲೆಯಿಂದ ಹಿಂತಿರುಗಿದನು. ಬಿಸಿಲಿನಲ್ಲಿ ನಡೆದು ಬಂದದ್ದರಿಂದ ಮುಖವು ಬೆವೆತಿತ್ತು. ಬಿಳುಪಾದ ವದನವು ಕೆಂಪಾಗಿತ್ತು. ಕಣ್ಣುಗಳಿಂದ ಒಂದು ಬಗೆಯ ಜ್ಯೋತಿಯು ಹೊರಸೂಸುತ್ತಿತ್ತು. ಬಾಗಿಲಲ್ಲಿ ಬಂದು ನಿಂತು ಕೇಳಿದನು—ಅಮ್ಮಾ, ತಿನ್ನಲು ಏನಾದರೂ ತಿಂಡಿ ಕೊಡಿ ! ನಾನು ಆಟವಾಡಲು ಹೋಗಬೇಕು.

ನಿರ್ಮಲೆಯು ಒಳಕ್ಕೆ ಹೋಗಿ ಒಂದು ಲೋಟ ನೀರನ್ನೂ ಒಂದು ತಟ್ಟೆಯಲ್ಲಿ ಸ್ವಲ್ಪ ಮಿಠಾಯಿಯನ್ನೂ ತಂದು ಮಾನಸರಾಮನಿಗೆ ಕೊಟ್ಟಳು. ಅವನು ಅದನ್ನು ತಿಂದು ಹೊರಡಲನುವಾದನು. ' ಎಷ್ಟು ಹೊತ್ತಿಗೆ ಬರುವೆ? ' ಎಂದು ನಿರ್ಮಲೆಯು ಕೇಳಿದಳು.

ಮಾನಸರಾಮ—ಇಂಗ್ಲೀಷರ ಸಂಗಡ ಈ ದಿನ ಹಾಕೀ ಮ್ಯಾಚ್ ಇದೆ. ಬ್ಯಾರಕ್ ಇಲ್ಲಿಂದ ಬಹಳ ದೂರ. ಎಷ್ಟು ಹೊತ್ತಿಗೆ ಹಿಂತಿರುಗುವೆನೋ ಹೇಳಲಾಗುವುದಿಲ್ಲ !

ನಿರ್ಮಲೆ—ಆದಷ್ಟೂ ಬೇಗ ಬಂದುಬಿಡು. ಊಟವೆಲ್ಲಾ ಆರಿಹೋಗುವುದು; ನಂತರ ನನಗೆ ಹಸಿವೆ ಇಲ್ಲವೆನ್ನುವೆ !

ಮಾನಸರಾಮನು ನಿರ್ಮಲೆಯನ್ನು ಸರಳ ಸ್ನೇಹಭಾವದಿಂದ ದಿಟ್ಟಿಸಿ ನುಡಿದನು—ಹೊತ್ತಾಗಿ ಹೋದರೆ, ನಾನು ಅಲ್ಲೇ ಊಟ ಮಾಡಿರುವೆನೆಂದು ತಿಳಿದುಕೊಳ್ಳಿ; ನನಗಾಗಿ ಕಾಯಬೇಡಿ !

ಅವನು ಹೊರಟುಹೋದ ನಂತರ ನಿರ್ಮಲೆಯು ಪತಿಯೊಡನೆ

ಹೇಳಿದಳು—ಮೊದಮೊದಲು ಮನೆಗೇ ಬರುತ್ತಿರಲಿಲ್ಲ. ನನ್ನೊಡನೆ ಮಾತ ನಾಡಲು ನಾಚುತ್ತಿದ್ದನು. ಏನಾದರೂ ಬೇಕಾದರೆ ಹೊರಗಿನಿಂದಲೇ ಹೇಳಿ ಕಳುಹಿಸುತ್ತಿದ್ದನು. ನಾನು ಕರೆದು ಹೇಳಿದಂದಿನಿಂದ ಬರತೊಡಗಿರುವನು.

ತೋತಾರಾಮರು ಸ್ವಲ್ಪ ಸಿಟ್ಟುಗೊಂಡು ನುಡಿದರು—ಇವನು ಊಟ ತಿಂಡಿಯನ್ನು ಕೇಳಲು ನಿನ್ನ ಬಳಿಗೇಕೆ ಬರುವನು? ಅಕ್ಕನನ್ನೇಕೆ ಕೇಳುವು ದಿಲ್ಲ?

ನಿರ್ಮಲೆಯು ಈ ಮಾತನ್ನು ಪ್ರಶಂಸೆ ಪಡೆಯುವ ಆಸೆಯಿಂದ ಹೇಳಿ ದಳು. ನಿಮ್ಮ ಮಕ್ಕಳನ್ನು ನಾನೆಷ್ಟು ಪ್ರೀತಿಸುವೆನೆಂದು ತೋರಿಸಿಕೊಳ್ಳ ಬಯಸಿದಳು. ಅವಳು ಮಕ್ಕಳನ್ನು ನಿಜವಾಗಿಯೂ ಪ್ರೀತಿಸುತ್ತಿದ್ದಳು; ಕಪಟ ಪ್ರೀತಿಯಾಗಿರಲಿಲ್ಲ! ಅವಳ ಸ್ವಭಾವದಲ್ಲಿ ಇನ್ನೂ ಬಾಲಭಾವವೇ ಪ್ರಧಾನವಾಗಿತ್ತು. ಬಾಲ್ಯತನದ ಅದೇ ಉತ್ಸುಕತೆ, ಅದೇ ಚಂಚಲತೆ, ಅದೇ ವಿನೋದಪ್ರಿಯತೆ ಇನ್ನೂ ಇತ್ತು. ಬಾಲಕರ ಸಂಗಡ ಆ ಬಾಲವೃತ್ತಿಗಳು ಪ್ರಸ್ಫುಟಿತವಾಗುತ್ತಿದ್ದವು. ಪತ್ನೀಸುಲಭ ಈರ್ಷೆಯು ಇದುವರೆಗೂ ಅವಳ ಹೃದಯದಲ್ಲಿ ಉದಯವಾಗಿರಲಿಲ್ಲ. ಪತಿಯು ಪ್ರಸನ್ನನಾಗುವ ಬದಲು ಸಿಟ್ಟು ಗೊಂಡುದನ್ನು ಕಂಡು, ನುಡಿದಳು—ಅವರನ್ನೇಕೆ ಕೇಳುವುದಿಲ್ಲವೆಂದು ನನ ಗೇನು ಗೊತ್ತು? ನನ್ನ ಬಳಿಗೆ ಬಂದರೆ, ನಾನು ದೂಡುವುದಿಲ್ಲ. ಹಾಗೆ ಮಾಡಿ ದರೆ ಹುಡುಗರನ್ನು ಕಂಡರೆ ಇವಳಿಗೆ ಹೊಟ್ಟೇಕಿಚ್ಚೆಂದು ಹೇಳುವರು.

ಮುನ್ಷಿಯವರು ಈ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಬಂದಿದ್ದ ಕಕ್ಷಿಗಾರರೊಡನೆ ಕೂಡ ಮಾತನಾಡದೆ, ನೆಟ್ಟಗೆ ಮಾನಸರಾಮನ ಕೊಠ ಡಿಯನ್ನು ಪ್ರವೇಶಿಸಿ, ಅವನನ್ನು ಪರೀಕ್ಷಿಸತೊಡಗಿದರು. ಮಾನಸರಾಮನ ಅಥವಾ ತಮ್ಮ ಇತರ ಮಕ್ಕಳ ಶಿಕ್ಷಣೋನ್ನತಿಯ ವಿಷಯದಲ್ಲಿ ಇಷ್ಟು ಆಸಕ್ತಿ ತೋರಿದುದು ಇಂದೇ ಅವರ ಜೀವನದಲ್ಲಿ ಮೊದಲು! ತಮ್ಮ ಕೆಲಸದಿಂದ ಅವರಿಗೆ ಬಿಡುವೇ ಸಿಗುತ್ತಿರಲಿಲ್ಲ. ಅವರು ಆ ಪುಸ್ತಕಗಳನ್ನೆಲ್ಲಾ ಓದಿ ಸುಮಾರು ನಲವತ್ತು ವರ್ಷಗಳಾಗಿತ್ತು. ಅಂದಿನಿಂದ ಅವುಗಳನ್ನು ಕಣ್ಣೆತ್ತಿ ಸಹ ನೋಡಿರಲಿಲ್ಲ. ಕಾನೂನಿಗೆ ಸಂಬಂಧಿಸಿದ್ದ ಪುಸ್ತಕ ಮತ್ತು ಪತ್ರಿಕೆಗಳ ಹೊರತು ಮತ್ತೇನನ್ನೂ ಓದುತ್ತಿರಲಿಲ್ಲ; ಅಲ್ಲದೆ ಸಮಯವೂ ಸಿಗುತ್ತಿರಲಿಲ್ಲ. ಮಾನಸರಾಮನು ಬುದ್ಧಿಶಾಲಿ ಹಾಗು ಪರಿಶ್ರಮಿಯಾಗಿದ್ದನು ಆಟದಲ್ಲಿ

ಟೀಮಿನ ಕ್ಯಾಪ್ಟನ್ ಆಗಿದ್ದರೂ ವರ್ಗದಲ್ಲಿ ಪ್ರಥಮಸ್ಥಾನ ಪಡೆದಿದ್ದ. ಒಮ್ಮೆ ಓದಿದ ಪಾಠವು ಅವನ ಮನದಿಂದ ಮರೆಯುತ್ತಿರಲಿಲ್ಲ. ಸಿಟ್ಟಿನ ಭರದಲ್ಲಿ ಮುನ್ಷಿಯವರು ಹುಡುಗನ ಚಾತುರ್ಯವನ್ನು ಪರೀಕ್ಷಿಸುವಂತಹ ಯಾವ ಮಾರ್ಮಿಕ ಪ್ರಶ್ನೆಯನ್ನೂ ಹಾಕಲಿಲ್ಲ. ಅವರು ಕೇಳಿದ ಪ್ರಶ್ನೆಗಳಿಗೆಲ್ಲಾ ಮಾನಸರಾಮನು ಚಟಪಟನೇ ಉತ್ತರವಿತ್ತನು. ತಾನು ಪ್ರಹರಿಸಿದ ಪ್ರಹಾರ ಗಳು ವ್ಯರ್ಥವಾದಾಗ ಸಿಪಾಯಿಯು ಸಿಟ್ಟುಗೊಂಡು ಮೇಲಿಂದ ಮೇಲೆ ಪ್ರಹರಿಸುವಂತೆ ವಕೀಲಸಾಹೇಬರು ಮಾನಸರಾಮನನ್ನು ಮೇಲಿಂದ ಮೇಲೆ ಪ್ರಶ್ನಿಸಿದರು. ಅವನು ಉತ್ತರ ಕೊಡಲಾಗದಂತಹ ಯಾವುದಾದರೂ ಪ್ರಶ್ನೆ ಹಾಕಬೇಕೆಂದು ಅವರು ಪ್ರಯತ್ನಿಸಿದರು. ಆದರೆ ಅರ್ಧ ಶತಾಬ್ಧಿಯ ಹಿಂದೆ ಮರೆತ ಶಿಕ್ಷಣದ ಆಧಾರದ ಮೇಲೆ ಅವರಿಗಿದು ಸಾಧ್ಯವಾಗಲಿಲ್ಲ. ಕಡೆಗೆ ತಮ್ಮ ಕೋಪವನ್ನಿಳಿಸಿಕೊಳ್ಳುವ ಯಾವ ನೆಪವೂ ದೊರಕದೆ ಹೇಳಿದರು—ಇತ್ತೀ ಚೆಗೆ ನೀನು ಸರ್ವದಾ ಅಲ್ಲಿ ಇಲ್ಲಿ ಅಲೆಯುತ್ತಿರುವೆ. ನಿನ್ನ ಬುದ್ಧಿಗಿಂತ ನಡತೆ ಯನ್ನು ನಾನು ಹೆಚ್ಚೆಂದು ಗಣಿಸುವೆನು. ನೀನು ಹೀಗೆ ಸುಮ್ಮನೆ ಅಲೆದಾಡು ವುದು ನನಗೆ ಸರಿದೋರುವುದಿಲ್ಲ!

ಮಾನಸರಾಮನು ನಿರ್ಭೀತತೆಯಿಂದ ನುಡಿದನು—ಸಂಜೆಯ ಹೊತ್ತು ಒಂದು ಗಂಟೆಕಾಲ ಆಟವಾಡಲು ಮಾತ್ರ ಹೋಗುವೆನು; ಅಷ್ಟಲ್ಲದೆ ಮತ್ತೆಲ್ಲೂ ಹೋಗುವುದಿಲ್ಲ. ನೀವು ಅಮ್ಮನನ್ನಾಗಲೀ ಅತ್ತೆಯನ್ನಾಗಲೀ ಕೇಳಿ ಕೊಳ್ಳಿ! ವ್ಯರ್ಥವಾಗಿ ಅಲೆದಾಡುವುದು ನನಗೂ ಇಷ್ಟವಿಲ್ಲ. ಶಾಲೆಯ ಮುಖ್ಯಾಧ್ಯಾಪಕರು ಬಲಾತ್ಕಾರ ಮಾಡಿದ್ದರಿಂದ ಆಟವಾಡಲು ಹೋಗು ವೆನು. ಇದು ನಿಮಗೆ ಇಷ್ಟವಿಲ್ಲದಿದ್ದರೆ ನಾಳೆಯಿಂದ ಹೋಗುವುದಿಲ್ಲ.

ಮಾತಿನ ಗತಿಯೇ ಬದಲಾಯಿಸಿದುದನ್ನು ಕಂಡು ಮುನ್ಷಿಯವರು ತೀವ್ರಸ್ವರದಿಂದ ನುಡಿದರು—ಆಟವಾಡಲು ಹೊರತು ಬೇರೆಲ್ಲೂ ಹೋಗುವು ದಿಲ್ಲವೆಂದು ನನಗೆ ಹೇಗೆ ನಂಬಿಕೆಯುಂಟಾಗಬೇಕು? ನನಗೆ ಆಗಾಗ ದೂರು ಗಳು ಬರುತ್ತಿರುವವು.

ಮಾನಸರಾಮನು ಉತ್ತೇಜಿತನಾಗಿ ನುಡಿದನು—ಯಾವ ಮಹಾ ಶಯರು ನಿಮ್ಮೊಡನೆ ದೂರು ಹೇಳಿದರೆಂದು ನಾನೂ ಸ್ವಲ್ಪ ಕೇಳುವೆನು.

ತೋತಾರಾಮ—ಯಾರಾದರೇನು? ಆ ವಿಷಯ ನಿನಗೆ ಸಂಬಂಧಿಸಿದುದಲ್ಲ. ನಾನು ಸುಳ್ಳು ಆಕ್ಷೇಪಣೆ ಮಾಡುವುದಿಲ್ಲವೆಂದು ಮಾತ್ರ ಚೆನ್ನಾಗಿ ತಿಳಿದುಕೋ!

ಮಾನಸರಾಮ—ನಾನು ಅಲ್ಲಿ ಇಲ್ಲಿ ಅಲೆಯುತ್ತಿರುವೆನೆಂದು ಯಾರಾದರೂ ನನ್ನ ಎದುರಿಗೆ ಬಂದು ಹೇಳಲಿ; ಆಗ ನಾನು ಪುನಃ ನಿಮಗೆ ಮುಖ ತೋರಿಸುವುದಿಲ್ಲ!

ತೋತಾರಾಮ—ನಿನ್ನ ಮುಂದೆ ನಿನ್ನನ್ನು ದೂಷಿಸಿ, ನಿನ್ನ ವೈರತ್ವವನ್ನು ಕಟ್ಟಿಕೊಳ್ಳಲು ಯಾರು ತಾನೇ ಅಪೇಕ್ಷಿಸುವರು? ಒಬ್ಬರಲ್ಲ; ಅನೇಕ ಜನರು ನನಗೆ ಈ ಪರಿಯ ದೂರನ್ನು ಹೇಳುತ್ತಿರುವರು. ನನ್ನ ಮಿತ್ರರ ಮಾತನ್ನು ನಾನು ಹೇಗೆ ನಂಬದಿರಲಿ? ನೀನು ಶಾಲೆಯ ಹಾಸ್ಟಲಿನಲ್ಲೇ ಇರಬೇಕೆಂದು ನನ್ನ ಇಚ್ಛೆ!

ಮಾನಸರಾಮನು ಮುಖವನ್ನು ತಗ್ಗಿಸಿ ಹೇಳಿದನು—ನನಗೆ ಅಲ್ಲಿರಲೇನೂ ಅಡ್ಡಿಯಿಲ್ಲ. ನೀವು ಎಂದಿನಿಂದ ಹೇಳುವಿರೋ ಅಂದಿನಿಂದಲೇ ಹೋಗಿರುವೆನು.

ತೋತಾರಾಮ—ಮುಖವನ್ನೇಕೆ ತಗ್ಗಿಸಿಬಿಟ್ಟೆ? ಅಲ್ಲಿರುವುದು ನಿನಗೆ ಇಷ್ಟವಿಲ್ಲವೇ? ಅಥವಾ ಅಲ್ಲಿ ಹೋಗಿರಲು ನಿನಗೆ ಅಂತಹ ಹೆದರಿಕೆಯಾದರೂ ಏನು? ನಿನಗಾವ ಕಷ್ಟ ಅಲ್ಲಿ?

ಮಾನಸರಾಮನಿಗೆ ಹಾಸ್ಟಲಿನಲ್ಲಿರಲು ಅಷ್ಟು ಇಷ್ಟವಿರಲಿಲ್ಲ. ಆದರೆ ಮುನ್ಷಿಯವರು ಈ ಮಾತನ್ನು ತಿಳಿದು, ಅದರ ಕಾರಣವನ್ನು ಕೇಳಿದ್ದರಿಂದ ಅವನಿಗೆ ಸಂಕೋಚವಾಯಿತು. ತನ್ನ ಅಪ್ರಸನ್ನತೆಯನ್ನು ಮರೆಸಿಕೊಳ್ಳುತ್ತ ನುಡಿದನು—ಮುಖವನ್ನೇಕೆ ತಗ್ಗಿಸಲಿ? ನನಗೆ ಮನೆಯು ಹೇಗೋ ಹಾಸ್ಟಲೂ ಹಾಗೆಯೇ! ಅಲ್ಲಿ ನನಗಾವ ಕಷ್ಟವೂ ಇಲ್ಲ. ಒಂದು ವೇಳೆ ಇದ್ದರೂ ಸಹಿಸಿಕೊಳ್ಳುವೆನು. ನಾಳೆಯಿಂದಲೇ ಹೊರಟುಹೋಗುವೆನು; ಆದರೆ, ಅಲ್ಲಿ ಸ್ಥಳ ಖಾಲಿ ಇಲ್ಲದಿದ್ದರೆ ಮಾತ್ರ ಹೇಳಲಾರೆ!

ಮುನ್ಷಿಯವರು ಎಷ್ಟೇ ಆಗಲಿ ವಕೀಲರಲ್ಲವೇ? ತಾನು ಹಾಸ್ಟಲಿಗೆ ಹೋಗಬಾರದು; ತನ್ನ ಮೇಲೆ ಯಾವ ತಪ್ಪೂ ಇರಬಾರದು; ಅಂತಹ ಉಪಾಯವನ್ನು ಹುಡುಗನು ಹುಡುಕುತ್ತಿರುವನೆಂದು ಅವರು ಅರಿತುಕೊಂಡರು.

'ಎಲ್ಲರಿಗೂ ಸ್ಥಳ ಖಾಲಿ ಇರುವಾಗ ನಿನಗೊಬ್ಬನಿಗೆ ಮಾತ್ರ ಇಲ್ಲವೇ?' ಎಂದರು.

ಮಾನಸರಾಮ—ಅನೇಕ ಹುಡುಗರಿಗೆ ಸ್ಥಳವೇ ಸಿಕ್ಕದೆ ಬಾಡಿಗೆಯ ಕೊಠಡಿಯಲ್ಲಿ ಕಾಲ ತಳ್ಳುತ್ತಿರುವರು. ಈಗತಾನೇ ಒಬ್ಬ ಹುಡುಗನ ಸ್ಥಳ ಖಾಲಿಯಾಯಿತು. ಅದಕ್ಕೆ ಸುಮಾರು ಐವತ್ತು ಅರ್ಜಿಗಳು ಬಂದಿದ್ದವು!

ವಕೀಲಸಾಹೇಬರು ಇನ್ನು ಹೆಚ್ಚು ತರ್ಕ ಮಾಡುವುದು ತರವಲ್ಲವೆಂದು ತಿಳಿದರು. ನಾಳೆಯೇ ಹೊರಡಲು ಸಿದ್ಧನಾಗಿರೆಂದು ಮಾನಸರಾಮನಿಗೆ ಆಜ್ಞಾಪಿಸಿ, ತಿರುಗಾಡಿಕೊಂಡು ಬರಲು ಹೊರಟರು. ಈಗ ಕೆಲವು ದಿನಗಳಿಂದ ಸಾಯಂಕಾಲದ ಸಮಯ ಸ್ವಲ್ಪ ಸುತ್ತಾಡಿ ಬರುತ್ತಿದ್ದರು. ದೀರ್ಘ ಜೀವನಕ್ಕೆ ಇದಕ್ಕಿಂತ ಉತ್ತಮ ಉಪಾಯ ಬೇರಾವುದೂ ಇಲ್ಲವೆಂದು ಯಾರೋ ಅನುಭವಿಯು ಅವರಿಗೆ ತಿಳಿಸಿದ್ದರು. ವಕೀಲಸಾಹೇಬರು ಹೊರಟು ಹೋದ ನಂತರ ಮಾನಸರಾಮನು ರುಕ್ಮಿಣಿಯ ಹತ್ತಿರ ಹೋಗಿ ಹೇಳಿದನು—ಅತ್ತೆ! ಬಾಬೂಜಿಯವರು ನನ್ನನ್ನು ನಾಳೆಯಿಂದ ಶಾಲೆಯ ಹಾಸ್ಟಲಿನಲ್ಲೇ ಇರಬೇಕೆಂದು ಹೇಳಿರುವರು.

ರುಕ್ಮಿಣಿಯು ವಿಸ್ಮಿತಳಾಗಿ ಕೇಳಿದಳು—ಏಕೆ, ಮಾನಸರಾಮ?

ಮಾನಸರಾಮ—ನನಗೇನು ಗೊತ್ತು? ನಾನು ವ್ಯರ್ಥವಾಗಿ ಅಲ್ಲಿ ಇಲ್ಲಿ ಅಲೆಯುವೆನೆಂದು ಅವರು ಹೇಳಿದರು!

ರುಕ್ಮಿಣಿ—'ನಾನು ಎಲ್ಲೂ ಅಲೆಯುವುದಿಲ್ಲವೆಂದು' ನೀನು ಹೇಳಲಿಲ್ಲವೇ?

ಮಾನಸರಾಮ—ಹೇಳಿದೆನು; ಆದರೆ ಅವರು ಒಪ್ಪಿದ್ದರಲ್ಲವೇ?

ರುಕ್ಮಿಣಿ—ಇದೆಲ್ಲವೂ ನಿಮ್ಮ ಹೊಸ ಅಮ್ಮನ ಕೃಪೆ ಇರಬಹುದು. ಅಲ್ಲದೆ ಮತ್ತೇನು?

ಮಾನಸರಾಮ—ಇಲ್ಲ, ಅತ್ತೆ! ಅವರ ಮೇಲೆ ನನಗೆ ಸಂದೇಹವಿಲ್ಲ. ಮರೆತು ಸಹ ಅವರು ಅಂತಹ ಮಾತನ್ನಾಡುವುದಿಲ್ಲ. ಏನಾದರೊಂದು ಪದಾರ್ಥ ಕೇಳಲು ಹೋದರೆ, ತಕ್ಷಣ ಎದ್ದು ಕೊಡುವರು!

ರುಕ್ಮಿಣಿ—ನೀನೇನು ಬಲ್ಲೆ? ಅವಳೇ ಹೊತ್ತಿಸಿರುವ ಬೆಂಕಿ ಇದು! ನಾನೇ ಹೋಗಿ ಕೇಳುವೆನು ನೋಡು!

ರುಕ್ಮಿಣಿಯು ಸಿಡಿಗುಟ್ಟುತ್ತ ನಿರ್ಮಲೆಯ ಬಳಿ ಬಂದಳು. ಅವಳನ್ನು ಆಕ್ಷೇಪಿಸಿ ಅನ್ನಲು, ಹಾಗೂ ಕಟುವಾಕ್ಯಗಳನ್ನಾಡಿ ಮನನೋಯಿಸಲು ಸಿಕ್ಕ ಸುಸಮಯವನ್ನು ರುಕ್ಮಿಣಿ ಎಂದೂ ಕಳೆದುಕೊಳ್ಳುತ್ತಿರಲಿಲ್ಲ. ನಿರ್ಮಲೆಯು ಅವರನ್ನು ಆದರಿಸುತ್ತಿದ್ದಳು. ಅವರು ಹೇಳಿದ ಮಾತಿಗೆ ಉತ್ತರವೀಯುತ್ತಿರಲಿಲ್ಲ. 'ತನಗೆ ತಿಳುವಳಿಕೆಯ ಮಾತನ್ನು ಹೇಳಲಿ; ತಪ್ಪಿದಲ್ಲಿ ತಿದ್ದಲಿ!' ಎಂಬುದು ನಿರ್ಮಲೆಯ ಆಸೆಯಾಗಿತ್ತು. ಆದರೆ ರುಕ್ಮಿಣಿಯು ಅವಳನ್ನು ಕಂಡು ಕರುಬುತ್ತಲೇ ಇದ್ದಳು!

ನಿರ್ಮಲೆಯು ಮಂಚದಿಂದೆದ್ದು ನುಡಿದಳು—ಬನ್ನಿ ಅಕ್ಕ, ಕುಳಿತು ಕೊಳ್ಳಿ!

ರುಕ್ಮಿಣಿಯು ನಿಂತುಕೊಂಡೇ ಹೇಳಿದಳು -ಅದಿರಲಿ! ಎಲ್ಲರನ್ನೂ ಮನೆಯಿಂದ ಹೊರಗಟ್ಟಿ, ನೀನೊಬ್ಬಳೇ ಇರಬೇಕೆಂದು ಬಯಸಿರುವೆಯಾ?

ನಿರ್ಮಲೆಯು ಕಾತರ ಭಾವದಿಂದ ನುಡಿದಳು—ಏಕೆ, ಏನಾಯಿತಕ್ಕಾ? ನಾನು ಯಾರಿಗೂ ಏನೂ ಹೇಳಲಿಲ್ಲ!

ರುಕ್ಮಿಣಿ—ಮಾನಸರಾಮನನ್ನು ಮನೆಯಿಂದ ಹೊರಗಟ್ಟುತ್ತಿರುವೆ! ಯಾರೊಡನೆಯೂ ಏನೂ ಹೇಳಲಿಲ್ಲವೆಂದು ನುಡಿಯುತ್ತಿರುವೆಯಾ? ನಿನಗಿಷ್ಟೂ ಸಹಿಸಲಾಗುವುದಿಲ್ಲವೇ?

ನಿರ್ಮಲೆ—ನಿಮ್ಮ ಚರಣಗಳನ್ನು ಸ್ಪರ್ಶಿಸಿ ಹೇಳುವೆನು, ಅಕ್ಕಾ! ನನಗೇನೂ ಗೊತ್ತಿಲ್ಲ. ಅವನ ವಿಷಯದಲ್ಲಿ ನಾನೇನಾದರೂ ಮಾತನಾಡಿದ್ದರೆ ನನ್ನ ಕಣ್ಣುಗಳು ಇಂಗಿಹೋಗಲಿ!

ರುಕ್ಮಿಣಿ—ವ್ಯರ್ಥವಾಗಿ ಪ್ರತಿಜ್ಞೆ ಏಕೆ ಮಾಡುವೆ? ತೋತಾರಾಮನು ಇದುವರೆಗೆ ಹುಡುಗರ ಸಂಗಡ ಏನೂ ಮಾತನಾಡುತ್ತಿರಲಿಲ್ಲ! ಮಾನಸ ರಾಮನು ಒಂದು ವಾರ ತನ್ನ ಅಜ್ಜಿಯ ಮನೆಗೆ ಹೋಗಿದ್ದಾಗ, ಗಾಬರಿಗೊಂಡು ತಾನೇ ಹೋಗಿ ಕರೆದುಕೊಂಡು ಬಂದನು. ಈಗ ಅದೇ ಮಾನಸ ರಾಮನನ್ನು ಮನೆಯಿಂದ ಹೊರಗಟ್ಟಿ, ಹಾಸ್ಟಲಿನಲ್ಲಿ ಇರಿಸುತ್ತಿರುವನು! ಹುಡುಗನಿಗೇನಾದರೂ ಸ್ವಲ್ಪ ಹೆಚ್ಚುಕಡಿಮೆಯಾದರೆ ನಿನ್ನ ತಲೆಗೆ ಬರುವುದು ಶೋಕೆ! ಅವನೆಂದೂ ಹೊರಗಡೆ ಇದ್ದಿಲ್ಲ. ಅವನಿಗೆ ಹೊತ್ತುಹೊತ್ತಿನ ಊಟ-ಉಡುಪುಗಳ ಧ್ಯಾನ ಸಹ ಇರುವುದಿಲ್ಲ." ಎಲ್ಲಿ ಕುಳಿತರೆ ಅಲ್ಲೇ ಮಲಗಿ

ಬಿಡುವನು. ಪ್ರಾಪ್ತವಯಸ್ಕನಾಗಿದ್ದರೂ ಅವನ ಸ್ವಭಾವವು ಮಾತ್ರ ಇನ್ನೂ ಬಾಲಕರಂತೆಯೇ !ಹಾಸ್ಟಲಿನಲ್ಲಿ ಅವನು ಖಂಡಿತವಾಗಿಯೂ ಜೀವಿಸಿರಲಾರ. ಅವನು ಊಟ ಮಾಡಿದನೇ ಇಲ್ಲವೇ? ಬಟ್ಟೆ ಬದಲಾಯಿಸಿದನೇ ಮಲಗಿದನೇ ಎಂಬ ಚಿಂತೆ ಅಲ್ಲಿ ಯಾರಿಗೆ ? ಮನೆಯಲ್ಲೇ ಕೇಳುವವರಿಲ್ಲದ ಮೇಲೆ ಹೊರಗಿನವರಾರು ಕೇಳುವರು ? ನಿನ್ನನ್ನು ಈಗಲೇ ಎಚ್ಚರಿಸಿರುವೆನು, ಜೋಕೆ ! ಹೀಗೆಂದು ಹೇಳಿ ರುಕ್ಮಿಣಿಯು ಅಲ್ಲಿಂದ ಹೊರಟಳು.

ವಕೀಲಸಾಹೇಬರು ಸುತ್ತಾಡಿಕೊಂಡು ಮನೆಗೆ ಹಿಂತಿರುಗಿದೊಡನೆಯೇ ನಿರ್ಮಲೆಯು ಈ ವಿಷಯವನ್ನು ಪ್ರಸ್ತಾಪಿಸಿದಳು. ಇತ್ತೀಚಿಗೆ ಅವಳು ಮಾನಸರಾಮನ ಹತ್ತಿರ ಸ್ವಲ್ಪ ಇಂಗ್ಲೀಷ್ ಕಲಿಯುತ್ತಿದ್ದಳು. ಅವನು ಹೊರಟುಹೋದರೆ ನಂತರ ಹೇಳಿಕೊಡುವವರಾರು ? ವಕೀಲಸಾಹೇಬರಿಗೆ ಇನ್ನೂ ಈ ವಿಷಯ ತಿಳಿದಿರಲಿಲ್ಲ. ಸುಮಾರಾಗಿ ಕಲಿತನಂತರ ಒಮ್ಮೆ ವಕೀಲ ಸಾಹೇಬರ ಸಂಗಡ ಇಂಗ್ಲೀಷಿನಲ್ಲಿ ಮಾತನಾಡಿ ಅವರನ್ನು ಚಕಿತರನ್ನಾಗಿ ಮಾಡಬೇಕೆಂದು ಅವಳು ಯೋಚಿಸಿದ್ದಳು. ತನ್ನ ತಮ್ಮಂದಿರಿಂದ ಹಿಂದೆಯೇ ಸ್ವಲ್ಪ ಕಲಿತಿದ್ದಳು. ಈಗ ನಿಯಮಿತ ರೂಪದಿಂದ ಕಲಿಯುತ್ತಿದ್ದಳು.

ನಿರ್ಮಲೆಯ ಪ್ರಸ್ತಾಪವನ್ನು ಕೇಳಿ, ವಕೀಲಸಾಹೇಬರ ಎದೆಗೆ ಶೂಲ ಇರಿದಂತಾಯಿತು. ಹುಬ್ಬುಗಂಟಿಕ್ಕಿ ಕೇಳಿದರು—ಯಾವಾಗಿನಿಂದ ನಿನಗೆ ಹೇಳಿಕೊಡುತ್ತಿರುವನು ? ನೀನು ನನಗೆ ಹೇಳಲೇ ಇಲ್ಲವಲ್ಲ ?

ನಿರ್ಮಲೆಯು ಅವರ ಈ ರೂಪವನ್ನು ಕೇವಲ ಒಂದು ಬಾರಿ ಮಾತ್ರ ನೋಡಿದ್ದಳು—ಅದೇ ಅಂದು ಶ್ರೀರಾಮುನನ್ನು ಹೊಡೆದು ಹೊಡೆದು ಜ್ಞಾನ ಹೋಗುವಂತೆ ಮಾಡಿದಾಗ ! ಆ ರೂಪವೇ ಇಂದು ಮತ್ತಷ್ಟು ಭೀಕರವಾಗಿ ಅವಳಿಗೆ ಕಂಡುಬಂದಿತು. ಹೆದರುತ್ತ ಹೇಳಿದಳು—ಅವನ ಓದಿನಲ್ಲಿ ಇದರಿಂದಾವ ತೊಂದರೆಯೂ ಆಗಿಲ್ಲ ಅವನಿಗೆ ಪುರಸೊತ್ತಿದ್ದಾಗ ಸ್ವಲ್ಪ ಸಮಯ ಕಲಿತುಕೊಳ್ಳುವೆನು. ಅವನು ಆಟವಾಡುವುದಕ್ಕೆ ಹೋಗುವ ಮುನ್ನ ಹತ್ತು ನಿಮಿಷಗಳು ಮಾತ್ರ ಹೇಳಿಸಿಕೊಳ್ಳುವೆನು ನನ್ನಿಂದ ಅವನ ಓದಿನಲ್ಲಾವ ಬಾಧಕವೂ ಬರಬಾರದೆಂದು ನನಗೂ ಅಪೇಕ್ಷೆಯಿದೆ !

ವಿಷಯವು ಅಷ್ಟೇನೂ ಮಹತ್ವದ್ದಲ್ಲವಾದರೂ, ಮುನ್ಷಿಯವರು ಹತಾಶರಾಗಿ ಮಂಚದ ಮೇಲೆ ಮಲಗಿಕೊಂಡರು; ಮತ್ತು ತಲೆಯ ಮೇಲೆ

ಕೈಯ್ಯನ್ನಿಟ್ಟು ಚಿಂತಾಮಗ್ನರಾದರು. ವಿಷಯವು ಅವರು ಯೋಚಿಸಿದ್ದ
ಕ್ಕಿಂತಲೂ ಮುಂದುವರಿದಿತ್ತು. ಈ ದುಷ್ಟನನ್ನು ಹೊರಗಿರಿಸುವ ಪ್ರಯತ್ನ
ವನ್ನು ನಾನು ಮೊದಲೇ ಏಕೆ ಮಾಡಲಿಲ್ಲ? ಇತ್ತೀಚೆಗೆ ಈ ರಾಣಿಯು ಇಷ್ಟು
ಸಂತೋಷದಿಂದಿರುವುದರ ರಹಸ್ಯ ಇಂದು ರಟ್ಟಾಯಿತು. ಹಿಂದೆ ಎಂದೂ
ಕೊಠಡಿಯು ಇಷ್ಟು ಅಲಂಕೃತವಾಗಿರಲಿಲ್ಲ. ಈಗ ಒಮ್ಮೆಲೇ ಎಲ್ಲವೂ ಬದ
ಲಾಯಿಸಿಬಿಟ್ಟಿದೆ! ಈಗಲೇ ಹೋಗಿ ಮಾನಸರಾಮನನ್ನು ಕಳುಹಿಸಿಬಿಡಲೇ–
ಎನ್ನುವಷ್ಟು ಕೋಪ ಬಂತು. ಆದರೆ ಪ್ರೌಢ ಬುದ್ಧಿಯು ಸ್ವಲ್ಪ ಸಮಾಧಾನ
ಹೇಳಿತು. ಇವಳು ನನ್ನ ಮನಸಿನ ಭಾವನೆಗಳನ್ನು ತಿಳಿದುಬಿಟ್ಟರೆ ತೊಂದರೆ
ಯಾಗುವುದು. ಇವಳ ಮನಸ್ಸನ್ನು ಸ್ವಲ್ಪ ಪರೀಕ್ಷಿಸಬೇಕು ಎಂದು ಯೋಚಿಸಿ
ಹೇಳಿದರು—ನಿನಗೆ ಹತ್ತು ನಿಮಿಷ ಪಾಠ ಹೇಳುವುದರಿಂದ ಅವನಿಗೇನೂ
ಬಾಧಕವಿಲ್ಲವೆಂದು ನಾನೂ ಬಲ್ಲೆ. ಆದರೆ ಸೋಮಾರಿ ಹುಡುಗ. ತನ್ನ
ಕೆಲಸವನ್ನು ಮಾಡದಿರಲು ಒಂದು ನೆಪ ಸಿಕ್ಕಂತಾಗುವುದು. ನಾಳೆ ಪರೀಕ್ಷೆ
ಯಲ್ಲಿ ಪಾಸಾಗದಿದ್ದರೆ ದಿನವೆಲ್ಲಾ ಪಾಠ ಹೇಳಿಕೊಡುತ್ತಿದ್ದೆ-ಎಂದು ಸ್ಪಷ್ಟ
ವಾಗಿ ಹೇಳಿಬಿಡುವನು. ನಿನಗೆ ಪಾಠ ಹೇಳಲು ಒಬ್ಬ ಉಪಾಧ್ಯಾಯಿನಿಯನ್ನು
ಇರಿಸುವೆನು. ಅದರಿಂದ ಹೆಚ್ಚೇನೂ ವೆಚ್ಚವಾಗುವುದಿಲ್ಲ. ನೀನು ನನಗೆ
ಮೊದಲೇ ಏಕೆ ತಿಳಿಸಲಿಲ್ಲ? ಇವನಾದರೂ ನಿನಗೆ ಏನು ಹೇಳಿಕೊಡುವನು?
ನಾಲ್ಕಾರು ಶಬ್ದಗಳನ್ನು ಹೇಳಿಕೊಟ್ಟು ಓಡುವನು! ಇದರಿಂದ ನಿನಗೇನೂ
ಬರಲಾರದು.

ನಿರ್ಮಲೆಯು ಈ ಆಕ್ಷೇಪಣೆಯನ್ನು ಖಂಡಿಸಿ ಕೂಡಲೇ ನುಡಿದಳು—
ಇಲ್ಲ, ಹಾಗೆನ್ನಬೇಡಿ! ಅವನು ನನಗೆ ಮನಸಿಟ್ಟು ಕಲಿಸುವನು. ಅವನ
ಶಿಕ್ಷಣಕ್ರಮ ಮತ್ತು ಶೈಲಿಗಳು ಮನಸನ್ನು ಓದಿನ ಕಡೆಗೆ ಆಕರ್ಷಿಸುವವು.
ನೀವು ಒಂದು ದಿನ ಅವನು ಹೇಳಿಕೊಡುವ ರೀತಿಯನ್ನು ನೋಡಿ! ಉಪಾ
ಧ್ಯಾಯಿನಿಯು ಇಷ್ಟು ಶ್ರದ್ಧೆಯಿಂದ ಹೇಳಿಕೊಡಲಾರಳೆಂದು ನನ್ನ ನಂಬಿಕೆ!

ಮುನ್ಶಿಯವರು ತಮ್ಮ ಪ್ರಶ್ನಕುಶಲತೆಗಾಗಿ ಮನದಲ್ಲೇ ಹಿಗ್ಗುತ್ತಾ
ಹೇಳಿದರು—ದಿವಸಕ್ಕೆ ಒಂದು ಸಲ ಹೇಳಿಕೊಡುವನೋ, ಅಥವಾ ಅನೇಕ
ಸಲವೋ?

ಇಷ್ಟಾದರೂ ನಿರ್ಮಲೆಯು ಅವರ ಪ್ರಶ್ನೆಗಳ ಆಶಯವನ್ನು

ಅರಿಯಲಿಲ್ಲ. 'ಮೊದಲು ಸಾಯಂಕಾಲ ಮಾತ್ರ ಕೇಳಿಕೊಡುತ್ತಿದ್ದನು. ಈಗ ಕೆಲವು ದಿನಗಳಿಂದ ಇನ್ನೊಮ್ಮೆ ಬಂದು ಬರೆದಿರುವ ಪಾಠವನ್ನು ನೋಡಿ ಹೋಗುವನು. ನಾನು ವರ್ಗದಲ್ಲಿ ಎಲ್ಲರಿಗಿಂತಲೂ ಮೇಲೆಂದು ಹೇಳುವನು. ಈಗಿನ ಪರೀಕ್ಷೆಯಲ್ಲಿ ಇವನಿಗೆ ಪ್ರಥಮಸ್ಥಾನ ಸಿಕ್ಕಿರುವುದು. ಅಷ್ಟಾದರೂ ಅವನು ಮನಸಿಟ್ಟು ಓದುವುದಿಲ್ಲವೆಂದು ನೀವು ಹೇಗೆ ಹೇಳುವಿರಿ? ಈಗ ತಾನೇ ಅಕ್ಕನವರು ಬಂದು ನಾನೇ ಈ ಬೆಂಕಿಯನ್ನು ಹೊತ್ತಿಸಿರುವೆನೆಂದು ಕೂಗಾಡಿ ಹೋದರು. ವ್ಯರ್ಥವಾಗಿ ನಾನು ಬೈಗಳನ್ನು ಕೇಳಬೇಕು!' ಎಂದಳು.

ಮುನ್ಷಿಯವರು ಮನಸಿನಲ್ಲಿ ಅಂದುಕೊಂಡರು —'ಈಗ ಚೆನ್ನಾಗಿ ತಿಳಿಯಿತು! ನೆನ್ನೆ–ಮೊನ್ನೆಯ ಹುಡುಗಿ ನೀನು; ನನ್ನನ್ನು ಮೋಹಿಸತೊಡಗಿದೆಯಾ? ಮಾತುಮಾತಿಗೂ ಅಕ್ಕನ ಹೆಸರನ್ನು ಹೇಳಿ ನಿನ್ನ ಅಭೀಷ್ಟವನ್ನು ನೆರವೇರಿಸಿಕೊಳ್ಳಲು ನೋಡುವೆ!' ನಿರ್ಮಲೆಯೊಡನೆ ನುಡಿದರು—ಹಾಸ್ಟಲಿನ ಹೆಸರನ್ನು ಕೇಳಿ ಹೆದರಿ ಸಾಯುತ್ತಿರುವನು, ತಮ್ಮ ಮಿತ್ರರ ಸಂಗಡ ಇರಬಹುದೆಂದು ಇತರ ಹುಡುಗರು ಎಷ್ಟೋ ಆನಂದಿಸುವರು; ಇವನು ಅಳುತ್ತಿರುವನು! ಇದುವರೆಗೆ ಮನಸಿಟ್ಟು ಓದುತ್ತಿದ್ದನು; ಅದರಿಂದಲೇ ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿರುವುದು. ಆದರೆ, ಈಚೆಗೆ ಕೆಲ ದಿನಗಳಿಂದ ಅಲೆದಾಡುವ ಹುಚ್ಚು ಹಿಡಿದಿದೆ. ಈಗಿನಿಂದಲೇ ತಡೆಗಟ್ಟಿ ನಿಲ್ಲಿಸದೆ ಹೋದರೆ ಮುಂದೆ ಕೆಟ್ಟು ಹೋಗುವನು! ನಾನು ನಿನಗೊಬ್ಬ ಬೇರೆ ಉಪಾಧ್ಯಾಯಿನಿಯನ್ನು ಇರಿಸುವೆನು.

ಮರುದಿನ ಪ್ರಾತಃಕಾಲ ಮುನ್ಷಿಯವರು ಬಟ್ಟೆಯನ್ನು ಹಾಕಿಕೊಂಡು ಹೊರಗೆ ಬಂದರು. ದಿವಾನ್‌ಖಾನೆಯಲ್ಲಿ ಅನೇಕ ಕಕ್ಷಿಗಾರರು ಕುಳಿತಿದ್ದರು. ಅವರಲ್ಲಿ ಒಬ್ಬ ರಾಜಾಸಾಹೇಬರೂ ಇದ್ದರು. ಅವರಿಂದ ಮುನ್ಷಿಯವರಿಗೆ ವರ್ಷಕ್ಕೆ ಅನೇಕ ಸಾವಿರ ರೂಪಾಯಿಗಳು ಸಿಕ್ಕುತ್ತಿದ್ದವು. ಹತ್ತು ನಿಮಿಷದಲ್ಲಿ ಬರುತ್ತೇನೆಂದು ಹೇಳಿ ಎಲ್ಲರನ್ನೂ ಅಲ್ಲೇ ಬಿಟ್ಟು, ಮುನ್ಷಿಯವರು ಮಾನಸರಾಮನ ಮುಖ್ಯೋಪಾಧ್ಯಾಯರ ಬಳಿಗೆ ಹೋದರು. ಅವರು ಒಳ್ಳೆಯ ಯೋಗ್ಯ ಮನುಷ್ಯರು. ವಕೀಲ ಸಾಹೇಬರನ್ನು ಬಹಳ ಆದರ ಸತ್ಕಾರದಿಂದ ಬರಮಾಡಿಕೊಂಡರು ಆದರೆ ಅವರ ಹಾಸ್ಟಲಿನಲ್ಲಿ ಒಬ

ಹುಡುಗನ ಸ್ಥಳವೂ ಖಾಲಿ ಇರಲಿಲ್ಲ. ಎಲ್ಲಾ ಕೋಠಡಿಗಳೂ ಭರ್ತಿಯಾಗಿದ್ದವು. ಮೊದಲು ಹೊರಗಿನ ಹುಡುಗರಿಗೆ ಸ್ಥಾನವಿತ್ತು, ನಂತರ ಊರಿನ ಹುಡುಗರಿಗೆ ಸ್ಥಳ ಕೊಡಬೇಕೆಂದು ಇನ್‌ಸ್ಪೆಕ್ಟರ ಸಾಹೇಬರ ಆಜ್ಞೆಯಾಗಿತ್ತು. ಎಷ್ಟೋ ಹೊರಗಿನ ಹುಡುಗರ ಅರ್ಜಿಗಳು ಆಗಲೇ ಬಂದಿದ್ದವು. ಆದ್ದರಿಂದ ಸ್ಥಳ ಖಾಲಿಯಾದರೂ ಮಾನಸರಾಮನಿಗೆ ಸಿಗುವಂತಿರಲಿಲ್ಲ. ಲೋಭವಶರಾಗಿ ಅಸಾಧ್ಯವನ್ನೂ ಸಾಧ್ಯ ಮಾಡುವಂತಹ ಅನೇಕ ಮನುಷ್ಯರನ್ನು ಮುನ್ಷಿಯವರು ತಮ್ಮ ದಿನಚರ್ಯೆಯಲ್ಲಿ ನೋಡಿದ್ದರು. ಆದ್ದರಿಂದ ಶಾಲೆಯ ಗುಮಾಸ್ತನಿಗೆ ಸ್ವಲ್ಪ ಲಂಚ ಕೊಟ್ಟು ಒಳ್ಳೆಯ ಮಾತನ್ನಾಡಿದರೆ, ಕೆಲಸ ಜರುಗಬಹುದೆಂದು ಯೋಚಿಸಿ ಅವನ ಬಳಿ ಹೋದರು. ಗುಮಾಸ್ತನೆಂದನು—ಮುನ್ಷಿಯವರೇ ! ಇದು ಕಛೇರಿಯಲ್ಲ, ಶಾಲೆ! ಈ ವಿಷಯ ಮುಖ್ಯಾಧ್ಯಾಪಕರ ಕಿವಿಗೆ ಬಿದ್ದರೆ, ಬಹಳ ಕೋಪಗೊಂಡು ಮಾನಸರಾಮನನ್ನು ಶಾಲೆಯಿಂದಲೇ ಹೊರಗೆ ಕಳುಹಿಬಿಡುವರು. ಮೇಲ್ಪಟ್ಟ ಅಧಿಕಾರಿಗಳ ಸಂಗಡ ವಿಷಯವನ್ನು ತಿಳಿಸುವ ಸಂಭವವೂ ಉಂಟು ! ಮುನ್ಷಿಯವರು ಪೆಚ್ಚುಮೋರೆ ಹಾಕಿಕೊಂಡು ಹತ್ತು ಗಂಟೆಯ ಹೊತ್ತಿಗೆ ಮನೆಗೆ ಹಿಂತಿರುಗಿದರು. ಅದೇ ಹೊತ್ತಿಗೆ ಮಾನಸರಾಮನು ಮನೆಯಿಂದ ಶಾಲೆಗೆ ಹೊರಟಿದ್ದನು. ಮುನ್ಷಿಯವರು ಅವನನ್ನು ತನ್ನ ಶತ್ರುವೋ ಎಂಬಂತೆ ಕಠೋರ ನೇತ್ರಗಳಿಂದ ನೋಡಿ ಒಳಗೆ ಹೊರಟುಹೋದರು.

ಇದಾದ ಹತ್ತು ಹನ್ನೆರಡು ದಿನಗಳ ವರೆಗೆ ವಕೀಲಸಾಹೇಬರು ಬೆಳಿಗ್ಗೆ ಅಥವಾ ಸಾಯಂಕಾಲ ಯಾವುದಾದರೂ ಶಾಲೆಯ ಮುಖ್ಯೋಪಾಧ್ಯಾಯರನ್ನು ಕಂಡು ಮಾನಸರಾಮನನ್ನು ಹಾಸ್ಟಲಿಗೆ ಸೇರಿಸುವ ಪ್ರಯತ್ನ ಮಾಡುತ್ತಿದ್ದರು. ಆದರೆ ಯಾವ ಶಾಲೆಯಲ್ಲೂ ಸ್ಥಳ ಖಾಲಿ ಇರಲಿಲ್ಲ. ಇನ್ನು ಉಳಿದದ್ದು ಎರಡೇ ಉಪಾಯಗಳು. ಮಾನಸರಾಮನನ್ನು ಬಾಡಿಗೆಯ ಕೊಠಡಿಯಲ್ಲಿ ಇರಿಸುವುದು ಒಂದು; ಮತ್ತೊಂದು ಅವನನ್ನು ಬೇರೆ ಶಾಲೆಗೆ ಸೇರಿಸುವುದು ! ಈ ಎರಡು ವಿಷಯಗಳೂ ಸುಲಭಸಾಧ್ಯವಾಗಿದ್ದವು. ಆದರೆ ಈಗ ಮುನ್ಷಿಯವರ ಶಂಕಿತ ಹೃದಯವು ತುಸು ಶಾಂತವಾಗಿತ್ತು. ಅಂದಿನಿಂದ ಮಾನಸರಾಮನು ಮನೆಯೊಳಗೆ ಸಹ ಬರುತ್ತಿರಲಿಲ್ಲ; ಅಷ್ಟೇ ಅಲ್ಲ, ಆಟವಾಡಲು ಕೂಡ ಹೊರಗೆ ಹೋಗುತ್ತಿರಲಿಲ್ಲ. ಶಾಲೆಗೆ ಹೋಗುವ ಮುನ್ನ,

ಮತ್ತು ಶಾಲೆಯಿಂದ ಹಿಂದಿರುಗಿದ ನಂತರ ಅವನು ತನ್ನ ಕೊಠಡಿಯಲ್ಲೇ ಕುಳಿತಿರುತ್ತಿದ್ದನು. ಬೇಸಿಗೆಯ ದಿನಗಳು, ಮೈ ಬೆವೆತು ಹೋಗುತ್ತಿತ್ತು. ಅಷ್ಟಾದರೂ ಅವನು ಹೊರಗೆ ಹೋಗುತ್ತಿರಲಿಲ್ಲ. ಅಲ್ಲಿ ಇಲ್ಲಿ ಅಲೆಯುವನೆಂಬ ಆಕ್ಷೇಪಣೆಯಿಂದ ಮುಕ್ತನಾಗಲು ಅವನ ಆತ್ಮಾಭಿಮಾನವು ಆತುರಗೊಳ್ಳುತ್ತಿತ್ತು !

ಒಂದು ದಿನ ಮುನ್ಷಿಯವರು ಊಟಮಾಡಲು ಕುಳಿತಿದ್ದಾಗ ಮಾನಸ ರಾಮನೂ ಸ್ನಾನಮಾಡಿ ಊಟಮಾಡಲು ಬಂದನು ಮುನ್ಷಿಯವರು ಈಚೆಗೆ ಕೆಲವು ತಿಂಗಳಿಂದ ಅವನನ್ನು ಬರಿಮೈಯಲ್ಲಿ ನೋಡಿರಲಿಲ್ಲ. ಇಂದು ಅವನನ್ನು ನೋಡಿದೊಡನೆಯೇ ಅವರ ಎದೆಯೊಡೆದಂತಾಯಿತು. ಬರಿಯ ಎಲಬುಗಳ ಗೂಡಾಗಿದ್ದನು ! ಮುಖದಲ್ಲಿ ಬ್ರಹ್ಮಚರ್ಯೆಯ ತೇಜಸ್ಸಿತ್ತು. ದೇಹ ಮಾತ್ರ ಕೃಷಿಸಿ ಕಂಗೆಟ್ಟಿತ್ತು. 'ಈಚೆಗೆ ನಿನ್ನ ದೇಹಸ್ಥಿತಿ ಸರಿಯಿಲ್ಲವೇ ? ಏಕಿಷ್ಟು ದುರ್ಬಲನಾಗಿರುವೆ ? ' ಎಂದು ಕೇಳಿದರು.

ಮಾನಸರಾಮನು ವಸ್ತ್ರವನ್ನು ಹೊದೆದುಕೊಳ್ಳುತ್ತಾ ಹೇಳಿದನು— ದೇಹಸ್ಥಿತಿ ಸರಿಯಾಗಿಲ್ಲದೆ ಏನು ?

ಮುನ್ಷಿ—ಆದರೆ ಇಷ್ಟು ಅಶಕ್ತನಾಗಿರುವೆ ಏಕೆ ?

ಮಾನಸರಾಮ – ಅಶಕ್ತನೇನೂ ಆಗಿಲ್ಲ; ನಾನು ಯಾವಾಗ ಇದಕಿಂತ ದಪ್ಪನಾಗಿದ್ದೆ ?

ಮುನ್ಷಿ—ವಾ ! ಅರ್ಧಕ್ಕರ್ಧ ಸಹ ಇಲ್ಲ ? ಅಷ್ಟಾದರೂ ಅಶಕ್ತನಾಗಿಲ್ಲವೆಂದು ಹೇಳುವೆ ? ಏನಕ್ಕಾ ! ಇವನು ಹೀಗೆಯೇ ಇದ್ದನೇ ?

ರುಕ್ಮಿಣಿಯು ಅಂಗಳದಲ್ಲಿ ವೃಂದಾವನಕ್ಕೆ ನೀರನ್ನು ಹಾಕುತ್ತಿದ್ದಳು. ಅಲ್ಲಿಂದಲೇ ಹೇಳಿದಳು—ದುರ್ಬಲನೇಕಾಗಿರುವನು ? ಈಗ ಲಾಲನೆ-ಪಾಲನೆಗಳು ಚನ್ನಾಗಿ ನಡೆಯುತ್ತಿರುವವು. ನಾನಾದರೆ ಹಳ್ಳಿಯವಳು; ಹೊತ್ತು ಹೊತ್ತಿಗೆ ಹುಡುಗರಿಗೆ ಊಟ-ತಿಂಡಿ ಕೊಡುವುದನ್ನು ತಿಳಿದಿರಲಿಲ್ಲ. ಕೇಳಿದಾಗೆಲ್ಲ ಕೊಟ್ಟು ಹುಡುಗರನ್ನು ಹೆಚ್ಚಿಸುತ್ತಿದ್ದೆ. ಈಗಲಾದರೆ ಓದಿ-ಬರೆದ ಮತ್ತು ಮನೆಕೆಲಸದಲ್ಲಿ ಚತುರಳಾದ ಹೆಂಡತಿಯು ಹುಡುಗರನ್ನು ನೋಡಿಕೊಳ್ಳುತ್ತಿರುವಳಲ್ಲ ? ಅಂದಬಳಿಕ ಅವನೇಕೆ ದುರ್ಬಲನಾಗುವನು ?

ಮುನ್ಷಿ– ಅಕ್ಕ, ನೀನು ಬಹಳ ಅನ್ಯಾಯ ಮಾಡುತ್ತಿರುವೆ! ಹುಡುಗ ರನ್ನು ಹೆಚ್ಚಿಸಿದೆ ಎಂದು ನಿನಗಾರು ಹೇಳಿದರು? ಇತರರಿಂದಾಗದ ಕೆಲಸ ವನ್ನು ನೀನು ಮಾಡಬೇಕು. ಯಾವ ವಿಷಯದಲ್ಲೂ ತಲೆ ಹಾಕದೆ ಇರುವೆ ನೆಂದರೆ ಹೇಗೆ? ಅವಳೇ ಇನ್ನೂ ಹುಡುಗಿಯಾಗಿರುವಾಗ, ಹುಡುಗರನ್ನೇನು ನೋಡಿಕೊಳ್ಳುವಳು? ಇದು ನಿನ್ನ ಕೆಲಸ!

ರುಕ್ಮಿಣಿ—ನೀನು ನನ್ನನ್ನು ಮನೆಯವಳೆಂದು ತಿಳಿದಿದ್ದವರೆಗೂ ನಾನು ಮಾಡುತ್ತಿದ್ದೆ; ಬೇರೆಯವಳೆಂದು ಭಾವಿಸಿದ ಬಳಿಕ ನನಗೇತರ ಅಗತ್ಯ? ಎಷ್ಟು ದಿನದಿಂದ ಅವನು ಹಾಲು ಕುಡಿದಿಲ್ಲವೆಂದು ಕೇಳು? ಅವನ ಕೊಠಡಿಗೆ ಹೋಗಿ ನೋಡು, ಕಳುಹಿಸಿದ ತಿಂಡಿಯೆಲ್ಲ ಹಾಗೇ ಬಿದ್ದಲ್ಲೇ ಬಿದ್ದು ನಾರು ತ್ತಿದೆ! ತಿಂಡಿಯನ್ನು ಕಳುಹಿಸಿಬಿಟ್ಟರೆ ಆಯಿತು, ಯಾರಾದರೂ ತಿನ್ನಲಿ ಅಥವಾ ಬಿಡಲಿ! ಎಂದು ಯಜಮಾನಿಯ ಯೋಚನೆಯಿರಬಹುದು. ಎಷ್ಟು ಪ್ರೀತಿ–ಆದರದಿಂದ ಸಾಕಲ್ಪಟ್ಟ ಹುಡುಗರು! ಈಗ ಅನಾಥರಂತೆ ಇದ್ದು ಸುಖವಾಗಿರಲು ಹೇಗೆ ಸಾಧ್ಯ? ಇರುವ ವಿಷಯವನ್ನು ಸ್ಪಷ್ಟವಾಗಿ ಹೇಳಿರು ವೆನು. ನನ್ನನ್ನು ಕೆಟ್ಟವಳೆಂದು ಭಾವಿಸಿದರೂ ಚಿಂತೆಯಿಲ್ಲ! ಸಾಲದುದಕ್ಕೆ ಮಾನಸರಾಮುನನ್ನು ಹಾಸ್ಟಲಿನಲ್ಲಿ ಇರಿಸುವ ಏರ್ಪಾಡು ಮಾಡುತ್ತಿರುವೆ ಎಂದು ತಿಳಿದುಬಂತು! ಪಾಪ! ಹುಡುಗನಿಗೆ ಮನೆಯೊಳಕ್ಕೆ ಬರಲು ಸಹ ಅಡ್ಡಿಯೇ? ನನ್ನ ಹತ್ತಿರ ಬರಲು ಕೂಡ ಹೆದರುವನು!

ಅಷ್ಟರಲ್ಲಿ ಮಾನಸರಾಮುನು ಎರಡು ತುತ್ತು ತಿಂದು ಎದ್ದುಬಿಟ್ಟನು. 'ಏನು, ನಿನ್ನ ಊಟವಾಯಿತೇ? ಇನ್ನೂ ಕುಳಿತು ಒಂದು ನಿಮಿಷ ಸಹ ಆಗಲಿಲ್ಲ. ಏನು ಊಟಮಾಡಿದೆ? ಎರಡೇ ತುತ್ತು ತಿಂದೆಯಲ್ಲಾ?'

ಮಾನಸರಾಮುನು ಸಂಕೋಚದಿಂದ ನುಡಿದನು:—ತರಕಾರಿ ಮತ್ತು ಪಲ್ಯಗಳು ಜಾಸ್ತಿ ಇದ್ದವು. ಹೆಚ್ಚಾಗಿ ತಿಂದರೆ ಗಂಟಲು ಉರಿಯುವುದು; ಹುಳಿ–ಹುಳಿ ತೇಗು ಬರುವುದು!

ಮುನ್ಷಿಯವರು ಊಟಮಾಡಿ ಎದ್ದಾಗ ಬಹಳ ಚಿಂತಿತರಾಗಿದ್ದರು. ಹುಡುಗನು ಹೀಗೆಯೇ ಸಣ್ಣನಾಗುತ್ತ ಹೋದರೆ, ಯಾವುದಾದರೂ ಭಯಂಕರ ಬೇನೆಗಿಟ್ಟುಕೊಳ್ಳುವುದು–ಎಂದುಕೊಂಡರು. ಆಗ ಅವರಿಗೆ ರುಕ್ಮಿಣಿಯ ಮೇಲೆ ಬಹಳ ಕೋಪ ಬಂತು. 'ತಾನು ಮನೆಯ ಯಜಮಾನಿಯಲ್ಲ

ಎಂಬುದೇ ಇವಳಿಗೆ ಹೊಟ್ಟೆಯುರಿ. ಮನೆಯ ಯಜಮಾನಿಯಾಗುವ ಅಧಿಕಾರ ತನಗೇನಿದೆ, ಎಂದು ಇವಳು ತಿಳಿಯಲಿಲ್ಲ. ರೂಪಾಯಿಗಳನ್ನು ಲೆಖ್ಖ ಮಾಡಲು ಸಹ ಬರದಿರುವ ಇವಳು ಮನೆಯ ಯಜಮಾನಿ ಎಂತಾಗುವಳು? ಒಂದು ವರ್ಷ ಕಾಲ ಆಗಿದ್ದ ಹಳ್ಲ? ಒಂದು ಕಾಸನ್ನೂ ಉಳಿಸಲಿಲ್ಲ. ಇದೇ ವರಮಾನದಲ್ಲಿ ರೂಪಕಲೆ (ಹಿಂದಿನ ಹೆಂಡತಿ) ಯು ಸುಮಾರು ಇನ್ನೂರು ರೂಪಾಯಿಗಳನ್ನು ಉಳಿಸುತ್ತಿದ್ದಳು. ಇವಳ ಆಡಳಿತದಲ್ಲಿ ಬರುವ ವರಮಾನವೆಲ್ಲಾ ಖರ್ಚಿಗೇ ಸಾಲದಾಗಿದೆ. ಇವಳ ಮುದ್ದಿನಿಂದ ಹುಡುಗರು ಹೆಚ್ಚಿರುವರೆಂಬುದರಲ್ಲಿ ಸಂದೇಹವಿಲ್ಲ! ಇಷ್ಟು ದೊಡ್ಡ ಹುಡುಗರಿಗೆ ಊಟ–ತಿಂಡಿಗಳನ್ನು ತಿನ್ನಿಸಬೇಕೆ? ಅದರ ಗಮನ ಅವರಿಗೇ ಇರಬೇಕು.' ಮುನ್ಷಿಯವರಿಗೆ ಮಾನಸರಾಮನ ಈ ಪರಿಯನ್ನು ಕಂಡು ಬಹಳ ವ್ಯಸನವಾಯಿತು. ತಮ್ಮ ಮಿತ್ರರೊಡನೆ ಮಾನಸರಾಮನ ವಿಷಯ ಪ್ರಸ್ತಾಪಿಸಿದರು. ಅದಕ್ಕವರು ಹೇಳಿದರು—ಅವನ ಆಟ–ಪಾಟಗಳಲ್ಲಿ ಯಾವ ಅಡ್ಡಿಯನ್ನೂ ಮಾಡಬೇಡಿ. ಸುಮ್ಮನೆ ಕೊಠಡಿಯಲ್ಲಿ ಕುಳಿತಿರುವುದರಿಂದ ಬುದ್ಧಿ ಕೆಡುವುದೇ ಹೊರತು ಒಳ್ಳೆಯ ಗಾಳಿಯಲ್ಲಿ ಆಟವಾಡುವುದರಿಂದಲ್ಲ. ಕೆಟ್ಟ ಸಹವಾಸದಿಂದ ಅವನನ್ನು ಕಾಪಾಡಿ! ಆದರೆ, ಮನೆಯಿಂದ ಹೊರಗೆ ಹೋಗದಂತೆ ಮಾತ್ರ ಮಾಡಬೇಡಿ. ಯೌವನಾವಸ್ಥೆಯಲ್ಲಿ ಏಕಾಂತ ವಾಸವು ಮನಸ್ಸಿನ ಮೇಲೆ ದುಷ್ಪರಿಣಾಮವನ್ನುಂಟುಮಾಡುವುದು!

ಮುನ್ಷಿಯವರಿಗೆ ಈಗ ತಮ್ಮ ತಪ್ಪು ತಿಳಿಯಿತು. ಮನೆಗೆ ಹಿಂತಿರುಗಿ, ಮಾನಸರಾಮನ ಬಳಿಗೆ ಹೋದರು. ಅವನು ಆಗತಾನೇ ಶಾಲೆಯಿಂದ ಹಿಂತಿರುಗಿದ್ದನು. ಬಟ್ಟೆಯನ್ನು ಇನ್ನೂ ಬಿಚ್ಚಿರಲಿಲ್ಲ ಎದುರಿಗೊಂದು ಪುಸ್ತಕವನ್ನು ತೆರೆದಿಟ್ಟು ಕಿಟಕಿಯ ಕಡೆ ನೋಡುತ್ತಿದ್ದನು. ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ಭಿಕ್ಷೆ ಬೇಡುತ್ತಿದ್ದ ಭಿಕ್ಷುಕಿಯೊಬ್ಬಳ ಕಡೆಗೆ ಅವನ ದೃಷ್ಟಿ ಬಿದ್ದಿತ್ತು. ಬಾಲಕನು ಮಾತೆಯ ಉಡಿಯಲ್ಲಿ ಕುಳಿತು ರಾಜಸಿಂಹಾಸನದ ಮೇಲೆ ಕುಳಿತಷ್ಟು ಸಂತುಷ್ಟನಾಗಿದ್ದನು. ಆ ಬಾಲಕನನ್ನು ಕಂಡು ಮಾನಸರಾಮನಿಗೆ ಅಳು ಉಕ್ಕಿ ಬಂತು. ಈ ಬಾಲಕನು ನನಗಿಂತ ಭಾಗ್ಯಶಾಲಿಯಲ್ಲವೇ? ಮಾತೆಯ ಉಡಿಗಿಂತ ಉತ್ತಮ ವಸ್ತುವು ಅವನಿಗೆ ಈ ಪ್ರಪಂಚದಲ್ಲಿ ಇನ್ನಾವುದಿರುವುದು? ಈಶ್ವರನ ಸೃಷ್ಟಿಯಲ್ಲಿ ಇದಕ್ಕಿಂತ

ಮಿಗಿಲಾದ ವಸ್ತು ಬೇರೊಂದಿಲ್ಲ! ಭಗವಂತ! ಮಾತೃವಿಯೋಗದ ದುಃಖ ವನ್ನು ಅನುಭವಿಸಬೇಕಾದ ಬಾಲಕನನ್ನು ಸೃಷ್ಟಿಸುವೆಯಾದರೂ ಏಕೆ? ಇಂದು ಪ್ರಪಂಚದಲ್ಲಿ ನನಗಿಂತ ಹೆತಭಾಗಿ ಇನ್ನಾರು? ನನ್ನ ಊಟ-ಉಡುಪು ಗಳ, ಜೀವನ-ಮರಣದ ಚಿಂತೆ ಯಾರಿಗೆ? ನನಗೆ ದುಃಖ ಕೊಡುವುದರಲ್ಲೇ ಈಗ ತ-ದೆಯವರಿಗೆ ಸುಖವೆನಿಸಿದೆ. ಇಂದೇ ಸತ್ತುಹೋದರೂ ನನ್ನನ್ನು ಕೇಳುವವ.ಾರು? ನನ್ನ ಮುಖವನ್ನು ನೋಡಲು ಸಹ ಅವರಿಗಿಷ್ಟವಿಲ್ಲ! ನನ್ನನ್ನು ಮನೆಯಿಂದ ಹೊರಗಿರಿಸುವ ಸಿದ್ಧತೆ ಮಾಡುತ್ತಿರುವರು! ಹಾ, ಅಮ್ಮಾ! ಇಂದು ನಿನ್ನ ಪ್ರಿಯ ಪುತ್ರನು ಅಲ್ಲಿ ಇಲ್ಲಿ ಅಲೆಯುವನೆಂದು ಅನಿಸಿ ಕೊಂಡಿರುವನು! ನಿನ್ನ ಮೃತ್ಯು ಸಮಯದಲ್ಲಿ ನಮ್ಮನ್ನು ಕಾಪಾಡುವೆನೆಂದು ಕೈಹಿಡಿದ ಅದೇ ತಂದೆಯು ಇಂದು ನನ್ನನ್ನು ದುಷ್ಟನೆಂದೂ ಅಲೆ-ಪೋಕ ನೆಂದೂ ಅನ್ನುತ್ತಿರುವರು. ಈ ಮನೆಯಲ್ಲಿರ-ವಷ್ಟು ಯೋಗ್ಯತೆ ಕೂಡ ನನ ಗಿಲ್ಲವೇ? ಎನ್ನುತ್ತ ಮಾನಸರಾಮನು ಅಪಾರ ವೇದನೆಯಿಂದ ಬಿಕ್ಕಿ ಬಿಕ್ಕಿ ಅಳತೊಡಗಿದನು. ಆ ಹೊತ್ತಿಗೆ ಸರಿಯಾಗಿ ವಕೀಲಸಾಹೇಬರು ಅಲ್ಲಿಗೆ ಬಂದರು ಮಾನಸರಾಮನು ಚಟಪಟನೆ ಕಣ್ಣನ್ನೊರೆಸಿಕೊಂಡು, ತಲೆತಗ್ಗಿಸಿ ನಿಂತುಕೊಂಡನು. ಮುನ್ಷಿಯವರು ಹಿಂದೆಂದೂ ಅವನ ಕೋಣೆಯಲ್ಲಿ ಕಾಲಿಟ್ಟಿರಲಿಲ್ಲ ಇಂದೇನು ವಿಪತ್ತು ಬಂತೋ?-ಎಂದು ಮಾನಸರಾಮನ ಹೃದಯವು ಡಬಡಬನೆ ಬಡಿದುಕೊಳ್ಳತೊಡಗಿತು. ಅವನು ಅಳುತ್ತಿರುವು ದನ್ನು ಕಂಡು, ಒಂದು ಕ್ಷಣಕ್ಕೆ ಮುನ್ಷಿಯವರ ವಾತ್ಸಲ್ಯ ಉಕ್ಕಿಬಂತು. ಗಾಬರಿಯಿಂದ ಕೇಳಿದರು—ಏಕೆ? ಅಳುತ್ತಿರುವೆಯೇಕೆ ಮಾನಸರಾಮ? ಯಾರಾದರೂ ಏನಾದರೂ ಅಂದರೇ?

ಮಾನಸರಾಮನು ಬಹಳ ಕಷ್ಟದಿಂದ ಉಕ್ಕಿ ಬರುತ್ತಿರುವ ಅಳುವನ್ನು ತಡೆದು, ನುಡಿದನು—ಇಲ್ಲ; ಅ ುತ್ತಿಲ್ಲ....!

ಮುನ್ಷಿ—ನಿನ್ನ ಅಮ್ಮನು ಏನೂ ಹೇಳಲಿಲ್ಲವಷ್ಟೇ?

ಮಾನಸರಾಮ—ಇಲ್ಲ, ಇಲ್ಲ; ಅವರು ನನ್ನ ಸಂಗಡ ಮಾತಾಡುವುದೇ ಇಲ್ಲ.

ಮುನ್ಷಿ—ಏನು ಮಾಡಲಿ ಮಗೂ! ಮಕ್ಕಳಿಗೆ ತಾಯಾಗಿರುವಳೆಂದು ತಿಳಿದು ಮದುವೆ ಮಾಡಿಕೊಂಡೆ. ಆದರೆ ಆ ನನ್ನ ಆಸೆಯು ಈಡೇರಲಿಲ್ಲ! ನಿನ್ನ ಸಂಗಡ ಮಾತನಾಡುವುದೇ ಇಲ್ಲವೇ?

ಮಾನಸರಾಮ—ಇಲ್ಲ; ಈಗ ಕೆಲವು ತಿಂಗಳಿಂದ ಮಾತನಾಡಿಲ್ಲ.

ಮುನ್ಷಿ —ವಿಚಿತ್ರ ಪ್ರಕೃತಿಯ ಹೆಂಗಸು! ಅವಳ ಅಪೇಕ್ಷೆ ಏನೆಂದು ಅರಿಯುವುದೇ ಕಷ್ಟ. ಅವಳ ಸ್ವಭಾವ ಇಂತಹದೆಂದು ತಿಳಿದಿದ್ದರೆ ಮದುವೆ ಮಾಡಿಕೊಳ್ಳುತ್ತಲೇ ಇರಲಿಲ್ಲ. ನಿತ್ಯವೂ ಒಂದಲ್ಲ ಒಂದು ಮಾತನ್ನು ತೆಗೆಯುತ್ತಲೇ ಇರುವಳು. ನೀನು ದಿನವೆಲ್ಲಾ ಮನೆಯಲ್ಲೇ ಇರುವುದಿಲ್ಲವೆಂದು ಅವಳೇ ನನಗೆ ಹೇಳಿದ್ದಳು. ತನ್ನ ಪ್ರಿಯಪುತ್ರನು ಅಲ್ಲಿ ಇಲ್ಲಿ ಅಲೆದಾಡುತ್ತಿದ್ದರೆ ಯಾವ ತಂದೆಗೆ ತಾನೇ ದುಃಖವಾಗುವುದಿಲ್ಲ? ಇದಕ್ಕಾಗಿಯೇ ನಿನ್ನನ್ನು ಹಾಸ್ಟಲಿಗೆ ಕಳುಹಿಸಬೇಕೆಂದು ನಾನು ನಿಶ್ಚಯಿಸಿದೆನು. ಅಷ್ಟೇ! ಇನ್ನೇನೂ ಇಲ್ಲ ಮಗೂ! ನಿನ್ನ ಆಟ-ಪಾಟಗಳಲ್ಲಿ ಅಡ್ಡಿ ಮಾಡಲು ನಾನು ಆಶಿಸಲಿಲ್ಲ. ನಿನ್ನ ಈ ಸ್ಥಿತಿಯನ್ನು ನೋಡಿ ನನ್ನ ಹೃದಯ ಕರಗಿ ನೀರಾಗುತ್ತಿರುವುದು! ನಾನು ಭ್ರಾಂತನಾಗಿದ್ದೆನೆಂದು ನಿನ್ನೆ ತಿಳಿಮಕೊಂಡೆನು. ನೀನು ಇಷ್ಟಬಂದಲ್ಲಿ ಆಟವಾಡಲು ಹೋಗು; ಸಾಯಂಕಾಲ ಒಳ್ಳೆಯ ಗಾಳಿಯಲ್ಲಿ ತಿರುಗಾಡು! ಅದರಿಂದ ನಿನಗೆ ಅನುಕೂಲವಾಗುವುದು. ನಿನಗೇನಾದರೂ ಬೇಕಾದರೆ ನನಗೆ ಕೇಳು; ಅವಳನ್ನು ಕೇಳುವ ಅವಶ್ಯಕತೆಯಿಲ್ಲ. ಅವಳು ಮನೆಯಲ್ಲೇ ಇಲ್ಲವೆಂದು ತಿಳಿ. ನಿಮ್ಮ ತಾಯಿಯು ಬಿಟ್ಟುಹೋದ ಮಾತ್ರಕ್ಕೆ ನಾನಿಲ್ಲವೇ?

ಬಾಲಕನ ಸರಳ ನಿಷ್ಕಪಟ ಹೃದಯವು ಪಿತೃಪ್ರೇಮದಿಂದ ಪುಳಕಿತವಾಯಿತು. ದೇವರೇ ಎದುರಿಗೆ ಬಂದು ನಿಂತಂತೆ ಅವನಿಗೆ ಭಾಸವಾಯಿತು! ನಿರಾಶೆ ಮತ್ತು ಕ್ಷೋಭೆಗಳಿಂದ ವಿಕಲನಾಗಿ, ಅವನು ತನ್ನ ಮನಸಿನಲ್ಲಿ ತಂದೆಯನ್ನು ಅತ್ಯಂತ ನಿಷ್ಠುರನೆಂದು ಭಾವಿಸಿದ್ದನು; ವಿಮಾತೆಯ ವಿಷಯದಲ್ಲಿ ಅವನಿಗೆ ಯಾವ ಸಂಶಯವೂ ಇರಲಿಲ್ಲ. ದೈವಸಮಾನರಾದ ತಂದೆಯೊಡನೆ ತಾನೆಷ್ಟು ಅನ್ಯಾಯ ಮಾಡಿದೆನೆಂದು ಈಗ ಅವನು ತಿಳಿದುಕೊಂಡನು. ಅವನ ಹೃದಯದಲ್ಲಿ ಪಿತೃಭಕ್ತಿಯ ಒಂದು ತರಂಗವೆದ್ದಿತು. ತಂದೆಯ ಚರಣಗಳ ಮೇಲೆ ತಲೆಯನ್ನಿರಿಸಿ ಅಳತೊಡಗಿದನು. ಮುನ್ಷಿಯವರಿಗೆ ಕರುಣೆ ಉಕ್ಕಿಬಂತು. ಯಾವ ಪುತ್ರನನ್ನು ಕ್ಷಣಕಾಲ ಕಾಣದಿದ್ದರೆ ಅವರ ಹೃದಯವು ಕಾತರಗೊಳ್ಳುತ್ತಿತ್ತೋ, ಯಾವನ ವಿದ್ಯೆ-ಬುದ್ಧಿ-ನಡತೆಗಳನ್ನು ಪ್ರತಿಯೊಬ್ಬರೂ ಹೊಗಳುತ್ತಿದ್ದರೋ ಅದೇ ಪುತ್ರನ ಮೇಲೆ ಅವರ ಹೃದಯವು ಇಷ್ಟೇಕೆ ಕಠೋರವಾಯಿತು? ತಮ್ಮ ಪ್ರಿಯಪುತ್ರನನ್ನೇ ಶತ್ರುವೆಂದು ಬಗೆದು,

ಮನೆಯಿಂದ ಹೊರಗಟ್ಟಲು ಸಿದ್ಧರಾದರೆ? ನಿರ್ಮಲೆಯು ಪಿತ-ಪುತ್ರರ ನಡುವೆ ಇದ್ದ ಗೋಡೆಯಂತಿದ್ದಳು. ನಿರ್ಮಲೆಯನ್ನು ತನ್ನ ಕಡೆಗೆಳೆದುಕೊಳ್ಳಲು ಪುತ್ರನಿಂದ ದೂರ ಸರಿಯಬೇಕಾಗುತ್ತಿತ್ತು; ಇದರಿಂದ ಪಿತ-ಪುತ್ರರ ನಡುವಿನ ಅಂತರವು ಹೆಚ್ಚುತ್ತಿತ್ತು. ಫಲಸ್ವರೂಪವಾಗಿ ಇಂದು ತಮ್ಮ ಅಭಿನ್ನ ಪುತ್ರನೊಡನೆ ಇಷ್ಟು ಛಲ ಮಾಡಬೇಕಾಯಿತು! ಪಿತ-ಪುತ್ರರ ನಡುವಿನಿಂದ ನಿರ್ಮಲೆಯನ್ನು ಸರಿಸಿ ಪುತ್ರನನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಉಪಾಯವು ಬಹಳ ಯೋಚಿಸಿದ ಬಳಿಕ ಇಂದು ಅವರಿಗೆ ಹೊಳೆಯಿತು. ಇಂದೇ ಆ ಯುಕ್ತಿಯನ್ನೂ ಆರಂಭಿಸಿಬಿಟ್ಟರು. ಇದರಿಂದ ಅವರ ಅಭೀಷ್ಟ ಸಿದ್ಧಿಯಾಗುವುದೋ ಇಲ್ಲವೋ ಹೇಳುವಂತಿರಲಿಲ್ಲ!

ಮಾನಸರಾಮನನ್ನು ಹಾಸ್ಟಲಿಗೆ ಕಳುಹಿಸಬೇಡಿರೆಂದು ಒಂದು ದಿನ ನಿರ್ಮಲೆಯು ತೋತಾರಾಮರನ್ನು ಬಹಳವಾಗಿ ಬೇಡಿಕೊಂಡಿದ್ದಳು. ಆದರೆ ಅವರು ಕೇಳಲಿಲ್ಲ. ಅಂದಿನಿಂದ ಅವಳು ಮಾನಸರಾಮನ ಬಳಿ ಪಾಠ ಕಲಿಯುವುದನ್ನು ಬಿಟ್ಟಿದ್ದಳು; ಅಷ್ಟೇ ಅಲ್ಲದೆ ಅವನ ಸಂಗಡ ಮಾತನಾಡುತ್ತಲೂ ಇರಲಿಲ್ಲ. ಪತಿಯ ಅವಿಶ್ವಾಸಪೂರ್ಣ ತತ್ಪರತೆಯು ಸ್ವಲ್ಪಸ್ವಲ್ಪವಾಗಿ ಅವಳಿಗೆ ಅರ್ಥವಾಗತೊಡಗಿತು. ಆಹಾ! ಎಷ್ಟು ಅನುಮಾನ ಪ್ರಕೃತಿ? ಭಗವಂತನೇ ಈ ಮನೆಯಲ್ಲಿ ಮಾನ ಕಾಪಾಡಬೇಕು! ಎಂತೆಂತಹ ದುರ್ಭಾವನೆಗಳು ಇವರ ಮನಸಿನಲ್ಲಿ ತುಂಬಿರುವವು? ನನ್ನನ್ನಿಷ್ಟು ನೀಚಳೆಂದು ಬಗೆದರೇ? ಎಂದು ಯೋಚಿಸುತ್ತ ಅವಳು ಅನೇಕ ದಿನಗಳ ವರೆಗೆ ಅಳುತ್ತಿದ್ದಳು. 'ಇಂತಹ ಸಂದೇಹ ಇವರಿಗೇಕುಂಟಾಯಿತು? ಸಂಶಯ ಉಂಟಾಗುವಂತಹ ಯಾವ ವಿಷಯವನ್ನು ನನ್ನಲ್ಲಿ ಕಂಡರು? ಒಂದು ವೇಳೆ ಮಾನಸರಾಮನ ಹತ್ತಿರ ಪಾಠ ಕಲಿಯುವುದು, ಅವನ ಸಂಗಡ ನಕ್ಕು ಮಾತನಾಡುವುದು ಇದೇ ಇವರ ಸಂಶಯಕ್ಕೆ ಕಾರಣವಿರಬಹುದೇ? ಹಾಗಿದ್ದರೆ ಅವನ ಹತ್ತಿರ ಪಾಠ ಕಲಿಯುವುದನ್ನು ಬಿಟ್ಟುಬಿಡುವೆನು; ಮರೆತು ಸಹ ಅವನೊಡನೆ ಮಾತನಾಡುವುದಿಲ್ಲ; ಅವನ ಮುಖವನ್ನೂ ನೋಡುವುದಿಲ್ಲ!' ಎಂದು ಯೋಚಿಸಿಕೊಂಡಳು.

ವರೆ ಆ ತಪಸ್ಯೆಯು ಅವಳಿಗೆ ಅಸಾಧ್ಯವೆಂದು ತೋರಿತು. ಮಾನಸರಾಮನೊಡನೆ ನಕ್ಕು-ನುಡಿಯುವುದರಿಂದ ಅವಳ ವಿಲಾಸೆ ಕಲ್ಪನೆಗಳು ಉತ್ತೇಜಿತವಾಗುತ್ತಿದ್ದವು. ಹಾಗೂ ತೃಪ್ತಿಗೊಳ್ಳುತ್ತಿದ್ದವು. ಮಾತಿನಲ್ಲಿ

ಬಣ್ಣಿಸಲಸದಳವಾದ ಒಂದು ಬಗೆಯ ಸುಖವುಂಟಾಗುತ್ತಿತ್ತು. ಕುವಾಸನೆಯ್ತು ಛಾಯೆಯೂ ಅವಳ ಮನಸ್ಸಿನಲ್ಲಿರಲಿಲ್ಲ. ಮಾನಸರಾಮನಲ್ಲಿ ಕಲುಷಿತ ಪ್ರೇಮ ವಿಡಬೇಕೆಂಬ ಯೋಚನೆಯು ಸಹ ಅವಳಿಗುಂಟಾಗಿರಲಿಲ್ಲ. ಪ್ರತಿಯೊಂದು ಪ್ರಾಣಿಗೂ ತನ್ನ ಸಮವಯಸ್ಕ ಸಂಗಡಿಗರೊಡನೆ ನಕ್ಕು ನುಡಿಯುಬೇಕೆಂಬ ಒಂದು ನೈಸರ್ಗಿಕ ತೃಷ್ಣೆ ಇರುವುದಷ್ಟೇ? ಆ ತೃಷ್ಣೆಯ ತೃಪ್ತಿಗೆ, ಇದು ಅಜ್ಞಾತ ಸಾಧನೆಯಾಗಿತ್ತು! ಈಗ, ಈ ಅತೃಪ್ತ ತೃಷ್ಣೆಯು ನಿರ್ಮಲೆಯ ಹೃದಯವನ್ನು ದಹಿಸತೊಡಗಿತು. ಇದ್ದಕ್ಕಿದ್ದಂತೆ ಅವಳ ಮನವು ಯಾವುದೋ ಅಜ್ಞಾತ ವೇದನೆಯಿಂದ ವಿಕಲವಾಗುತ್ತಿತ್ತು. ಕಳೆದು ಹೋದ ಯಾವುದೋ ಅಜ್ಞಾತ ವಸ್ತುವಿಗಾಗಿ ಅವಳು ಅಲ್ಲಿ-ಇಲ್ಲಿ ಹುಡುಕುತ್ತಿದ್ದಳು. ಕುಳಿತಲ್ಲೇ ಕುಳಿತುಬಿಡುತ್ತಿದ್ದಳು. ಯಾವ ಕೆಲಸದಲ್ಲೂ ಮನಸ್ಸೇ ಇರುತ್ತಿರಲಿಲ್ಲ. ಆದರೆ ಮುನ್ಷಿಯವರು ಬಂದಾಗ ಮಾತ್ರ ಅವಳು ತನ್ನ ಆಸೆಗಳೆಲ್ಲವನ್ನೂ ನಿರಾಸೆಯಲ್ಲಿ ಮುಳುಗಿಸಿ, ಅವರೊಡನೆ ನಸುನಗುತ್ತ ಅಲ್ಲಿ ಇಲ್ಲಿನ ಮಾತುಗಳನ್ನಾಡುತ್ತಿದ್ದಳು.

ಮರುದಿನ ಮುನ್ಷಿಯವರು ಊಟಮಾಡಿ ಕಛೇರಿಗೆ ಹೊರಟು ಹೋದ ನಂತರ, ರುಕ್ಮಿಣಿಯು ನಿರ್ಮಲೆಯ ಬಳಿಗೆ ಬಂದು ಅವಳನ್ನು ಮನಬಂದಂತೆ ಬೈದಳು—ಈ ಮನೆಯಲ್ಲಿ ಮಕ್ಕಳ ಪಾಲನೆ-ಪೋಷಣೆ ಮಾಡಬೇಕೆಂದು ನಿನಗೆ ಗೊತ್ತಿರಲಿಲ್ಲವೆ? ಅಂದಬಳಿಕ ಇಲ್ಲಿ ಮದುವೆಮಾಡಿಕೊಳ್ಳುವುದಿಲ್ಲವೆಂದು ನಿಮ್ಮ ಮನೆಯವರೊಡನೆ ಏಕೆ ಹೇಳಿಬಿಡಲಿಲ್ಲ? ಪತಿಯ ಹೊರತು ಬೇರಾರೂ ಇಲ್ಲದ ಕಡೆ ಮದುವೆ ಮಾಡಿಕೊಳ್ಳಬೇಕಾಗಿತ್ತು? ಅವನಾದರೆ ಈ ನಿನ್ನ ಶೃಂಗಾರ ಸೌಂದರ್ಯಗಳನ್ನು ಕಂಡು ಸಂತುಷ್ಟನಾಗುತ್ತಿದ್ದನು; ತನ್ನ ಭಾಗ್ಯವನ್ನು ಕೊಂಡಾಡಿಕೊಳ್ಳುತ್ತಿದ್ದನು. ಇವನಾದರೋ ವೃದ್ಧ. ನಿನ್ನ ರೂಪಲಾವಣ್ಯ, ಹಾವಭಾವಗಳು ಇವನಿಗೇನು ಬೇಕಿದ್ದೀತು? ಈ ಬಾಲಕರ ಪಾಲನೆ-ಪೋಷಣೆಗೋಸ್ಕರ ನಿನ್ನನ್ನು ವಿವಾಹವಾಗಿರುವನು; ಭೋಗ-ವಿಲಾಸಗಳಿಗೋಸ್ಕರವಲ್ಲ!—ಎಂದು ಮುಂತಾಗಿ ನಿರ್ಮಲೆಯ ನೊಂದ ಮನಸನ್ನು ಮತ್ತಷ್ಟು ನೋಯಿಸಿದಳು. ಆದರೆ ನಿರ್ಮಲೆಯು ತುಟಿ ಪಿಟಿಕ್ಕೆನ್ನಲಿಲ್ಲ. ತನ್ನ ಪತಿಯ ಇಚ್ಛೆಯಂತೆಯೇ ತಾನು ನಡೆಯುತ್ತಿರುವೆನೆಂದು ಹೇಳಿದರೆ, ಮನೆಯಲ್ಲಿ ಜಗಳ-ಕದನಕ್ಕೆ ಕಾರಣವಾಗುವುದು. ತನ್ನ ತಪ್ಪೆನ್ನು

ಒಪ್ಪಿಕೊಂಡು ತಿದ್ದಿಕೊಳ್ಳೋಣವೆಂದರೆ, ಅದರ ಪರಿಣಾಮವು ಏನಾಗುವುದೋ ಎಂಬ ಭಯ. ಸಾಮಾನ್ಯವಾಗಿ ಅವಳು ಸ್ಪಷ್ಟವಾದಿನಿ. ಸತ್ಯವಾದ ಮಾತನ್ನು ಹೇಳಲು ಸಂಕೋಚ ಅಥವಾ ಭಯಪಡುತ್ತಿರಲಿಲ್ಲ. ಆದರೆ, ಈ ಸೂಕ್ಷ್ಮ ಸಮಯದಲ್ಲಿ ಅವಳು ಸುಮ್ಮನಿರಬೇಕಾಯಿತು. ಅದರ ಹೊರತು ಬೇರೆ ಯಾವ ಉಪಾಯವೂ ಇರಲಿಲ್ಲ. ಮಾನಸರಾಮನು ಅತ್ಯಂತ ವಿರಕ್ತ ಹಾಗೂ ಉದಾಸೀನನಾಗಿರುವುದನ್ನೂ ಅವನು ದಿನೇ ದಿನೇ ದುರ್ಬಲನಾಗುತ್ತಿರುವುದನ್ನೂ ನೋಡುತ್ತಿದ್ದಳು. ಆದರೆ, ಅವಳೇನೂ ಹೇಳುವಂತಿರಲಿಲ್ಲ, ಏನೂ ಮಾಡುವಂತಿರಲಿಲ್ಲ! ಕಳ್ಳನ ಮನೆಯಲ್ಲೇ ಕಳ್ಳತನವಾದರೆ ಅವನ ಸ್ಥಿತಿಯು ಹೇಗಿರುವುದೋ, ನಿರ್ಮಲೆಯ ಸ್ಥಿತಿಯೂ ಈಗ ಹಾಗೆಯೇ ಆಗಿತ್ತು!

## ಎಂಟನೆಯ ಪರಿಚ್ಛೇದ

ಮನುಷ್ಯನ ಮನಸಿಗೆ ವಿರುದ್ಧವಾಗಿ ಏನಾದರೊಂದು ವಿಷಯ ನಡೆದಾಗಲೇ ಅವನಿಗೆ ದುಃಖವಾಗುವುದು! ನಿರ್ಮಲೆಯು ತನ್ನ ವಿಷಯವಾಗಿ ದೂರುವಳೆಂದು ಮಾನಸರಾಮನ ಮನಸಿನಲ್ಲಿರಲಿಲ್ಲ. ಇದರಿಂದ ಅವನಿಗೆ ಅಪಾರ ವೇದನೆಯುಂಟಾಯಿತು. ಇವರು ನನ್ನನ್ನೇಕೆ ದೂರುವರು? ಇವರ ಮನಸಿನಲ್ಲಿರುವುದೇನು? ತನ್ನ ಪತಿಯ ಸಂಪಾದನೆಯಲ್ಲಿ ನನ್ನ ಓದುಬರೆಹ ಊಟಉಡಿಗೆಗಳಿಗಾಗಿ ಖರ್ಚಾಗುವುದೆಂದೇ? ನಾನು ಮನೆ ಬಿಟ್ಟು ಹೋದರೆ ಆ ಖರ್ಚು ಉಳಿಯುವುದೆಂದು ಯೋಚಿಸುವರೇ? ಅವರು ನನ್ನ ಸಂಗಡ ಯಾವಾಗಲೂ ಪ್ರಸನ್ನಚಿತ್ತರಾಗಿಯೇ ಇರುವರು. ಅವರ ಬಾಯಿಂದ ಕಟು ಶಬ್ದಗಳನ್ನು ನಾನೆಂದೂ ಕೇಳಿಲ್ಲ. ಇದೆಲ್ಲವೂ ತೋರಿಕೆ ಇರಬಹುದೇ? ಇರಬೇಕು! ಹಕ್ಕಿಯನ್ನು ಬಲೆಗೆ ಹಾಕಿಕೊಳ್ಳುವ ಮುನ್ನ ಬೇಡನು ಧಾನ್ಯ ಚೆಲ್ಲುವುದಿಲ್ಲವೇ? ಆಹಾ! ಈ ಮಾತೃಸ್ನೇಹವು ಕೇವಲ ನನ್ನ ನಿರ್ವಾಸನದ ಭೂಮಿಕೆಯೆಂದು ತಿಳಿಯದೆ ಹೋದೆ!

ಅದಿರಲಿ, ನಾನು ಇಲ್ಲಿರುವುದು ಅವರಿಗೇಕಿಷ್ಟು ಅಸಹ್ಯವಾಯಿತು? ಅವರ ಪತಿಯಾದವರು ನನ್ನ ಪಿತನಲ್ಲವೇ? ಪಿತ–ಪುತ್ರರ ಸಂಬಂಧವು

ಪತಿಪತ್ನಿಯರ ಸಂಬಂಧದಷ್ಟೇ ಘನಿಷ್ಠವಲ್ಲವೇ ? ಅವರ ಸಂಪೂರ್ಣ ಆಧಿಪತ್ಯಕ್ಕಾಗಿ ನನಗೆ ಈರ್ಷ್ಯೆಯಿಲ್ಲ ! ಅವರೇನು ಬೇಕಾದರೂ ಮಾಡಲಿ, ನಾನೇನೂ ಹೇಳುವಂತಿಲ್ಲ. ಆದರೆ, ನನ್ನನ್ನು ಪಿತೃ-ಸ್ನೇಹದಿಂದ ವಂಚಿಸುವರೇಕೆ ? ತಮ್ಮ ಸಾಮ್ರಾಜ್ಯದಲ್ಲಿ ನನಗೊಂದು ಅಂಗುಲ ಭೂಮಿಯನ್ನು ಕೊಡಲು ಅವರಿಗೆ ಇಚ್ಛೆ ಇಲ್ಲವೆ ? ತಾವು ಮಹಲಿನಲ್ಲಿದ್ದು, ನಾನು ಮರದ ನೆರಳಲ್ಲಿರುವುದನ್ನು ನೋಡಿ ಸಹಿಸರೆ ?

ಹೌದು, ಇವನು ದೊಡ್ಡವನಾಗಿ ಪತಿಯ ಆಸ್ತಿಗೆ ಹಕ್ಕುದಾರನಾಗುವನೆಂದು ತಿಳಿದಿರಬಹುದು ! ಆದ್ದರಿಂದಲೇ ನನ್ನನ್ನು ಈಗಿನಿಂದ ಹೊರಗಟ್ಟುತ್ತಿರುವರು ! ನನ್ನ ವಿಷಯದಲ್ಲಿ ಈ ಸಂದೇಹ ಬೇಡವೆಂದು ನಾನು ಹೇಗೆ ಅವರಿಗೆ ನಂಬಿಕೆ ಹೇಳಲಿ ? ನಾನು ವಿಷವನ್ನು ತಿಂದಾದರೂ ಪ್ರಾಣ ಬಿಡುವೆನು, ಅವರ ಅಹಿತ ಮಾಡಲಾರೆ ! ಇಷ್ಟು ಕಷ್ಟಗಳನ್ನು ಸಹಿಸಿದರೂ ಸರಿಯೆ, ಅವರ ಎದೆ ಶೂಲವಾಗಲಾರೆ !—ಎಂದು ಅವರಿಗೆ ಹೇಗೆ ತಿಳಿಸಲಿ ? ತಂದೆಯವರು ನಮಗೆ ಜನ್ಮವಿತ್ತರು. ಈಗಲೂ ಅವರಿಗೆ ನಮ್ಮ ಮೇಲಿನ ಮಮತೆ ಕಡಿಮೆಯಿಲ್ಲ. ಆದರೂ, ತಂದೆಯವರು ಎಂದು ಅವರನ್ನು ವಿವಾಹವಾದರೋ ಅಂದೇ ನಮ್ಮನ್ನು ಹೃದಯದಿಂದ ಹೊರದೂಡಿದರೆಂಬುದನ್ನು ನಾನು ಅರಿಯಲಾರೆನೇ ? ಈಗ ನಾವು ಅನಾಥರಂತೆ ಈ ಮನೆಯಲ್ಲಿ ಬಿದ್ದಿರಬೇಕೇ ಹೊರತು, ನಮ್ಮದಾವ ಅಧಿಕಾರವೂ ಇಲ್ಲ. ಯಾವುದೋ ಪೂರ್ವ–ಪುಣ್ಯದ ಫಲದಿಂದ ಇತರ ಅನಾಥರಿಗಿಂತ ಸ್ವಲ್ಪ ಉತ್ತಮರಾಗಿರುವೆವು; ಆದರೂ, ಅನಾಥರೇ ! ಅಮ್ಮನು ಎಂದು ಪರಲೋಕವನ್ನೈದಿದಳೋ, ಅಂದೇ ನಾವು ಅನಾಥರಾದೆವು. ಈ ವಿವಾಹದಿಂದ ನಮ್ಮ ಅನಾಥತೆಯು ಸಂಪೂರ್ಣವಾಯಿತು ! ಮೊದ-ಮೊದಲು ನಾನು ಅವರೊಡನೆ ಹೆಚ್ಚು ಸಂಬಂಧವನ್ನೇ ಇಟ್ಟುಕೊಂಡಿರಲಿಲ್ಲ; ಆ ದಿನಗಳಲ್ಲೇ ಅವರು ತಂದೆಯವರೊಡನೆ ನನ್ನನ್ನು ದೂರಿದ್ದರೆ, ನನಗಿಷ್ಟು ದುಃಖವಾಗುತ್ತಿರಲಿಲ್ಲ. ಈ ಆಘಾತಕ್ಕೆ ಆಗ ನಾನು ಸಿದ್ಧನಾಗಿಯೇ ಇದ್ದೆ ! ಈ ಪ್ರಪಂಚದಲ್ಲಿ ಕೂಲಿ ಮಾಡಿಕೊಂಡಾದರೂ ಜೀವಿಸಿರಬಲ್ಲೆ. ಈ ರೀತಿ ಮಾಡುವುದಕ್ಕಾಗಿಯೇ ನನ್ನನಷ್ಟು ಆದರಿಸುತ್ತಿದ್ದರೇ ? ಊಟಕ್ಕೆ ಹೋಗಲು ತುಸು ತಡವಾದರೆ ಮೇಲಿಂದ-ಮೇಲೆ ಹೇಳಿ ಕಳುಹಿಸುತ್ತಿದ್ದರೇ ? ಬೆಳಿಗ್ಗೆ-ಮಧ್ಯಾಹ್ನ ತಿಂಡಿಗಾಗಿ ಹೊಸ ಹಲ್ವವನ್ನು

ತಯಾರಿಸಿ ಕೊಡುತ್ತಿದ್ದರೇ? 'ನಿನಗೆ ಹಣ ಬೇಕಾಗಿದ್ದರೆ ಕೇಳಲು ಹಿಂಜರಿಯಬೇಡ' ಎಂದು ಆಗಾಗ ಹೇಳುತ್ತಿದ್ದರೇ? ಇದಕ್ಕಾಗಿಯೇ ೧೬೦ ರೂಪಾಯಿಗಳ ಈ ಗಡಿಯಾರವನ್ನು ತರಿಸಕೊಟ್ಟರೇ?

ನನ್ನನ್ನು ಆಲೆ-ಪೋಕನೆಂದು ಏಕೆ ದೂರಿದರು? ಬೇರೆ ಯಾವ ದೂರೂ ಅವರಿಗೆ ತೋರಲಿಲ್ಲವೇ? ನಾನು ಎಲ್ಲಿ ಅಲೆಯುವುದನ್ನು ಕಂಡಿರುವರು? ನಾನು ಮನಸಿಟ್ಟು ಓದುವುದಿಲ್ಲವೆಂದಾಗಲೀ ಆಗಾಗ ಹಣ ಕೇಳುತ್ತಿರುವೆನೆಂದಾಗಲೀ ದೂರಬಹುದಾಗಿತ್ತು. ಈ ಒಂದು ದೂರೇ ಅವರ ಮನಸಿಗೇಕೆ ಬಂತು? ನನ್ನ ಮೇಲೆ ಪ್ರಯೋಗಿಸಬಹುದಾದ ಕಠೋರ ಆಘಾತವು ಇದೊಂದೇ ಎಂದು ತಿಳಿದರೇ? ಮೊದಲನೆಯ ಬಾರಿಗೇ ಅಗ್ನಿಬಾಣ ಪ್ರಯೋಗಿಸಿಬಿಟ್ಟರು. ನನ್ನನ್ನು ಹಾಸ್ಟಲಿನಲ್ಲಿರಿಸುವುದು ಕೇವಲ ಒಂದು ನೆಪ. ಒಂದೆರಡು ತಿಂಗಳ ನಂತರ ಅಲ್ಲಿನ ಖರ್ಚು ಕೊಡುವುದನ್ನೂ ನಿಲ್ಲಿಸಿಬಿಡುವರು; ನಾನು ಇದ್ದರೇನು, ಸತ್ತರೇನು? ಈ ಪ್ರೇರಣೆಯು ಅವರದೇ ಎಂದು ನನಗೆ ತಿಳಿದಿದ್ದರೆ, ಕಷ್ಟಪಟ್ಟಾದರೂ ಹಾಸ್ಟಲಿನಲ್ಲಿ ಸ್ಥಳ ಸಿಗುವಂತೆ ಮಾಡಿಕೊಳ್ಳುತ್ತಿದ್ದೆ! ನೌಕರರ ಕೊಠಡಿಯಲ್ಲಿ ಸ್ಥಳವಿಲ್ಲವೇ? ಅಥವಾ ವರಾಂಡಾದಲ್ಲಿ ಬೇಕಾದಷ್ಟು ಸ್ಥಳವಿಲ್ಲವೇ? ಆಗಲಿ, ಬೆಳಗಿನ ವರೆಗೆ ಇನ್ನೂ ಹೊತ್ತಿರುವುದು. ಸ್ನೇಹ-ಮಮತೆ ಇಲ್ಲದ ಮೇಲೆ ಕೇವಲ ಹೊಟ್ಟೆಹೊರೆಯುವುದಕ್ಕಾಗಿ ಈ ಮನೆಯಲ್ಲಿರುವುದು ನಾಚಿಕೆಗೇಡು! ಇನ್ನಿದು ನನ್ನ ಮನೆಯಲ್ಲ! ಇಲ್ಲೇ ಹುಟ್ಟಿದೆನು, ಇಲ್ಲೇ ಬೆಳೆದೆನು, ಇಲ್ಲೇ ಆಟವಾಡಿದೆನು; ಆದರೆ ಈಗ ಇದು ನನ್ನದಲ್ಲ! ತಂದೆಯವರೂ ನನ್ನವರಲ್ಲ; ನಾನವರ ಪುತ್ರನಾದರೂ ಅವರು ನನ್ನ ಪಿತನಲ್ಲ! ಪ್ರಪಂಚದಲ್ಲಿ ಎಲ್ಲಕ್ಕೂ ಮಿಗಿಲಾದುದು ಮಮತೆ; ಮಮತೆ ಇಲ್ಲದೆಡೆಯಲ್ಲಿ ಏನೂ ಇಲ್ಲ! ಹಾ, ಅಮ್ಮಾ! ನೀನೆಲ್ಲಿರುವೆ?

ಹೀಗೆಂದು ಯೋಚಿಸುತ್ತ ಮಾನಸರಾಮನು ಅಳತೊಡಗಿದನು. ಮಾತೃಸ್ನೇಹದ ಪೂರ್ವಸ್ಮೃತಿಗಳು ಜಾಗೃತವಾದಷ್ಟೂ ದುಃಖ ಉಕ್ಕಿ ಬರುತ್ತಿತ್ತು. ಕಂಗಳು ಕಂಬನಿದುಂಬಿದವು. ತನ್ನ ತಾಯಿಯು ನಿಂತು ಕೇಳುತ್ತಿರುವಳೋ ಎಂಬಂತೆ ಅನೇಕ ಬಾರಿ ಅಮ್ಮಾ, ಅಮ್ಮಾ, ಎಂದು ಕೂಗಿಕೊಂಡನು. ಮಾತೃಹೀನತೆಯ ದುಃಖವನ್ನು ಅವನು ಅನುಭವಿಸಿದುದು ಇಂದೇ ಮೊದಲು!

ಅವನು ಆತ್ಮಾಭಿಮಾನಿ, ಸಾಹಸಿ; ಆದರೂ ಇದುವರೆಗೆ ಸುಖದಲ್ಲೇ ಲಾಲನೆ ಪಾಲನೆ ಪಡೆದಿದ್ದನಾದ್ದರಿಂದ, ಇಂದು ತಾನು ನಿರಾಶ್ರಿತನೆಂದು ತಿಳಿದನು.

ರಾತ್ರಿ ಹತ್ತು ಗಂಟೆಯ ಸಮಯ. ಮುನ್ಷಿಯವರು ಯಾವುದೋ ಮದುವೆಯೂಟಕ್ಕೆ ಹೋಗಿದ್ದರು. ಅಡಿಗೆಯವಳು ಮಾನಸರಾಮನನ್ನು ಊಟಕ್ಕೆ ಕರೆಯಲು ಎರಡು ಬಾರಿ ಬಂದು ಹೋದಳು. 'ನನಗೆ ಹಸಿವೆಯಿಲ್ಲ, ನಾನು ಊಟ ಮಾಡುವುದಿಲ್ಲ. ನನ್ನನ್ನು ಸುಮ್ಮನೆ ಪೀಡಿಸಬೇಡ' ಎಂದನು. ಆದ್ದರಿಂದ ನಿರ್ಮಲೆಯು ಅವಳನ್ನು ಪುನಃ ಕರೆಯಲು ಕಳುಹಿದಾಗ, ಹೋಗ ಲಿಲ್ಲ. 'ಅವರು ನಾನು ಕರೆದರೆ ಬರುವುದಿಲ್ಲ, ಬಹೂಜೀ!'* ಎಂದಳು.

ನಿರ್ಮಲೆ—ಏಕೆ ಬರುವುದಿಲ್ಲ? ಅಡಿಗೆ ಆರಿಹೋಗುವುದು; ಒಂದೆರಡು ತುತ್ತನ್ನು ತಿಂದು ಹೋಗೆಂದು ಹೇಳು!

ಅಡಿಗೆಯವಳು—ಎಲ್ಲವನ್ನೂ ಹೇಳಿದೆನು; ಅವರು ಬರುವುದಿಲ್ಲ.

ನಿರ್ಮಲೆ—ನಾನು ಕಾದುಕೊಂಡು ಕುಳಿತಿರುವೆನೆಂದು ಹೇಳಿದೆಯಾ?

ಅಡಿಗೆಯವಳು—ಇಲ್ಲ, ನಾನು ಆ ಮಾತನ್ನು ಹೇಳಲಿಲ್ಲ. ಸುಳ್ಳೇಕೆ ಹೇಳಲಿ?

ನಿರ್ಮಲೆ—ಹಾಗಿದ್ದರೆ ಹೋಗಿ ಈ ಮಾತನ್ನು ಹೇಳು! 'ಅವರು ಕಾದುಕೊಂಡು ಕುಳಿತಿರುವರು. ನೀವು ಊಟ ಮಾಡದಿದ್ದರೆ ಅಡಿಗೆಯನ್ನೆತ್ತಿ ರಿಸಿ ಮಲಗಿಕೊಳ್ಳುವರಂತೆ' ಎಂದು ಹೇಳು. ಇದೊಂದೇ ಬಾರಿ ಹೇಳು. ಬಲಾತ್ಕಾರ ಮಾಡಿ, ಹೇಗಾದರೂ ಕರೆದುಕೊಂಡು ಬಾ!

ಅಡಿಗೆಯವಳು ಮುಖ ಗಂಟಿಕ್ಕಿಕೊಂಡು ಮತ್ತೊಮ್ಮೆ ಹೋದಳು. ಒಂದು ಕ್ಷಣದಲ್ಲೇ ಹಿಂತಿರುಗಿ ಹೇಳಿದಳು—ಅವರು ಅಳುತ್ತಿರುವರು, ಬಹೂಜೀ! 'ಯಾರಾದರೂ ಏನಾದರೂ ಅಂದರೇ?' ನಿರ್ಮಲೆಯು ಗಾಬರಿಗೊಂಡು ಒಂದೆರಡು ಹೆಜ್ಜೆ ಮುಂದಿಟ್ಟಳು. ಮಗನು ಭಾವಿಯಲ್ಲಿ ಬಿದ್ದ ನೆಂಬ ಸುದ್ದಿಯನ್ನು ಕೇಳಿದ ತಾಯಿಯಂತಾಯಿತು ಅವಳ ಸ್ಥಿತಿ! ಅಡಿಗೆ ಯವಳನ್ನು ಕೇಳಿದಳು—ಅಳುತ್ತಿರುವನೇ? ಏಕೆಂದು ನೀನು ಕೇಳಲಿಲ್ಲವೇ?

* ಉತ್ತರ ಹಿಂದುಸ್ಥಾನದಲ್ಲಿ ಮನೆಯ ಯಜಮಾನಿಯನ್ನು 'ಬಹೂಜೀ' ಎಂದು ಕರೆಯುವ ವಾಡಿಕೆಯುಂಟು.

ಅಡಿಗೆಯವಳು—ಇಲ್ಲ, ನಾನು ಕೇಳಲಿಲ್ಲ!

ಅವನು ಅಳುತ್ತಿರುವನು! ಈ ನಿಸ್ತಬ್ಧ ರಾತ್ರಿಯಲ್ಲಿ ಒಬ್ಬನೇ ಕುಳಿತು, ಅಳುತ್ತಿರುವನು! ತಾಯಿಯ ಜ್ಞಾಪಕ ಬಂದಿರಬಹುದು! ಅವನಿಗೆ ಹೇಗೆ ಹೋಗಿ ಹೇಳಲಿ? ಯಾವ ರೀತಿ ತಿಳಿಸಲಿ? ಈ ಮನೆಯಲ್ಲಿ ಸೀನುವುದು ಸಹ ಕಷ್ಟವಾಗಿದೆ! ಭಗವಂತ! ನಾನು ಮರೆತಾದರೂ ಅವನನ್ನು ಅಂದಿದ್ದರೆ ನೀನೇ ಸಾಕ್ಷಿ! ನಾನೇನು ಮಾಡಲಿ? ಇವಳೇ ತಂದೆಯವರೊಡನೆ ನನ್ನನ್ನು ದೂರಿರುವಳೆಂದು ಅವನು ತಿಳಿದಿರಬಹುದು! ಅವನ ವಿಷಯವಾಗಿ ಯಾವ ದೂರನ್ನೂ ನಾನು ಹೇಳಿಲ್ಲವೆಂದು ಅವನಿಗೆ ಹೇಗೆ ನಂಬಿಕೆ ಹೇಳಲಿ? ದೇವ ಕುಮಾರನಂತಹ ಈ ಸುಚರಿತ್ರ ಯುವಕನನ್ನು ದೂರಿದರೆ, ನಾನು ನಿಜವಾಗಿಯೂ ರಾಕ್ಷಸಿಯೇ ಅಲ್ಲವೇ?

ಮಾನಸರಾಮನ ಸ್ವಾಸ್ಥ್ಯವು ದಿನದಿನಕ್ಕೂ ಹದಗೆಡುತ್ತಿತ್ತು. ದಿನೇ ದಿನೇ ದುರ್ಬಲನಾಗುತ್ತಿದ್ದನು. ಅವನ ಮುಖದ ನಿರ್ಮಲ ಕಾಂತಿಯು ಮಲಿನವಾಗುತ್ತಿತ್ತು. ಅವನ ಸಹಾಸ್ಯ ವದನವು ಸಂಕುಚಿತವಾಗುತ್ತಿತ್ತು. ಇದೆಲ್ಲವನ್ನೂ ನಿರ್ಮಲೆಯು ನೋಡುತ್ತಿದ್ದಳು. ಇದರ ಕಾರಣವೂ ಅವಳಿಗೆ ತಿಳಿಯದೆ ಇರಲಿಲ್ಲ! ಆದರೆ ಈ ವಿಷಯವಾಗಿ ಪತಿಯೊಡನೆ ಏನೂ ಹೇಳುವಂತಿರಲಿಲ್ಲ. ಇದೆಲ್ಲವನ್ನೂ ನೋಡಿ ನೋಡಿ ಅವಳ ಹೃದಯವು ಚೂರು ಚೂರಾಗುತ್ತಿತ್ತು; ಆದರೂ ಅವಳು ಮಾತನಾಡುವಂತಿರಲಿಲ್ಲ! ಒಮ್ಮೊಮ್ಮೆ ಅವಳು ಯೋಚಿಸುವಳು—'ಒಂದು ಸಣ್ಣ ಮಾತಿಗಾಗಿ ಮಾನಸರಾಮನು ಏಕಿಷ್ಟು ದುಃಖಪಡುವನು? ಇವರು ಅವನನ್ನು ಅಲೆಪೋಕನೆಂದ ಮಾತ್ರಕ್ಕೆ ಅವನು ನಿಜವಾಗಿಯೂ ಅಲೆಪೋಕನಾದನೇ? ನನ್ನ ವಿಷಯವಾದರೋ ಬೇರೆ! ಅವರ ಒಂದು ಸಣ್ಣ ಸಂಶಯವು ಸಹ ನನ್ನ ಸರ್ವನಾಶ ಮಾಡಬಲ್ಲದು. ಆದರೆ ಅವನು ಇಂತಹ ಮಾತುಗಳನ್ನೇಕೆ ಮನಸ್ಸಿಗೆ ಹಚ್ಚಿಕೊಳ್ಳುವನು?

ಅವನ ಬಳಿಗೆ ಹೋಗಿ ಸಮಾಧಾನ ಹೇಳಿ ಊಟಕ್ಕೆ ಕರೆತರಲೇ? ಇಲ್ಲದಿದ್ದರೆ ರಾತ್ರಿಯೆಲ್ಲಾ ಹಾಗೆಯೇ ಹಸಿದುಕೊಂಡು ಇದ್ದುಬಿಡುವನು—ಎಂದು ಅವಳ ಮನಸು ಕಾತರಗೊಂಡಿತು. ಹಾ! ಈ ಉಪದ್ರವಗಳ ಮೂಲವೇ ನಾನು! ನಾನು ಬರುವ ಮುನ್ನ ಈ ಮನೆಯಲ್ಲಿ ಶಾಂತಿಯ ಸಾಮ್ರಾಜ್ಯ ನೆಲೆಸಿತ್ತು. ತಂದೆಯು ಮಕ್ಕಳನ್ನು ಆದರಿಸುತ್ತಿದ್ದರು; ಮಕ್ಕಳು

ತಂದೆಯನ್ನು ಪ್ರೀತಿಸುತ್ತಿದ್ದರು! ನಾನು ಬರುತ್ತಲೇ ಈ ಉಪದ್ರವಗಳೆಲ್ಲಾ ಉದಯಿಸಿದವೇ? ಇದರ ಪರಿಣಾಮ ಏನಾಗುವುದು? ಭಗವಂತ! ನನಗೆ ಸಾವನ್ನೂ ಏಕೆ ಕೊಡಲೊಲ್ಲೆ? ಪಾಪ, ಊಟಮಾಡದೆ ಹುಡುಗನು ಹಸಿದಿರುವನಲ್ಲಾ? ಬೆಳಿಗ್ಗೆಯೂ ಒಂದೆರಡು ತುತ್ತು ತಿಂದು ಎದ್ದಿದ್ದನು. ಅವನು ತಿನ್ನುವುದಾದರೂ ಎಷ್ಟು? ಎರಡು ಮೂರು ವರ್ಷದ ಮಕ್ಕಳಷ್ಟು ಸಹ ತಿನ್ನುವುದಿಲ್ಲ!

ಎಂದು ಮುಂತಾಗಿ ಯೋಚಿಸಿ ನಿರ್ಮಲೆಯು ಮುಂದೆ ನಡೆದಳು! ಪತಿಯ ಇಚ್ಛೆಗೆ ವಿರುದ್ಧವಾಗಿ ನಡೆದಳು! ಬಾಂಧವ್ಯದಲ್ಲಿ ಪುತ್ರನೆನಿಸಿಕೊಂಡ ಅವನನ್ನು ಸಂತೈಸಹೋಗಲು ಅವಳ ಹೃದಯವು ಕಂಪಿಸುತ್ತಿತ್ತು!

ಮೊದಲವಳು ರುಕ್ಮಿಣಿಯ ಕೊಠಡಿಯ ಕಡೆ ನೋಡಿದಳು; ಅವರು ಊಟಮಾಡಿ ಮಲಗಿದ್ದರು. ನಂತರ ಹೊರಗಿನ ಕೊಠಡಿಯ ಕಡೆಗೆ ಹೋದಳು; ಅಲ್ಲೂ ನಿಃಶಬ್ದವಾಗಿತ್ತು. ಮುನ್ಷಿಯವರು ಇನ್ನೂ ಬಂದಿರಲಿಲ್ಲ. ಇದೆಲ್ಲವನ್ನೂ ನೋಡಿಕೊಂಡು ಅವಳು ಮಾನಸರಾಮನ ಕೊಠಡಿಯ ಎದುರಿಗೆ ಬಂದು ನಿಂತಳು. ಬಾಗಿಲು ತೆರೆದಿತ್ತು; ಮಾನಸರಾಮನು ಒಂದು ಪುಸ್ತಕವನ್ನು ಮೇಜಿನಮೇಲಿಟ್ಟು, ತಲೆಯನ್ನು ತಗ್ಗಿಸಿ ಕುಳಿತಿದ್ದನು—ಶೋಕ ಚಿಂತೆಗಳ ಸಜೀವ ಮೂರ್ತಿಯೋ ಎಂಬಂತೆ! ನಿರ್ಮಲೆಯು ಕೂಗಲೆತ್ನಿಸಿದಳು. ಆದರೆ ಬಾಯಿಂದ ಮಾತು ಹೊರಡದಾಯಿತು!

ಅಕಸ್ಮಾತ್ ಮಾನಸರಾಮನು ತಲೆಯೆತ್ತಿ ಬಾಗಿಲ ಕಡೆಗೆ ನೋಡಿದನು. ಕತ್ತಲೆಯ ರಾತ್ರಿಯಲ್ಲಿ ಅವನಿಗೆ ನಿರ್ಮಲೆಯನ್ನು ಗುರುತಿಸಲಾಗಲಿಲ್ಲ. ಬೆಚ್ಚಿ ನುಡಿದನು—ಯಾರದು?

ನಿರ್ಮಲೆಯು ನಡುಗುವ ದನಿಯಲ್ಲಿ ನುಡಿದಳು—ನಾನು. ಇಷ್ಟು ರಾತ್ರಿಯಾಯಿತು! ಊಟಕ್ಕೇಕೆ ಏಳಲಿಲ್ಲ?

ಮಾನಸರಾಮನು ಮುಖ ತಿರುಗಿಸಿ ಹೇಳಿದನು— ನನಗೆ ಹಸಿವೆ ಇಲ್ಲ.

ನಿರ್ಮಲೆ—ಈ ಮಾತನ್ನು ಮೂರು ಬಾರಿ ಅಡಿಗೆಯವಳಿಂದ ಕೇಳಿಯಾಯಿತು.

ಮಾನಸರಾಮ—ಹಾಗಿದ್ದರೆ, ನಾಲ್ಕನೆಯ ಬಾರಿ ನನ್ನ ಬಾಯಿಂದ

ಕೇಳಿಕೊಳ್ಳಿ. (ವ್ಯಂಗ್ಯದ ನಗುವನ್ನು ನಕ್ಕು) ಬಹಳ ಹಸಿವೆಯಾದರೆ ಬರದೆ ಮತ್ತೆಲ್ಲಿ ಹೋಗುವೆನು? ಎಂದನು.

ಹೀಗೆಂದು ಆವನು ಕೊಠಡಿಯ ಬಾಗಿಲನ್ನು ಮುಚ್ಚಹೋದನು. ಆದರೆ ನಿರ್ಮಲೆಯು ಬಾಗಿಲನ್ನು ತಡೆದು ಕೊಠಡಿಯೊಳಕ್ಕೆ ಬಂದಳು. ಮತ್ತು ಮಾನಸರಾಮನ ಕೈಗಳನ್ನು ಹಿಡಿದು, ಸಜಲ ನೇತ್ರಗಳೊಡನೆ ಮೃದು ಮಧುರ ಸ್ವರದಿಂದ ನುಡಿದಳು—ನಾನು ಹೇಳಿದ್ದಕ್ಕಾಗಿ, ಒಂದೆರಡು ತುತ್ತು ತಿಂದು ಹೋಗು! ನೀನು ಊಟ ಮಾಡದಿದ್ದರೆ ನಾನೂ ಹಾಗೆಯೇ ಮಲಗಿ ಕೊಳ್ಳುವೆನು! ಎರಡೇ ಎರಡು ತುತ್ತು ತಿನ್ನು! ರಾತ್ರಿಯೆಲ್ಲಾ ನಾನೂ ಉಪ ವಾಸವಿರುವಂತೆ ಮಾಡಬಯಸುವೆಯಾ?

ಮಾನಸರಾಮನು ಉಭಯ ಸಂಕಟಕ್ಕೀಡಾದನು. ಇದುವರೆಗೂ ಊಟ ಮಾಡದೆ, ನನ್ನ ಹಾದಿಕಾಯುತ್ತ ಕುಳಿತಿರುವರು! ಇವರನ್ನು ಸ್ನೇಹ, ವಾತ್ಸಲ್ಯ ಮತ್ತು ವಿನಯಗಳ ದೇವಿ ಎನ್ನಲೇ? ಅಥವಾ ಈರ್ಷೆ ಮತ್ತು ಅಮಂಗಳದ ಮಾಯಾವಿನೀ ಮೂರ್ತಿ ಎನ್ನಲೇ? ಅವನಿಗೆ ತನ್ನ ಮಾತೆಯ ನೆನಪುಂಟಾಯಿತು. ಅವನು ಕೋಪಗೊಂಡಾಗ ಅವರೂ ಇದೇ ರೀತಿ ಸಮಾ ಧಾನ ಹೇಳುತ್ತಿದ್ದರು; ಮತ್ತು ಅವನು ಎದ್ದು ಬರುವ ವರೆಗೂ ಆ ಸ್ಥಳ ಬಿಟ್ಟು ಕದಲುತ್ತಿರಲಿಲ್ಲ! ನಿರ್ಮಲೆಯ ಈ ವಿನಯವನ್ನು ಅಸ್ವೀಕರಿಸುವುದು ಅವ ನಿಂದಾಗಲಿಲ್ಲ. ಅವನೆಂದನು—ನನಗೋಸ್ಕರ ನಿಮಗಿಷ್ಟು ತೊಂದರೆಯಾದು ದಕ್ಕಾಗಿ ದುಃಖಿಸುವೆನು. ನೀವು ನನ್ನ ಹಾದೀ ಕಾಯುತ್ತ ಹಸಿದು ಕುಳಿತಿರುವಿ ರೆಂದು ತಿಳಿದಿದ್ದರೆ, ಆಗಲೇ ಬಂದು ಊಟಮಾಡುತ್ತಿದ್ದೆ!

ನಿರ್ಮಲೆಯು ತಿರಸ್ಕಾರ ಭಾವದಿಂದ ನುಡಿದಳು—ನೀನು ಉಪವಾಸ ವಿರುವಾಗ ನಾನು ಊಟಮಾಡಿ ಮಲಗಿದೆನೆಂದು ಹೇಗೆ ತಿಳಿದೆ? ವಿಮಾತೆ ಯಾದ ಮಾತ್ರಕ್ಕೆ ಅಷ್ಟು ಸ್ವಾರ್ಥಿಯಾಗುವೆನೇ?

ಆಹೊತ್ತಿಗೆ ಸರಿಯಾಗಿ ಹೊರಗಿನ ಕೊಠಡಿಯಲ್ಲಿ ಮುನ್ಷಿಯವರು ಕೆಮ್ಮುವ ಧ್ವನಿಯಾಯಿತು. ಅವರು ಮಾನಸರಾಮನ ಕೊಠಡಿಯ ಕಡೆಗೇ ಬರುತ್ತಿರುವಂತೆ ಭಾಸವಾಯಿತು....ನಿರ್ಮಲೆಯ ಮುಖ ಕಳೆಗೆಟ್ಟಿತು! ಅವಳು ಒಡನೆಯೇ ಕೊಠಡಿಯಿಂದ ಹೊರಗೆ ಬಂದಳು; ಒಳಗೆ ಹೋಗು ವಷ್ಟು ಸಮಯ ಸಿಗದ್ದರಿಂದ, ಕಠೋರ ದನಿಯಲ್ಲಿ ನುಡಿದಳು—ಇಷ್ಟು

ರಾತ್ರಿಯ ವರೆಗೆ ಅಡಿಗೆಯನ್ನಿಟ್ಟುಕೊಂಡು ಕಾಯುತ್ತ ಕುಳಿತಿರಲು ನಾನೇನು ಮನೆಯಾಳೇ ? ಊಟ ಬೇಡದಿದ್ದರೆ ಮೊದಲೇ ತಿಳಿಸುವುದಕ್ಕೇನು ?

ನಿರ್ಮಲೆಯು ಅಲ್ಲಿ ನಿಂತಿರುವುದನ್ನು ಕಂಡು ಮುನ್ಶಿಯವರು ' ಇದೇನನರ್ಥ ! ಇವಳು ಇಲ್ಲಿಗೇಕೆ ಬಂದಳು ? ' ಎಂದು ಯೋಚಿಸುತ್ತ ಕೇಳಿದರು—ಇಲ್ಲೇನು ಮಾಡುತ್ತಿರುವೆ ?

ನಿರ್ಮಲೆಯು ಕರ್ಕಶ ದನಿಯಲ್ಲಿ ನುಡಿದಳು—ಏನು ಮಾಡುತ್ತಿರುವೆನೇ ? ನನ್ನ ಅದೃಷ್ಟಕ್ಕಾಗಿ ಅಳುತ್ತಿರುವೆನು ! ಈ ಎಲ್ಲ ತೊಂದರೆಗೂ ನಾನೇ ಮೂಲವಲ್ಲವೇ ? ಅತ್ತ ಒಬ್ಬರು ಮುಖ ಗಂಟಿಕ್ಕಿಕೊಂಡು ಕುಳಿತಿರುವರು, ಇತ್ತ ಒಬ್ಬರು ಸಿಟ್ಟುಗೊಂಡಿರುವರು. ಹೀಗಾದರೆ ನಾನು ಯಾರಾರಿಗೆ ಎಷ್ಟು ಸಮಾಧಾನ ಹೇಳಲಿ ?

ಮುನ್ಶಿಯವರು ಚಕಿತರಾಗಿ ಕೇಳಿದರು—ಏಕೆ ? ವಿಷಯವೇನು ?

ನಿರ್ಮಲೆ—ಇನ್ನೇನು ವಿಷಯ ? ಊಟಮಾಡಲು ಬರುವುದಿಲ್ಲ. ಅಡಿಗೆಯವಳನ್ನು ಹತ್ತು ಸಲ ಕಳುಹಿಸಿದ್ದಾಯಿತು; ಕೊನೆಗೆ ನಾನೇ ಎದ್ದು ಬಂದೆ ! ಹಸಿವೆಯಿಲ್ಲವೆಂದು ಹೇಳುವುದು ಎಲ್ಲರಿಗೂ ಸುಲಭ. ಆದರೆ, ಮನೆಯಾಳಾಗಿ ಎಲ್ಲರಿಂದಲೂ ಕೆಟ್ಟವಳೆನಿಸಿಕೊಳ್ಳುವವಳು ನಾನು ! ಯಾರಿಗಾದರೂ ಹಸಿವೆ ಇರಲಿ, ಇಲ್ಲದಿರಲಿ ! ' ಹೊತ್ತುಹೊತ್ತಿಗೆ ಊಟ ಸಹ ಹಾಕುವುದಿಲ್ಲ, ಇವಳೆಂತಹ ಪಿಶಾಚಿನಿ ? ' ಎಂದು ಅನ್ನುವವರನ್ನು ತಡೆಯುವವರಾರು ?

ಮುನ್ಶಿಯವರು ಮಾನಸರಾಮನನ್ನು ಕೇಳಿದರು—ಊಟವನ್ನೇಕೆ ಮಾಡಲಿಲ್ಲ ? ಈಗ ಎಷ್ಟು ಹೊತ್ತಾಗಿದೆಯೆಂದು ಗೊತ್ತಿದೆಯೇ ?

ಮಾನಸರಾಮನು ಸ್ತಂಭಿತನಂತೆ ನಿಂತಿದ್ದನು. ಅರ್ಥವನ್ನೇ ಅರಿಯಲಾಗದಂತಹ ರಹಸ್ಯವೊಂದು ಅವನೆದುರಿಗಿತ್ತು ! ಒಂದು ಕ್ಷಣ ಮುನ್ನ ಯಾವ ನೇತ್ರಗಳಲ್ಲಿ ವಿನಯದ ಕಂಬನಿಗಳು ತುಂಬಿದವೋ, ಅದೇ ನೇತ್ರಗಳಲ್ಲಿ ಈಗ ಇದ್ದಕ್ಕಿದ್ದಂತೆ ಈರ್ಷೆಯ ಜ್ವಾಲೆ ಎಲ್ಲಿಂದ ಬಂತು ? ಯಾವ ಅಧರಗಳಲ್ಲಿ ಸುಧಾವೃಷ್ಟಿ ಕರೆಯುತ್ತಿತ್ತೋ, ಅದೇ ಅಧರಗಳಲ್ಲಿ ವಿಷಪ್ರವಾಹವೆಲ್ಲಿಂದ ಬಂತು? ಅದೇ ಅರ್ಧಚೇತನಾವಸ್ಥೆಯಲ್ಲಿ ಅವನೆಂದನು—ನನಗೆ ಹಸಿವೆಯಿಲ್ಲ !

ಮುನ್ಶಿಯವರು ಸಿಟ್ಟಿನಿಂದ ಹೇಳಿದರು—ಹಸಿವೆ ಏಕಿಲ್ಲ ? ಹಸಿವೆ

ಇಲ್ಲದಿದ್ದರೆ, ಸಾಯಂಕಾಲವೇ ಏಕೆ ಹೇಳಬಾರದಿತ್ತು ? ನಿನ್ನ ಹಸಿವೆಯನ್ನು ಕಾಯುತ್ತ ರಾತ್ರಿಯೆಲ್ಲಾ ಯಾರು ಎದ್ದು ಕುಳಿತಿರುವರು ? ಮೊದಲು ಈ ಸ್ವಭಾವವು ನಿನ್ನಲ್ಲಿರಲಿಲ್ಲ ! ಸಿಟ್ಟು ಮಾಡುವುದನ್ನು ಯಾವಾಗಿನಿಂದ ಕಲಿತೆ ? ಊಟಮಾಡು ಹೋಗು !

ಮಾನಸರಾಮ – ಇಲ್ಲ, ನನಗೆ ಸ್ವಲ್ಪವೂ ಹಸಿವೆ ಇಲ್ಲ.

ಮುನ್ಷಿಯವರು ಹಲ್ಲುಕಡಿಯುತ್ತ ಹೇಳಿದರು—ಸರಿ, ಹಾಗಾದರೆ ನಿನಗೆ ಹಸಿವೆಯಾದಾಗ ಊಟಮಾಡು ! ಎಂದು ಹೇಳಿ, ಅಲ್ಲಿಂದ ಒಳಕ್ಕೆ ಹೊರಟುಹೋದರು. ನಿರ್ಮಲೆಯೂ ಅವರ ಹಿಂದೆಯೇ ಒಳಕ್ಕೆ ಹೋದಳು. ಮುನ್ಷಿಯವರು ಮಲಗಿಕೊಂಡರು. ನಿರ್ಮಲೆಯು ಅಡಿಗೆಯನ್ನು ಎತ್ತಿರಿಸಿ, ಎಲೆ ಅಡಿಕೆ ಹಾಕಿಕೊಂಡು ನಸುನಗುತ್ತ ಅಲ್ಲಿಗೆ ಬಂದಳು. 'ಊಟ ಮಾಡಿದೆಯಾ ?' ಎಂದರು ಮುನ್ಷಿಯವರು.

ನಿರ್ಮಲೆ—ಇನ್ನೇನು ಮಾಡಲಿ ? ಇತರರಿಗೋಸ್ಕರ ಅನ್ನ–ನೀರು ಬಿಡಲಾಗುವುದೇ ?

ಮುನ್ಷಿ—ಇವನಿಗೇನಾಗಿದೆ–ಎಂದು ತಿಳಿಯುವುದೇ ಕಷ್ಟವಾಗಿದೆ ! ದಿನೇ–ದಿನೇ ದುರ್ಬಲನಾಗುತ್ತಿರುವನು. ದಿನವೆಲ್ಲಾ ಕೊಠಡಿಯಲ್ಲೇ ಕುಳಿತು ಕಾಲ ತಳ್ಳುವನು ?

ನಿರ್ಮಲೆ ಏನೂ ಹೇಳಲಿಲ್ಲ. ಅವಳು ಚಿಂತಾ–ಸಾಗರದಲ್ಲಿ ಮುಳುಗಿ ಕೇಲುತ್ತಿದ್ದಳು ! ಮಾನಸರಾಮನು ನನ್ನ ಭಾವ–ಪರಿವರ್ತನೆಯನ್ನು ಕಂಡು ಮನದಲ್ಲಿ ಏನು ತಿಳಿದುಕೊಂಡನೋ ? ತಂದೆಯವರನ್ನು ಕಂಡೊಡನೆಯೇ ಇವಳೇಕಿಷ್ಟು ಬದಲಾಯಿಸಿದಳೆಂದು ಅವನ ಮನಸ್ಸಿಗೆ ಅನಿಸಿರಲಾರದೆ ? ಬಹುಶಃ ಅದರ ಕಾರಣವೂ ಅವನಿಗೆ ತಿಳಿದಿರಬಹುದು ! ಪಾಪ, ಊಟ ಮಾಡಲು ಬರುತ್ತಿದ್ದ; ಅಷ್ಟರಲ್ಲೇ ಈ ಮಹಾಶಯರು ಬಂದುಬಿಟ್ಟರು ! ಈ ರಹಸ್ಯವನ್ನು ಅವನಿಗೆ ಯಾವ ರೀತಿಯಲ್ಲಿ ತಿಳಿಯಹೇಳಲಿ ? ಇದು ಸಂಭವವೇ ? ಭಗವಂತ ! ನಾನು ಎಂತಹ ವಿಪತ್ತಿನಲ್ಲಿ ಸಿಲುಕಿಕೊಂಡೆ ?

ಬೆಳಗಾಗೆದ್ದು ಅವಳು ಮನೆಗೆಲಸದಲ್ಲಿ ತೊಡಗಿದಳು. ಒಂಭತ್ತು

ಗಂಟೆಯ ಸಮಯದಲ್ಲಿ ಅಡಿಗೆಯವಳು ಬಂದು ಹೇಳಿದಳು—ಮಾನಸಬಾಬು ಗಳು ತಮ್ಮ ಸಾಮಾನನ್ನೆಲ್ಲ ಗಾಡಿಯಲ್ಲಿ ಹಾಕುತ್ತಿರುವರು.

ನಿರ್ಮಲೆಯು ಗಾಬರಿಯಿಂದ ಕೇಳಿದಳು—ಗಾಡಿಯಲ್ಲಿ ಹಾಕುತ್ತಿರು ವನೇ? ಎಲ್ಲಿ ಹೋಗುವನು?

ಅಡಿಗೆಯವಳು—ನಾನು ಕೇಳಿದ್ದಕ್ಕೆ, ಇನ್ನು ಮೇಲೆ ಶಾಲೆಯಲ್ಲೇ ಇರುವೆನೆಂದು ಹೇಳಿದರು.

ಮಾನಸರಾಮನು ಮುಂಜಾನೆಯೇ ಎದ್ದು, ತನ್ನ ಶಾಲೆಯ ಮುಖ್ಯೋ ಪಾಧ್ಯಾಯರ ಬಳಿ ಹೋಗಿ, ಹಾಸ್ಟಲಿನಲ್ಲಿರಲು ವ್ಯವಸ್ಥೆ ಮಾಡಿಕೊಂಡು ಬಂದಿದ್ದನು. ಮೊದಲು ಮುಖ್ಯೋಪಾಧ್ಯಾಯರು ಹೇಳಿದರು—ಇಲ್ಲಿ ಸ್ಥಳ ವಿಲ್ಲ; ನಿನಗಿಂತ ಮುಂಚಿತ ಎಷ್ಟೋ ಹುಡುಗರ ಅರ್ಜಿಗಳು ಬಂದು ಬಿದ್ದಿವೆ. ಮಾನಸರಾಮನೆಂದನು—ನನಗೆ ಸ್ಥಳ ಸಿಗದಿದ್ದರೆ ನಾನು ಓದುವುದೇ ಅಸಾಧ್ಯವಾಗುವುದು. ಅಲ್ಲದೆ ಪರೀಕ್ಷೆಗೂ ಕುಳಿತುಕೊಳ್ಳಲಾರೆ! ಆಗ ಮುಖ್ಯೋಪಾಧ್ಯಾಯರು ಸೋಲಲೇಬೇಕಾಯಿತು. ಮಾನಸರಾಮನು ಪ್ರಥಮಶ್ರೇಣಿಯಲ್ಲಿ ಉತ್ತೀರ್ಣನಾಗುವನೆಂದು ಅವರ ಆಶೆ ಇತ್ತು. ತಮ್ಮ ಶಾಲೆಯ ಕೀರ್ತಿಯನ್ನು ಉಜ್ವಲಗೊಳಿಸುವನೆಂದು ಉಪಾಧ್ಯಾಯರೆಲ್ಲರೂ ನಂಬಿದ್ದರು. ಇಂತಹ ಹುಡುಗನನ್ನು ಬಿಡುವುದಾದರೂ ಹೇಗೆ? ಅವರು ತಮ್ಮ ಆಫೀಸ್ ರೂಮನ್ನು ಅವನಿಗೋಸ್ಕರ ಖಾಲಿ ಮಾಡಿ ಕೊಟ್ಟರು. ಮಾನಸರಾಮನು ಅಲ್ಲಿಂದ ಬರುತ್ತಲೇ ತನ್ನ ಸಾಮಾನನ್ನು ಗಾಡಿಗೆ ಹಾಕ ತೊಡಗಿದನು.

ಮುನ್ಷಿಯವರೆಂದರು—ಇಷ್ಟೊಂದು ಅವಸರವೇಕೆ? ಇನ್ನೂ ನಾಲ್ಕಾರು ದಿನ ಬಿಟ್ಟು ಹೋಗು! ನಿನಗಾಗಿ ಒಬ್ಬ ಒಳ್ಳೆಯ ಅಡಿಗೆಯವ ನನ್ನು ಗೊತ್ತುಮಾಡಬೇಕೆಂದು ಯೋಚಿಸಿರುವೆನು!

ಮಾನಸರಾಮ—ಅಲ್ಲಿನ ಅಡಿಗೆಯವನು ಚೆನ್ನಾಗಿ ಅಡಿಗೆ ಮಾಡು ವನು.

ಮುನ್ಷಿ—ದೇಹಸ್ಥಿತಿಯ ಕಡೆಗೆ ಧ್ಯಾನವಿಟ್ಟುಕೋ! ಓದಿನ ಹಿಂದೆ ಬಿದ್ದು ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡ.

ಮಾನಸರಾಮ—ಅಲ್ಲಿ ಒಂಭತ್ತು ಗಂಟೆಗೆ ಮೇಲ್ಪಟ್ಟು ಯಾರನ್ನೂ ಓದಗೊಡುವುದಿಲ್ಲ; ಅಲ್ಲದೆ, ಎಲ್ಲರೂ ನಿಯಮದಿಂದ ಆಟವನ್ನಾಡಬೇಕು!

ಮುನ್ಷಿ—ಹಾಸಿಗೆಯನ್ನು ತೆಗೆದುಕೊಳ್ಳುವುದಿಲ್ಲವೇ? ಅಲ್ಲಿ ಏತರ ಮೇಲೆ ಮಲಗುವೆ?

ಮಾನಸರಾಮ—ಕಂಬಳಿಯನ್ನು ತೆಗೆದುಕೊಂಡಿರುವೆನು; ಹಾಸಿಗೆಯ ಆವಶ್ಯಕತೆಯಿಲ್ಲ.

ಮುನ್ಷಿ—ಜವಾನನು ಸಾಮಾನನ್ನು ಗಾಡಿಯಲ್ಲಿ ಹಾಕುವನು. ಅಷ್ಟರಲ್ಲಿ ನೀನು ಹೋಗಿ ಸ್ವಲ್ಪ ಊಟ ಮಾಡು. ರಾತ್ರಿ ಕೂಡ ಏನೂ ತಿನ್ನಲಿಲ್ಲ!

ಮಾನಸರಾಮ—ಅಲ್ಲೇ ಊಟ ಮಾಡುವೆನು; ಅಡಿಗೆಯವನಿಗೆ ಅಡಿಗೆ ಮಾಡಲು ಹೇಳಿ ಬಂದಿರುವೆನು. ಇಲ್ಲಿ ಊಟಕ್ಕೆ ಕುಳಿತೆನಾದರೆ, ಹೊತ್ತಾಗುವುದು.

ಮನೆಯಲ್ಲಿ ಜಯರಾಮ ಶ್ರೀರಾಮರಿಬ್ಬರೂ ಅಣ್ಣನ ಸಂಗಡ ತಾವೂ ಹೋಗಬೇಕೆಂದು ಹಟಮಾಡುತ್ತಿದ್ದರು. ನಿರ್ಮಲೆಯು ಅವರನ್ನು ಸಮಾಧಾನಪಡಿಸುತ್ತಿದ್ದಳು—ಅಲ್ಲಿ ಚಿಕ್ಕ ಹುಡುಗರು ಇರಬಾರದು ಮಗೂ! ಎಲ್ಲ ಕೆಲಸವನ್ನೂ ಅವರವರೇ ಮಾಡಿಕೊಳ್ಳಬೇಕಾಗುವುದು.

ಇದ್ದಕ್ಕಿದ್ದಂತೆ ರುಕ್ಮಿಣಿಯು ಅಲ್ಲಿಗೆ ಬಂದು ಹೇಳಿದಳು—ವಜ್ರದಂತಹ ಹೃದಯ ನಿನ್ನದು, ಮಹಾತಾಯಿ! ಹುಡುಗನು ರಾತ್ರಿಯೂ ಊಟ ಮಾಡಿಲ್ಲ; ಈಗಲೂ ಊಟ ಮಾಡದೇ ಹೋಗುತ್ತಿರುವನು! ನೀನಿಲ್ಲಿ ಕುಳಿತು ಹುಡುಗರೊಡನೆ ಮಾತನಾಡುತ್ತಿರುವೆಯಾ? ನೀನು ಅವನ ಸ್ವಭಾವವನ್ನು ಅರಿಯಲಾರೆ! ಅವನು ಶಾಲೆಗೆ ಹೋಗುತ್ತಿಲ್ಲ; ಮನೆಬಿಟ್ಟು ಹೊರಟುಹೋಗುತ್ತಿರುವನು; ಪುನಃ ಹಿಂತಿರುಗಿ ಬರುವುದಿಲ್ಲ! ಆಟದ ಜ್ಞಾನದಲ್ಲಿ ಏಟನ್ನು ಮರೆಯುವಂತಹ ಹುಡುಗನಲ್ಲ. ಇಂತಹ ಏಟು ಅವನ ಮನದಲ್ಲಿ ಬಲವಾಗಿ ನಾಟುವುದು!

ನಿರ್ಮಲೆಯು ಕಾತರ ಸ್ವರದಿಂದ ಹೇಳಿದಳು—ಏನು ಮಾಡಲಿ ಅಕ್ಕಾ! ಅವನು ಯಾರ ಮಾತನ್ನೂ ಕೇಳುವುದಿಲ್ಲ. ನೀವೇ ಒಂದು ಸಲ ಕರೆಯಿರಿ. ನೀವು ಕರೆದರೆ ಬರುವನು.

ರುಕ್ಮಿಣಿ—ಅವನು ಮನೆ ಬಿಟ್ಟು ಹೋಗಲು ಕಾರಣವಾದರೂ ಏನು?

ಅವನ ಮನಸೆಂದೂ ಮನೆಯಿಂದ ಬೇಸರಗೊಂಡಿರಲಿಲ್ಲ; ಮನೆಯ ಹೊರತು ಬೇರೆಲ್ಲೂ ಅವನ ಮನಸು ನಿಲ್ಲುತ್ತಿರಲಿಲ್ಲ! ನೀನೇ ಅವನಿಗೇನೋ ಹೇಳಿರಬೇಕು, ಅಥವಾ ಅವನನ್ನು ದೂರಿರಬೇಕು! ಕೈಯಾರೆ ಮುಳ್ಳೇಕೆ ಚುಚ್ಚಿಕೊಳ್ಳುವೆ? ಮನೆಯನ್ನು ಮಣ್ಣುಪಾಲು ಮಾಡಿ, ನೀನು ಸುಖದಿಂದಿರಲಾರೆ!

ನಿರ್ಮಲೆಯು ಅಳುತ್ತ ಹೇಳಿದಳು—ನಾನು ಅವನನ್ನೇನಾದರೂ ಅಂದಿದ್ದರೆ ನನ್ನ ನಾಲಿಗೆ ಸೀಳಿಹೋಗಲಿ! ಮಲತಾಯಿಯಾದ್ದರಿಂದ ನನಗೆ ಕೆಟ್ಟ ಹೆಸರೆಂದು ನಾನು ಬಲ್ಲೆ! ನಿಮಗೆ ನಮಸ್ಕರಿಸಿ ಕೇಳಿಕೊಳ್ಳುವೆನು; ಒಂದು ಸಲ ಹೋಗಿ ಅವನನ್ನು ಕರೆತನ್ನಿ!

ರುಕ್ಮಿಣಿಯು ತೀವ್ರಸ್ವರದಿಂದ ಹೇಳಿದಳು—ನೀನೇಹೋಗಿ ಏಕೆ ಕರೆಯಬಾರದು? ನಿನ್ನ ಮರ್ಯಾದೆಗೆ ಕಡಿಮೆಯೆ? ನಿನ್ನ ಮಗನಾಗಿದ್ದರೆ ಹೀಗೆಯೇ ಕುಳಿತಿರುತ್ತಿದ್ದೆಯಾ?

ನಿರ್ಮಲೆಯ ಸ್ಥಿತಿಯು ರೆಕ್ಕೆಯಿಲ್ಲದ ಹಕ್ಕಿಯಂತಾಯಿತು! ಸರ್ಪವನ್ನು ಕಂಡು ಹಾರಲೆಳಸುವುದು; ಆದರೆ, ಹಾರಲಾರದು! ಕುಪ್ಪಳಿಸುವುದು; ಧಪ್ಪನೆ ಬೀಳುವುದು! ಅವಳ ಹೃದಯ ಒಳಗಿಂದೊಳಗೇ ತಡಪಿಸುತ್ತಿತ್ತು. ಆದರೆ ಅವಳು ಹೊರಗೆ ಬರಲಾರದೆ ಹೋದಳು!

ಅಷ್ಟರಲ್ಲಿ ಇಬ್ಬರೂ ಹುಡುಗರು ಅಳುತ್ತ ಒಳಗೆ ಬಂದು ಹೇಳಿದರು—'ಅಣ್ಣ ಹೊರಟುಹೋದರು.' ನಿರ್ಮಲೆಯು ನಿಶ್ಚೇತನಳಂತೆ ಮೂರ್ತಿಮತ್ತಾಗಿ ನಿಂತುಬಿಟ್ಟಳು. ಹೊರಟುಹೋದನೇ? ಒಳಗೆ ಸಹ ಬರಲಿಲ್ಲ; ನನ್ನೊಡನೆ ಹೇಳಲೂ ಇಲ್ಲ! ಹೊರಟುಹೋದನೇ? ನನ್ನಲ್ಲಿಷ್ಟು ತಿರಸ್ಕಾರವೇ? ನಾನು ಅವನಿಗೇನೂ ಅಲ್ಲದಿದ್ದರೆ, ಒಳಗಡೆ ಅವರ ಅತ್ತೆ ಇರಲಿಲ್ಲವೇ? ಅವರನ್ನು ಕಾಣುವುದಕ್ಕಾದರೂ ಬರಬೇಕಾಗಿತ್ತು! ನಾನು ಇಲ್ಲಿದ್ದೆನೆಂದು ಬರಲಿಲ್ಲವೇ? ನಾನು ನೋಡುವೆನೆಂದೇ? ಇದಕ್ಕಾಗಿಯೇ ಹೊರಟುಹೋದನೇ?

## ಒಂಭತ್ತನೆಯ ಪರಿಚ್ಛೇದ

ಮಾನಸರಾಮನು ಹೊರಟುಹೋದ್ದರಿಂದ ಮನೆಯು ಭಣಭಣ ಎನಿಸತೊಡಗಿತು. ಅವನ ತಮ್ಮಂದಿರಿಬ್ಬರೂ ಅದೇ ಶಾಲೆಯಲ್ಲಿ ಓದುತ್ತಿದ್ದರು.

ನಿರ್ಮಲೆಯು ಪ್ರತಿನಿತ್ಯವೂ ಅವರನ್ನು, ಮಾನಸರಾಮನು ಹೇಗಿರುವನೆಂದು ಕೇಳುತ್ತಿದ್ದಳು. ರಜಾ ದಿನಗಳಲ್ಲಿ ಅವನು ಮನೆಗೆ ಬರುವನೆಂಬ ಆಸೆ ಇತ್ತು. ರಜಾ ಮುಗಿದುಹೋದರೂ ಅವನು ಮನೆಗೆ ಬರಲಿಲ್ಲ. ಆಗ ನಿರ್ಮಲೆಯ ಮನಸು ಗಾಬರಿಗೊಂಡಿತು. ಅವಳು ಅವನಿಗಾಗಿ ಲಾಡುವನ್ನು ಮಾಡಿಟ್ಟಿದ್ದಳು. ಸೋಮವಾರ ಬೆಳಿಗ್ಗೆ ಅಡಿಗೆಯವಳ ಕೈಲಿ ಲಾಡು ಕಟ್ಟಿಕೊಟ್ಟು, ಅವನಿಗೆ ಕೊಟ್ಟುಬಾರೆಂದು ಕಳುಹಿದಳು. ಅಡಿಗೆಯವಳು ಒಂಭತ್ತು ಗಂಟೆಗೆ ಹಿಂತಿರುಗಿದಳು; ಮಾನಸರಾಮನು ಲಾಡುವನ್ನು ಹಾಗೆಯೇ ಹಿಂದಕ್ಕೆ ಕೊಟ್ಟುಬಿಟ್ಟಿದ್ದನು.

ನಿರ್ಮಲೆಯು ಕೇಳಿದಳು—ಮೊದಲಿಗಿಂತ ಈಗ ನೋಡಲು ಸ್ವಲ್ಪ ಚೆನ್ನಾಗಿರುವನೇ ?

ಅಡಿಗೆಯವಳು—ಚೆನ್ನಾಗಿರುವುದೆಲ್ಲಿ ? ಇನ್ನೂ ಇಳಿದುಹೋಗಿರುವರು.

ನಿರ್ಮಲೆ—ಏಕೆ ? ಮೈಯಲ್ಲಿ ಹುಷಾರಿಲ್ಲವೇ ?

ಅಡಿಗೆಯವಳು—ಅದನ್ನು ನಾನು ಕೇಳಲಿಲ್ಲ; ಸುಳ್ಳೇಕೆ ಹೇಳಲಿ ? ಅಲ್ಲಿಯ ಅಡಿಗೆಯವನು ನನ್ನ ಮೈದುನನೇ ಆಗಬೇಕು. 'ನಿಮ್ಮ ಬಾಬೂಜೀಯವರು ಅದೇನು ಊಟಮಾಡುವರು ? ಎರಡು ತುತ್ತು ತಿಂದು ಎದ್ದು ಬಿಡುವರು ! ಪುನಃ ರಾತ್ರಿಗೂ ಊಟ ಮಾಡುವುದಿಲ್ಲ; ಏನನ್ನೂ ತಿನ್ನುವುದಿಲ್ಲ ! ಯಾವಾಗಲೂ ಓದುತ್ತಲೇ ಇರುವರು' ಎಂದು ಹೇಳಿದನು.

ನಿರ್ಮಲೆ—ಲಾಡುವನ್ನು ಹಿಂದಕ್ಕೇಕೆ ಕೊಡುವಿರೆಂದು ನೀನು ಕೇಳಲಿಲ್ಲವೇ ?

ಅಡಿಗೆಯವಳು—ಇಲ್ಲ, ಬಹೂಜೀ! ನಾನು ಕೇಳಲಿಲ್ಲ. 'ಇಲ್ಲಿಡಬೇಡ; ತೆಗೆದುಕೊಂಡು ಹೋಗು' ಎಂದರು. ಆದ್ದರಿಂದ ತಂದುಬಿಟ್ಟೆ !

ನಿರ್ಮಲೆ—ಮತ್ತೇನೂ ಹೇಳಲಿಲ್ಲವೇ ? ನಿನ್ನೆ ರಜಾ ಇತ್ತು; ಏಕೆ ಬರಲಿಲ್ಲವೆಂದು ಕೇಳಲಿಲ್ಲವೇ ?

ಅಡಿಗೆಯವಳು—ಈ ಮಾತನ್ನು ಕೇಳಲು ನನಗೆ ನೆನಪೇ ಬರಲಿಲ್ಲ. 'ಇನ್ನು ಮೇಲೆ ನೀನು ಇಲ್ಲಿ ಬರಬೇಡ; ನನಗಾಗಿ ಏನನ್ನೂ ತರಬೇಡ ! ನನಗಾವ ತಿಂಡಿತೀರ್ಥ ಅಥವಾ ಕಾಗದಪತ್ರಗಳನ್ನು ಕಳುಹಿಸಬೇಡಿರೆಂದು ನಿನ್ನ ಬಹೂಜೀಯವರಿಗೆ ತಿಳಿಸಿಬಿಡು ! ಹುಡುಗರ ಸಂಗಡಲೂ ನನಗೆ ಏನೂ ಹೇಳಿ

ಕಳುಹಿಸಬೇಡಿ !' ಎಂದರು. ನಂತರ ಇನ್ನೂ ಒಂದು ಮಾತನ್ನು ಹೇಳಿದರು ಬಹೂಜೀ ! ಅದು ನನ್ನ ಬಾಯಿಂದಲೇ ಹೊರಡದಂತಾಗಿದೆ ! ಆಮೇಲೆ ಅಳ ತೊಡಗಿದರು.

ನಿರ್ಮಲೆ—ಅದಾವ ಮಾತು, ಹೇಳು !

ಅಡಿಗೆಯವಳು—ಏನು ಹೇಳಲಿ, ಬಹೂಜೀ ! 'ನನ್ನ ಜೀವನಕ್ಕೆ ಧಿಕ್ಕಾರ !' ಎಂದುಕೊಂಡು ಅಳಲಾರಂಭಿಸಿದರು.

ನಿರ್ಮಲೆಯ ಮುಖದಿಂದ ಒಂದು ನಿಟ್ಟುಸಿರು ಹೊರಟಿತು; ಅವಳ ರೋಮರೋಮವೂ ಆರ್ತನಾದದಿಂದ ರೋದಿಸತೊಡಗಿತು ! ಅಲ್ಲಿ ಕುಳಿತು ಕೊಳ್ಳಲಾರದೆ ಹೋದಳು. ಒಳಗಡೆ ಹೋಗಿ ಹಾಸಿಗೆಯ ಮೇಲೆ ಮುಖ ಮುಚ್ಚಿ ಮಲಗಿ. ಬಿಕ್ಕಿ ಬಿಕ್ಕಿ ಅಳತೊಡಗಿದಳು 'ಅವನೂ ಈ ರೀತಿ ತಿಳಿದು ಕೊಂಡನೇ ?' ಎಂಬ ವಾಕ್ಯವು ಅವಳ ಅಂತಃಕರಣದಲ್ಲಿ ಬಾರಿ—ಬಾರಿಗೂ ಪ್ರತಿಧ್ವನಿತವಾಗತೊಡಗಿತು ಯಾವ ಸಂದೇಹಾಗ್ನಿಯಿಂದ ಅವಳು ಭಸ್ಮ ವಾಗುತ್ತಿದ್ದಳೋ ಅದೇ ಸಂದೇಹಾಗ್ನಿಯು ಈಗ ಶತಗುಣವೇಗದಿಂದ ಉರಿಯ ತೊಡಗಿತು. ಅವಳಿಗೆ ತನ್ನದಾವ ಚಿಂತೆಯೂ ಇರಲಿಲ್ಲ. ಜೀವನದಲ್ಲಿ ಯಾವ ಸುಖದ ಆಸೆ ಅವಳಿಗಿತ್ತು ? ಇದು ತನ್ನ ಪೂರ್ವಕರ್ಮಗಳ ಪ್ರಾಯಶ್ಚಿತ್ತ ವೆಂದು ತಿಳಿದು, ಅವಳು ಮನಸಿಗೆ ಸಮಾಧಾನ ತಂದುಕೊಂಡಿದ್ದಳು. ಈ ಸ್ಥಿತಿಯಲ್ಲಿ ಹೆಚ್ಚು ದಿನ ಜೀವಿಸಿರಲು ಸಹ ಅವಳಿಗೆ ನಾಚಿಕೆ ಎನಿಸುತ್ತಿತ್ತು ! ಕರ್ತವ್ಯಕ್ಕಾಗಿ ಅವಳು ತನ್ನ ಜೀವನ ಮತ್ತು ಆಸೆ—ಆಕಾಂಕ್ಷೆಗಳೆಲ್ಲವನ್ನೂ ಹೋಮ ಮಾಡಿದ್ದಳು. ಹೃದಯವು ರೋದಿಸುತ್ತಲೇ ಇರುತ್ತಿತ್ತು; ಆದರೆ ಮುಖದ ಮೇಲೆ ತೋರಿಕೆಯ ನಗೆಯನ್ನು ತಂದುಕೊಳ್ಳಬೇಕಾಗುತ್ತಿತ್ತು ! ಯಾರ ಮುಖವನ್ನು ನೋಡಲು ಬೇಕಿಲ್ಲವೋ, ಅವರೊಡನೆ ನಕ್ಕು-ನುಡಿಯ ಬೇಕಾಗುತ್ತಿತ್ತು ! ಯಾವ ದೇಹಸ್ಪರ್ಶವು ಅವಳಿಗೆ ಸರ್ಪಸ್ಪರ್ಶದಂತೆನಿಸು ತ್ತಿತ್ತೋ, ಅದರ ಆಲಿಂಗನದಿಂದ ಅವಳಿಗೆಷ್ಟು ತಿರಸ್ಕಾರ ಮತ್ತು ಮರ್ಮ— ವೇದನೆಯಾಗುತ್ತಿತ್ತೆಂದು ಯಾರು ಬಲ್ಲರು ! ಆ ಸಮಯದಲ್ಲಿ ಅವಳಿಗೆ 'ಭೂಮಿಯಾದರೂ ಬಾಯಿ ತೆರೆಯಬಾರದೇ ? ಅದರಲ್ಲಿ ಹೋಗಿ ಸೇರಿಕೊಳ್ಳು ವೆನು !' ಎಂದೆನಿಸುತ್ತಿತ್ತು ! ಈಗ, ಇದೆಲ್ಲವೂ ಕೇವಲ ವಿಡಂಬನೆಯಾ ಯಿತು. ತನ್ನ ಚಿಂತೆಯನ್ನವಳು ತ್ಯಜಿಸಿದ್ದಳು; ಆದರೆ, ಆ ಸಮಸ್ಯೆಯು ಈಗ

ಅತ್ಯಂತ ಭಯಂಕರವಾಗಿತ್ತು ! ಅವಳು ಮಾನಸರಾಮನ ಆತ್ಮದುಃಖವನ್ನು ಕಣ್ಣಾರೆ ನೋಡಿ ಸಹಿಸುತ್ತಿರಲಿಲ್ಲ. ಅವನಂತಹ ಮನಸ್ವಿ ಸಾಹಸಿ ಯುವಕನ ಮೇಲೆ ಈ ಆಕ್ಷೇಪಣೆಯ ಪರಿಣಾಮವೇನಾಗುವುದೆಂಬುದರ ಕಲ್ಪನೆಯಿಂದ ಸಹ, ಅವಳ ಪ್ರಾಣವು ಥರಥರ ಕಂಪಿಸುತ್ತಿತ್ತು ಈಗ ತನ್ನ ಮೇಲೆಷ್ಟು ಸಂದೇಹ ಉಂಟಾದರೂ ಸರಿಯೆ, ಸುಮ್ಮನೆ ಕುಳಿತಿರಲಾಗಲಿಲ್ಲ; ಮಾನಸರಾಮನನ್ನು ರಕ್ಷಿಸುವುದಕ್ಕಾಗಿ ಅವಳು ಕಾತರಗೊಂಡಳು ! ಸಂಕೋಚ ಮತ್ತು ಲಜ್ಜೆಗಳ ಹೊದಿಕೆಯನ್ನು ತೆಗೆದು ಬಿಸುಡುವುದೆಂದು ಮನದಲ್ಲಿ ನಿಶ್ಚಯಿಸಿದಳು.

ಮುನ್ಷಿಯವರು ಊಟಮಾಡಿ ಕಛೇರಿಗೆ ಹೋಗುವ ಮುನ್ನ, ನಿರ್ಮಲೆಯನ್ನು ಒಮ್ಮೆ ಕಂಡುಹೋಗುತ್ತಿದ್ದರು. ಅವರು ಬರುವ ಸಮಯವಾಗಿತ್ತು. ಇನ್ನೇನು ಬರುತ್ತಿರಬಹುದು—ಎಂದು ತಿಳಿದು, ನಿರ್ಮಲೆಯು ದ್ವಾರದ ಬಳಿ ನಿಂತು ನಿರೀಕ್ಷಿಸತೊಡಗಿದಳು. ಆದರೆ, ಅವರು ಹೊರಗೆ ಹೊರಟುಬಿಟ್ಟಿದ್ದರು. ಗಾಡಿಯು ಆಗಲೇ ಬಂದು ನಿಂತಿತ್ತು. ' ಈ ದಿನ ಅವರು ನನ್ನನ್ನು ಕಾಣಲು ಬರುವುದಿಲ್ಲವೇ ? ಹೊರಗಿನಿಂದಲೇ ಹೊರಟುಹೋಗುವರೇ ? ಇಲ್ಲ, ಇಲ್ಲ ! ' ಎಂದು ಯೋಚಿಸಿ ಅಡಿಗೆಯವಳನ್ನು ಕರೆದು ಹೇಳಿದಳು—ಹೋಗು, ಬಾಬೂಜೀಯವರನ್ನು ಸ್ವಲ್ಪ ಕರೆದುಕೊಂಡು ಬಾ ! ಜರೂರು ಕೆಲಸವಿದೆ ಎಂದು ಹೇಳು

ಮುನ್ಷಿಯವರು ಹೊರಡಲು ಸಿದ್ಧರಾಗಿದ್ದರು. ಈ ಮಾತನ್ನು ಕೇಳಿ ಒಳಗೆ ಬಂದರು ಕೊಠಡಿಯೊಳಗೆ ಬರದೆ, ಹೊರಗೇ ನಿಂತು ಕೇಳಿದರು—ಏಕೆ ? ಏನು ಹೇಳಬೇಕಾಗಿತ್ತು ? ಬೇಗ ಹೇಳು ! ಒಂದು ಜರೂರು ಕೆಲಸಕ್ಕಾಗಿ ಹೋಗುತ್ತಿರುವೆನು. ಮುಖ್ಯಾಧ್ಯಾಪಕರಿಂದ ಈಗ ತಾನೇ ಒಂದು ಪತ್ರ ಬಂದಿತ್ತು. ಮಾನಸರಾಮನಿಗೆ ಬಹಳ ಜ್ವರವಂತೆ. ಮನೆಗೇ ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡುವುದು ಉತ್ತಮವೆಂದು ಅವರು ಬರೆದಿರುವರು. ಆದ್ದರಿಂದ ಅಲ್ಲಿಗೆ ಹೋಗಿ, ನಂತರ ಕಛೇರಿಗೆ ಹೋಗುವೆನು. ವಿಶೇಷ ವಿಷಯ ಏನಾದರೂ ಹೇಳಬೇಕಾಗಿತ್ತೇ ?

ನಿರ್ಮಲೆಗೆ ಸಿಡಿಲು ಬಡಿದಂತಾಯಿತು ! ಕಂಬನಿ ಮತ್ತು ಕಂಠಸ್ವರಗಳ ನಡುವೆ ಘೋರ ಸಂಗ್ರಾಮವಾಗತೊಡಗಿತು. ನಾನು ಮೊದಲು, ತಾನು

ಮೊದಲು ಎಂದು ಎರಡೂ ಮುನ್ನುಗ್ಗತೊಡಗಿದವು! ಯಾವುದೊಂದೂ ಒಂದು ಹೆಜ್ಜೆ ಹಿಂದಿರಲು ಇಷ್ಟಪಡಲಿಲ್ಲ; ಈ ಸಂಗ್ರಾಮದಲ್ಲಿ ಯಾವುದರ ವಿಜಯವಾಗುವುದೆಂದು ಹೇಳುವುದು ಅಸದಳವಾಗಿತ್ತು; ಕಡೆಗೆ ಎರಡೂ ಸಂಗಡಲೆ ಕೂರಬಿದ್ದವು. 'ವಿಶೇಷ ವಿಷಯ ಏನೂ ಇಲ್ಲ. ನೀವು ಅಲ್ಲೀ ಹೋಗುತ್ತಿರುವಿರಲ್ಲ?' ಎಂದಷ್ಟು ಮಾತ್ರ ನುಡಿದಳು.

ಮುನ್ಷಿ—ನಿನ್ನೆ ಹುಡುಗರನ್ನು ಕೇಳಿದ್ದಕ್ಕೆ, ಓದುತ್ತ ಕುಳಿತಿದ್ದನೆಂದು ಹೇಳಿದರು. ಇಂದು ಏನಾಯಿತೋ?

ನಿರ್ಮಲೆಯು ಆವೇಶದಿಂದ ಕಂಪಿಸುತ್ತ ಹೇಳಿದಳು—ಇದೆಲ್ಲವನ್ನೂ ನೀವೇ ಮಾಡುತ್ತಿರುವಿರಿ!

ಮುನ್ಷಿಯವರು ಹುಬ್ಬುಗಂಟಿಕ್ಕಿ ಹೇಳಿದರು ನಾನೇ? ನಾನೇನು ಮಾಡುತ್ತಿರುವೆನು?

ನಿರ್ಮಲೆ—ನಿಮ್ಮ ಮನಸನ್ನು ಕೇಳಿಕೊಳ್ಳಿ!

ಮುನ್ಷಿ—ಮನೆಯಲ್ಲಿದ್ದರೆ ಅವನ ಮನಸು ಓದಿನ ಕಡೆ ಇರುವುದಿಲ್ಲ; ಅಲ್ಲಾದರೆ ಸಹಪಾಠಿಗಳ ಸಂಗಡ ಮನಸಿಟ್ಟು ಓದುವನು—ಎಂದು ಯೋಚಿಸಿದೆ. ಇದರಲ್ಲೇನು ತಪ್ಪು? ನಾನು ಮತ್ತೇನು ಮಾಡಿದೆ?

ನಿರ್ಮಲೆ—ಚೆನ್ನಾಗಿ ಯೋಚಿಸಿರಿ! ಕೇವಲ ಇದಕ್ಕಾಗಿಯೇ ನೀವು ಅವನನ್ನು ಅಲ್ಲಿಗೆ ಕಳುಹಿದಿರಾ? ನಿಮ್ಮ ಮನಸಿನಲ್ಲಿ ಮತ್ತಾವ ಯೋಚನೆಯೂ ಇರಲಿಲ್ಲವೇ?

ಮುನ್ಷಿಯವರು ಸ್ವಲ್ಪ ಹಿಂಜರಿದರು. ತಮ್ಮ ದುರ್ಬಲತೆಯನ್ನು ಮುಚ್ಚಿಕೊಳ್ಳಲು ಪ್ರಯತ್ನಿಸಿ, ಮುಗುಳುನಗೆ ನಗುತ್ತ ಹೇಳಿದರು—ಇನ್ನಾವ ಯೋಚನೆ ಇದ್ದೀತು? ನೀನೇ ಯೋಚಿಸು!

ನಿರ್ಮಲೆ—ಸರಿ, ಹಾಗೆಯೇ ಆಗಲಿ. ನೀವು ಕೃಪೆಯಿಟ್ಟು ಅವನನ್ನು ಇಂದೇ ಮನೆಗೆ ಕರೆತನ್ನಿ! ಅಲ್ಲಿರುವುದರಿಂದ ಅವನ ಖಾಯಿಲೆಯು ಹೆಚ್ಚುವ ಭಯವಿದೆ. ಮನೆಯಲ್ಲಿ ಅಕ್ಕನವರು ನೋಡಿಕೊಳ್ಳುವಷ್ಟು ಆದರದಿಂದ ಮತ್ತಾರು ನೋಡಿಕೊಳ್ಳುವರು?

ಒಂದು ಕ್ಷಣದ ನಂತರ ಅವಳು ತಲೆತಗ್ಗಿಸಿ ಪುನಃ ನುಡಿದಳು—

ನಾನಿರುವೆನೆಂದು ಅವನನ್ನು ಕರೆತರಲು ಇಷ್ಟವಿಲ್ಲದಿದ್ದರೆ, ನನ್ನನ್ನು ನಮ್ಮ ತವರುಮನೆಗೆ ಕಳುಹಿಸಿಬಿಡಿ! ಅಲ್ಲಿ ನಾನು ಸುಖವಾಗಿರುವೆನು.

ಮುನ್ಷಿಯವರು ಈ ಮಾತಿಗೇನೂ ಉತ್ತರ ಕೊಡಲಿಲ್ಲ; ಹೊರಗೆ ಹೊರಟುಹೋದರು. ಒಂದು ಕ್ಷಣದಲ್ಲಿ ಗಾಡಿಯು ಶಾಲೆಯಕಡೆಗೆ ಹೊರಟಿತು.

ಎಲೆ ಮನವೇ! ನಿನ್ನ ಗತಿ ಎಷ್ಟು ವಿಚಿತ್ರ, ಎಷ್ಟು ರಹಸ್ಯಭರಿತ. ಎಷ್ಟು ದುರ್ಭೇದ್ಯ! ಎಷ್ಟು ಬೇಗನೆ ಬಣ್ಣ ಬದಲಾಯಿಸುವೆ? ಈ ಕಲೆಯಲ್ಲಿ ನೀನೆಷ್ಟು ನಿಪುಣ? ಮತಾಪಿನ ಬಣ್ಣವಾದರೂ ಬದಲಾಯಿಸಲು ಸ್ವಲ್ಪ ಸಮಯ ಬೇಕು! ನಿನಗೆ ಅಷ್ಟು ಸಹ ಬೇಕಿಲ್ಲ! ಈಗ ತಾನೇ ವಾತ್ಸಲ್ಯ ವಿದ್ದೆಡೆಯಲ್ಲಿ, ಪುನಃ ಸಂದೇಹ! ಆಹಾ!

# ಹತ್ತನೆಯ ಪರಿಚ್ಛೇದ

ಮಾನಸರಾಮನು ಎರಡು ದಿನಗಳ ವರೆಗೆ ಅಪಾರ ಚಿಂತೆಯಲ್ಲಿ ಮುಳುಗಿದ್ದನು. ಬಾರಿಬಾರಿಗೂ ತನ್ನ ಮಾತೆಯ ನೆನಪು ಬರುತ್ತಿತ್ತು. ಊಟದಲ್ಲಿ ರುಚಿ ಇರಲಿಲ್ಲ; ಓದಿನಲ್ಲಿ ಮನಸಿರಲಿಲ್ಲ. ಎರಡು ದಿನಗಳು ಹಾಗೂ ಹೀಗೂ ಕಳೆದವು. ಹಾಸ್ಟಲಿನಲ್ಲಿದ್ದುಕೊಂಡೂ, ಅಧ್ಯಾಪಕರು ಕೊಟ್ಟಿದ್ದ ಮನೆ ಪಾಠವನ್ನು ಅವನು ಬರೆದು ತರಲಿಲ್ಲ. ಪರಿಣಾಮ ಸ್ವರೂಪವಾಗಿ ಬೆಂಚಿನ ಮೇಲೆ ನಿಂತುಕೊಳ್ಳಬೇಕಾಯಿತು! ಹಿಂದೆಂದೂ ಅವನು ಈರೀತಿ ಅಪಮಾನಿತನಾಗಿರಲಿಲ್ಲ; ಇಂದು ಈ ಅಸಹ್ಯ ಅಪಮಾನವನ್ನು ಸಹಿಸಬೇಕಾಯಿತು!

ಮೂರನೆಯ ದಿನ ಅವನು ಇದೇ ಚಿಂತೆಯಲ್ಲಿ ಮಗ್ನನಾಗಿದ್ದನು. ತನ್ನ ಮನಸಿಗೆ ತಾನೇ ಸಮಾಧಾನ ಹೇಳಿಕೊಂಡನು—ಪ್ರಪಂಚದಲ್ಲಿ ನಾನೊಬ್ಬನೇ ಮಾತೃವಿಹೀನನೇ? ವಿಮಾತೆಯರೆಲ್ಲರೂ, ಸಾಮಾನ್ಯವಾಗಿ ಇದೇ ಸ್ವಭಾವದವರು ಇದೇನೂ ಹೊಸ ವಿಷಯವಲ್ಲ! ಇನ್ನು ಮುಂದೆ ನಾನು ಪುರುಷನಂತೆ ದ್ವಿಗುಣ ಪರಿಶ್ರಮದಿಂದ ಕೆಲಸ ಮಾಡಬೇಕು, ತಂದೆತಾಯಿಗಳನ್ನು ಸಮಾಧಾನದಲ್ಲಿರಿಸಬೇಕು. ಈ ವರ್ಷ ಶಿಷ್ಯವೃತ್ತಿ ದೊರೆತರೆ, ಮನೆಯಿಂದ ಖರ್ಚಿಗಾಗಿ ಹಣ ತೆಗೆದುಕೊಳ್ಳುವ ಅವಶ್ಯಕತೆಯೂ ಇರುವುದಿಲ್ಲ.

ಎಷ್ಟೋ ಹುಡುಗರು ಯಾರ ಆಶ್ರಯವೂ ಇಲ್ಲದೆ ತಮ್ಮ ಬಲದ ಮೇಲೇ ದೊಡ್ಡ ದೊಡ್ಡ ಪದವಿಗಳನ್ನು ಪಡೆದಿರುವರು. ತೊಂದರೆಗಳನ್ನು ಜಯಿಸುವುದು ಮತ್ತು ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವುದೇ ಮನುಷ್ಯನ ಕರ್ತವ್ಯ! ಅದೃಷ್ಟಕ್ಕಾಗಿ ಅಳುವುದರಿಂದ ಪ್ರಯೋಜನವೇನು?

ಅಷ್ಟರಲ್ಲಿ ಜಯರಾಮನು ಅಲ್ಲಿಗೆ ಬಂದನು

ಮಾನಸರಾಮನು ಕೇಳಿದನು—ಮನೆಯ ಸಮಾಚಾರವೇನು, ಜಯ? ಹೊಸ ಅಮ್ಮನು ಅತ್ಯಂತ ಪ್ರಸನ್ನರಾಗಿರಬಹುದಲ್ಲವೇ?

ಜಯ—ಅವರ ಮನಸಿನ ಸ್ಥಿತಿಗತಿ ನನಗೆ ಗೊತ್ತಿಲ್ಲ ಆದರೆ ನೀನು ಹೊರಟು ಬಂದಾಗಿನಿಂದ ಒಂದು ತುತ್ತು ಅನ್ನವನ್ನೂ ತಿಂದಿಲ್ಲ. ಯಾವಾಗಲೂ ಅಳುತ್ತಲೇ ಇರುವರು. ಬಾಬೂಜೀಯವರು ಬಂದಾಗ ಮಾತ್ರ ಬಲಾತ್ಕಾರದಿಂದ ನಗುವರು. ನೀನು ಹೊರಟ ದಿನ ಸಾಯಂಕಾಲವೇ ನಾನೂ ನಿನ್ನ ಬಳಿಗೆ ಬಂದುಬಿಡಬೇಕೆಂದು ಪುಸ್ತಕಗಳನ್ನು ಜೋಡಿಸಿಕೊಂಡೆ. ಅಡಿಗೆಯವಳು ನೋಡಿ ಅಮ್ಮನ ಸಂಗಡ ಹೇಳಿಬಿಟ್ಟಳು ಬಾಬೂಜೀಯವರೂ ಕುಳಿತಿದ್ದರು. ಅಮ್ಮನು ಅವರೆದುರಿಗೆ ಪುಸ್ತಕಗಳನ್ನು ಕೈಯಿಂದ ಕಿತ್ತುಕೊಂಡು ಅಳುತ್ತ ಹೇಳಿದರು—ನೀನೂ ಹೊರಟುಹೋದರೆ ಈ ಮನೆಯಲ್ಲಿ ಇರುವವರಾರು? ನನ್ನ ಕಾರಣದಿಂದ ನೀವೆಲ್ಲರೂ ಮನೆ ಬಿಡುವುದಾದರೆ ನಾನೇ ಮನೆ ಬಿಟ್ಟು ಹೊರಟುಹೋಗುವೆನು! ನನಗೆ ಕೋಪ ಬಂದಿತು. ಬಾಬೂಜೀಯವರು ಅಷ್ಟು ಹೊತ್ತಿಗೆ ಎದ್ದು ಹೊರಟುಹೋದರು. ನಾನು ಸಿಟ್ಟಿನಿಂದ ನುಡಿದೆನು—ನೀವೇಕೆ ಹೊರಟುಹೋಗುವಿರಿ? ನಿಮ್ಮ ಮನೆ; ನೀವು ಸುಖವಾಗಿರಿ! ಈಗ ನಾವೇ ಅಲ್ಲವೇ ಹೊರಗಿನವರು? ನಾವಿಲ್ಲದಿದ್ದರೆ ನಿಮಗೆ ಆರಾಮವೇ ಆರಾಮ!

ಮಾನಸರಾಮ—ನೀನು ಸರಿಯಾಗಿ ಹೇಳಿದೆ! ನಿನ್ನ ಮಾತಿಗೆ ಅವರು ಮತ್ತಷ್ಟು ಕೋಪಗೊಂಡು ಬಾಬೂಜೀಯವರೊಡನೆ ದೂರು ಹೇಳಿರಬೇಕು.

ಜಯ—ಇಲ್ಲ; ಹಾಗೇನೂ ಮಾಡಲಿಲ್ಲ! ಪಾಪ, ನೆಲದ ಮೇಲೆ ಕುಳಿತು ಅಳತೊಡಗಿದರು. ನನಗೂ ಕರುಣೆಯುಂಟಾಯಿತು. ನಾನೂ ಅತ್ತೆ. ತಮ್ಮ ಸೆರಗಿನಿಂದ ನನ್ನ ಕಣ್ಣೀರನ್ನೊರೆಸಿ ಹೇಳಿದರು—ಜಯ, ಈಶ್ವರಸಾಕ್ಷಿಯಾಗಿಯೂ ಹೇಳುವೆನು. ನಾನು ನಿಮ್ಮ ತಂದೆಯವರೊಡನೆ ನಿಮ್ಮ ಅಣ್ಣನ

ವಿಷಯವಾಗಿ ಒಂದು ಮಾತನ್ನೂ ಆಡಿಲ್ಲ! ನನ್ನ ಭಾಗ್ಯದಲ್ಲಿ ಕಳಂಕವು ಬರೆದಿತ್ತು; ಅದನ್ನು ಅನುಭವಿಸುತ್ತಿರುವೆನು—ಇನ್ನೂ ಏನೇನೋ ಹೇಳಿದರು. ನನಗೆ ಗೊತ್ತಾಗಲಿಲ್ಲ. ತಂದೆಯವರ ವಿಷಯವಾಗಿ ಕೆಲವು ಮಾತನ್ನಾಡಿದರು.

ಮಾನಸರಾಮನು ಉದ್ವಿಗ್ನನಾಗಿ ಕೇಳಿದನು—ಬಾಬೂಜೀಯವರ ವಿಷಯು ಏನು ಹೇಳಿದರು? ನೆನಪಿದೆಯೇ?

ಜಯ—ಅವರು ಹೇಳಿದ ಮಾತುಗಳು ನನಗೆ ನೆನಪಿಲ್ಲ. ನನಗೆ ಜ್ಞಾಪಕಶಕ್ತಿ ಬಹಳ ಕಡಿಮೆ; ಬಾಬೂಜೀಯವರನ್ನು ಪ್ರಸನ್ನಗೊಳಿಸುವುದಕ್ಕಾಗಿ ಈ ತೋರಿಕೆಗಳನ್ನೆಲ್ಲಾ ತೋರಬೇಕಾಗುವುದು—ಎಂಬುದಷ್ಟು ಅವರ ಮಾತಿನ ಅರ್ಥವಾಗಿತ್ತು. ಧರ್ಮ ಅಧರ್ಮಗಳ ವಿಷಯ ಏನೇನೋ ಹೇಳಿದರು ಅದಾವುದೂ ನನಗೆ ಅರ್ಥವಾಗಲಿಲ್ಲ ನಿನ್ನನ್ನು ಇಲ್ಲಿಗೆ ಕಳುಹಿಸಲು ಅವರಿಗಿಷ್ಟವಿರಲಿಲ್ಲವೆಂದು ಈಗ ನನಗೆ ನಂಬಿಕೆಯುಂಟಾಯಿತು!

ಮಾನಸರಾಮ—ಈ ತೋರಿಕೆ ಬೂಟಾಟಿಕೆಗಳ ಅರ್ಥವನ್ನು ನೀನರಿಯಲಾರೆ, ಜಯ!

ಜಯ—ಇವೆಲ್ಲಾ ನಿನಗೆ ಗೊತ್ತಾಗಬಹುದು; ನನಗೆ ತಿಳಿಯುವುದಿಲ್ಲ; ಅಣ್ಣಾ!

ಮಾನಸರಾಮ—ಪಾಪ, ರೇಖಾಗಣಿತ (Geometry) ವನ್ನು ತಿಳಿದುಕೊಳ್ಳಲಾರದ ನೀನು ಈ ಮಾತುಗಳ ಅರ್ಥವನ್ನೇನು ತಿಳಿಯುವೆ? ಅಂದಿನ ರಾತ್ರಿ ಅವರು ನನ್ನನ್ನು ಊಟಮಾಡಲು ಕರೆಯಬಂದಿದ್ದರು. ಅವರ ಬಲಾತ್ಕಾರಕ್ಕೋಸ್ಕರ ಊಟಮಾಡಲು ಹೋಗುವುದರಲ್ಲಿದ್ದೆ. ಆ ಹೊತ್ತಿಗೆ ಸರಿಯಾಗಿ ಬಾಬೂಜೀಯವರು ಬಂದುದನ್ನು ಕಂಡೊಡನೆಯೇ ಅವರು ಧರಿಸಿದ ವೇಷವನ್ನು ನಾನೆಂದಾದರೂ ಮರೆಯಬಲ್ಲೆನೇ?

ಜಯ ಈ ವಿಷಯವೇ ನನಗೆ ಅರ್ಥವಾಗುವುದಿಲ್ಲ! ನಿನ್ನೆ ನಾನು ಇಲ್ಲಿಂದ ಹೋದೊಡನೆಯೇ ನಿನ್ನ ವಿಷಯ ಕೇಳಿದರು. ಅದಕ್ಕೆ ನಾನೆಂದೆ—ಈ ಮನೆಗೆ ಇನ್ನೆಂದೂ ಕಾಲಿಡುವುದಿಲ್ಲವೆಂದು ಅಣ್ಣ ಹೇಳಿದನು.—ನಾನು ಸುಳ್ಳು ಹೇಳಲಿಲ್ಲ. ನೀನು ನನ್ನೊಡನೆ ಈ ಮಾತನ್ನು ಹೇಳಲಿಲ್ಲವೇ? ನಾನಿಷ್ಟು ಹೇಳಿದೊಡನೆಯೇ ಅವರು ಬಿಕ್ಕಿ ಬಿಕ್ಕಿ ಅಳತೊಡಗಿದರು. ಈ

ಮಾತನ್ನು ಏಕಾದರೂ ಅವರಿಗೆ ಹೇಳಿದೆ? ಎಂದೆನಿಸಿತು 'ನನ್ನ ಕಾರಣ ದಿಂದ ಮನೆ ಬಿಟ್ಟು ಹೋದನೇ? ನನ್ನ ಮೇಲಿಷ್ಟು ಕೋಪವೇ? ಹೋಗು ವಾಗ ಹೇಳಿ ಸಹ ಹೋಗಲಿಲ್ಲ. ಅಡಿಗೆ ಸಿದ್ಧವಾಗಿತ್ತು; ಊಟ ಮಾಡಲು ಸಹ ಬರಲಿಲ್ಲ. ಹಾ! ನಾನೆಂತಹ ವಿಪತ್ತಿನಲ್ಲಿರುವೆನೆಂದು ಹೇಗೆ ತಿಳಿಸಲಿ?' ಎಂದೆನ್ನುತ್ತಿದ್ದರು ಅಷ್ಟರಲ್ಲಿ ಬಾಬೂಜೀಯವರು ಬಂದರು. ಸರಿ! ಒಡ ನೆಯೇ ಕಣ್ಣುಗಳನ್ನೊರೆಸಿಕೊಂಡು ನಸುನಗುತ್ತ ಅವರೊಡನೆ ಹೊರಟು ಹೋದರು! ಅವರ ಈ ವ್ಯವಹಾರದ ಅರ್ಥ ನನಗೆ ತಿಳಿಯಲಿಲ್ಲ. ಹೇಗಾ ದರೂ ಮಾಡಿ, ಈ ದಿನ ನಿನ್ನನ್ನು ಸಂಗಡ ಕರೆದುಕೊಂಡು ಬಾರೆಂದು ಒತ್ತಾಯ ಮಾಡಿ ಹೇಳಿರುವರು. ಇಂದು ನಿನ್ನನ್ನು ಖಂಡಿತ ಕರೆದುಕೊಂಡು ಹೋಗುವೆನು! ಎರಡು ದಿನಗಳಿಗೆ ಎಷ್ಟು ಇಳಿದುಹೋಗಿರುವರು, ಗೊತ್ತೇ? ನೋಡಿದರೆ ನಿನಗೂ ದಯೆಯುಂಟಾಗುವುದು! ಬರುವೆಯಷ್ಟೇ?

ಮಾನಸರಾಮನು ಏನೂ ಉತ್ತರ ಕೊಡಲಿಲ್ಲ ಅವನ ಕಾಲುಗಳು ಕಂಪಿಸುತ್ತಿದ್ದವು. ಜಯರಾಮನು ಶಾಲೆಯ ಗಂಟೆಯನ್ನು ಕೇಳಿ ಓಡಿ ಹೋದನು. ಆದರೆ, ಮಾನಸರಾಮನು ಬೆಂಚಿನ ಮೇಲೆ ಮಲಗಿ, ನಿಟ್ಟುಸಿ ರೊಂದನ್ನು ಬಿಟ್ಟನು. ದುಸ್ಸಹ ದುಃಖದಿಂದ ಒಮ್ಮೆ ಅವನು 'ಹಾ! ಭಗ ವಂತ!' ಎಂದು ಕೂಗಿಕೊಂಡನು. ಈ ಹೆಸರಿನ ಹೊರತು ತನಗೆ ಇನ್ನಾವ ಆಧಾರವೂ ಇಲ್ಲವೆಂದು ಅವನು ತಿಳಿದನು. ಈ ಒಂದು ಉಛ್ವಾಸದಲ್ಲಿ ಎಷ್ಟು ನಿರಾಸೆ, ಮರ್ಮವೇದನೆ, ಕರುಣೆ, ದೀನತೆಗಳು ಅಡಗಿದ್ದವೆಂದು ಯಾರು ತಿಳಿಯಬಲ್ಲರು? ಈಗ ಎಲ್ಲಾ ರಹಸ್ಯವೂ ಅವನಿಗೆ ತಿಳಿಯತೊಡಗಿತು. 'ಹಾ! ಭಗವಂತ! ಇಂತಹ ಘೋರ ಕಳಂಕವೇ?' ಎಂಬ ಆರ್ತನಾದವು ಅವನ ಪೀಡಿತ ಹೃದಯದಿಂದ ಬಾರಿಬಾರಿಗೂ ಹೊರಡುತ್ತಿತ್ತು!

ಆಹಾ! ಜೀವನದಲ್ಲಿ ಇದಕ್ಕಿಂತ ಮಿಗಿಲಾದ ವಿಪತ್ತುಂಟೇ? ಪ್ರಪಂಚ ದಲ್ಲಿ ಇದಕ್ಕಿಂತ ಘೋರವಾದ ನೀಚತೆಯುಂಟೇ? ಇದುವರೆಗೆ ಯಾವ ಪಿತನೂ ತನ್ನ ಪುತ್ರನಿಗೆ ಇಂತಹ ನಿರ್ದಯ ಕಳಂಕವನ್ನು ಹಚ್ಚಿರಲಾರನು! ಯಾರ ಗುಣವನ್ನು ಎಲ್ಲರೂ ಪ್ರಶಂಸಿಸುತ್ತಿದ್ದರೋ, ಯಾರು ಇತರ ಯುವಕ ರಿಗೆಲ್ಲ ಆದರ್ಶಪ್ರಾಯನೆಂದು ಗಣಿಸಲ್ಪಡುತ್ತಿದ್ದನೋ, ಯಾರ ಬಳಿ ಅಪವಿತ್ರ ಭಾವನೆಗಳು ಸುಳಿದು ಸಹ ಹೋಗಲಿಲ್ಲವೋ, ಅಂತಹವನಿಗೆ ಈ ಘೋರತಮ ಕಳಂಕವೇ?

ಶಾಲೆಯ ಎರಡನೆಯ ಗಂಟೆಯೂ ಬಾರಿಸಿತು. ಹುಡುಗರೆಲ್ಲರೂ ತಮ್ಮ ತಮ್ಮ ಕೊಠಡಿಗೆ ಬಂದರು. ಆದರೆ ಮಾನಸರಾಮನು ಮಾತ್ರ ಗದ್ದದ ಮೇಲೆ ಕೈಯನ್ನಿಟ್ಟು, ಎವೆಯಿಕ್ಕದೆ ಭೂಮಿಯನ್ನೇ ದಿಟ್ಟಿಸುತ್ತ ಯೋಚನಾಕ್ರಾಂತನಾಗಿ ಕುಳಿತಿದ್ದನು. ತನ್ನ ಸರ್ವಸ್ವವೂ ಜಲಮಗ್ನವಾಯಿತು, ತಾನಿನ್ನು ಯಾರಿಗೂ ಮುಖ ತೋರಿಸಲಾರೆ—ಎಂದು ಅವನಿಗೆನಿಸಿತು. ಶಾಲೆಯಲ್ಲಿ ಗೈರುಹಾಜರಿ ಹಾಕುವರು, ಜುಲ್ಮಾನೆ ಹಾಕುವರು—ಎಂಬ ಯೋಚನೆಯು ಆವನಿಗಿರಲಿಲ್ಲ ತನ್ನ ಸರ್ವಸ್ವವೂ ಸೂರೆಹೋಗುತ್ತಿರುವಾಗ ಈ ಸಣ್ಣ ಸಣ್ಣ ವಿಷಯಗಳ ಪರಿವೆಯೇನು ? ಇಂತಹ ಘೋರ ಕಳಂಕವನ್ನು ಕೇಳಿಯೂ ಜೀವಿಸಿರಬೇಕೇ ? ತನ್ನ ಜೀವನಕ್ಕೆ ಧಿಕ್ಕಾರ !–ಎಂದುಕೊಂಡನು.

ಅಮ್ಮಾ ! ನೀನು ಎಲ್ಲಿರುವೆ ? ಯಾರನ್ನು ನಿನ್ನ ಜೀವನಾಧಾರವೆಂದು ಬಗೆದಿದ್ದೆಯೋ, ಯಾರಿಗೋಸ್ಕರ ಪ್ರಾಣ ತೆರುತ್ತಿದ್ದೆಯೋ, ಆ ನಿನ್ನ ಪುತ್ರನು ಘೋರ ಸಂಕಟದಲ್ಲಿರುವನು ! ಆವನ ಪಿತನೇ ಅವನ ಕುತ್ತಿಗೆ ಕುಯ್ಯಲೆಳಸುವನು. ಹಾ ! ನೀನೆಲ್ಲಿರುವೆ ?–ಎಂದು ಶೋಕಾತಿರೇಕದಿಂದ ಕಿರಿಚಿಕೊಂಡನು.

ಪುನಃ ಶಾಂತಚಿತ್ತದಿಂದ ಯೋಚಿಸತೊಡಗಿದನು—ನನ್ನ ಮೇಲೆ ಈ ಸಂದೇಹವೇಕೆ ? ಇದರ ಕಾರಣವೇನು ? ಈ ಸಂದೇಹ ಉಂಟಾಗುವ ಯಾವ ವಿಷಯವನ್ನು ಅವರು ನನ್ನಲ್ಲಿ ಕಂಡರು ? ಎಷ್ಟೇ ಆಗಲಿ, ಅವರು ನನ್ನ ತಂದೆಯಲ್ಲವೇ ? ನಿಷ್ಕಾರಣವಾಗಿ ನನ್ನನ್ನು ಅಪರಾಧಿ ಎನ್ನುವರೇ ? ಯಾವುದೋ ವಿಷಯವನ್ನು ಅವರು ಕೇಳಿರಬೇಕು; ಅಥವಾ ಕಂಡಿರಬೇಕು. ಅವರಿಗೆ ನನ್ನಲ್ಲಿ ಎಷ್ಟು ವಾತ್ಸಲ್ಯವಿತ್ತು ? ನನ್ನನ್ನು ಬಿಟ್ಟು ಊಟಮಾಡುತ್ತಿರಲಿಲ್ಲ ! ಈಗ ಅವರೇ ನನ್ನ ಶತ್ರುವಾಗಬೇಕಾದರೆ, ಅದಕ್ಕೆ ಕಾರಣವಿರಲೇಬೇಕು !

ಅದಿರಲಿ ! ಈ ಸಂದೇಹದ ಬೀಜಾರೋಪಣ ಎಂದಾಯಿತು ? ನನ್ನನ್ನು ಹಾಸ್ಟಲಿನಲ್ಲಿರಿಸುವ ಯೋಚನೆ ಹಿಂದಿನಿಂದಲೂ ಇತ್ತು. ಈ ಹಿಂದೆ ಒಂದು ದಿನ ರಾತ್ರಿ ಅವರು ನನ್ನ ಕೊಠಡಿಗೆ ಬಂದು ನನ್ನನ್ನು ಪರೀಕ್ಷಿಸತೊಡಗಿದಾಗಲೇ ಅವರ ಮುಖಭಾವನೆಗಳು ಬದಲಾಯಿಸಿದ್ದವು. ಅವರ ಮನಸಿಗೆ ಅಪ್ರಿಯವಾಗುವಂತಹ ಯಾವ ವಿಷಯ ಅಂದು ನಡೆಯಿತು ? ನಾನು ಹೊಸ ಅಮ್ಮನ ಬಳಿ ತಿಂಡಿ ಕೇಳಲು ಹೋಗಿದ್ದೆ ! ಬಾಬೂಜೀಯವರು ಆಗ ಅಲ್ಲೇ ಕುಳಿತಿದ್ದರು. ಹೌದು, ಈಗ ನೆನಪಿಗೆ ಬರುವುದು ! ಆಗಲೇ ಅವರ ಕಣ್ಣುಗಳು

ಕೆಂಪಾಗಿದ್ದವು. ಅಂದಿನಿಂದಲೇ ಹೊಸ ಅಮ್ಮನು ನನ್ನ ಬಳಿ ಪಾಠ ಕಲಿಯುವುದನ್ನು ಬಿಟ್ಟುಬಿಟ್ಟರು. ನಾನು ಮನೆಯೊಳಗೆ ಹೋಗಿ ಬರುವುದು, ಹೊಸ ಅಮ್ಮನ ಸಂಗಡ ಮಾತನಾಡುವುದು, ಅವರಿಗೆ ಪಾಠ ಹೇಳಿಕೊಡುವುದು—ಇವೆಲ್ಲವೂ ತಂದೆಯವರಿಗೆ ಕೆಟ್ಟದ್ದಾಗಿ ತೋರುವುದೆಂದು ತಿಳಿದಿದ್ದರೆ ಇಂದು ಈ ಗತಿಯೇಕೆ ಬರುತ್ತಿತ್ತು ? ಪಾಪ, ಹೊಸ ಅಮ್ಮ ! ಅವರು ಎಷ್ಟು ಕೊರಗುತ್ತಿರಬಹುದು ?

ಇದುವರೆಗೂ ಮಾನಸರಾಮನಿಗೆ ನಿರ್ಮಲೆಯ ಯೋಚನೆ ಬಂದಿರಲಿಲ್ಲ. ಅವಳ ಯೋಚನೆಯುಂಟಾದೊಡನೆಯೇ ಅವನ ವ್ಯೆನವಿರೆದ್ದಿತು. ಹಾ! ಅವರ ಸರಳ, ಸ್ನೇಹಶೀಲ ಹೃದಯವು ಈ ಆಘಾತವನ್ನು ಹೇಗೆ ಸಹಿಸುವುದು ! ನಾನೆಂತಹ ಭ್ರಮೆಯಲ್ಲಿದ್ದೆ ? ಅವರ ಸ್ನೇಹವನ್ನು ಬೂಟಾಟಿಕೆ ಎಂದು ಬಗೆದೆ. ತಂದೆಯವರ ಭ್ರಮೆಯನ್ನು ಶಾಂತಗೊಳಿಸುವದಕ್ಕೋಸ್ಕರ ನನ್ನಲ್ಲಿ ಈ ಪರಿಯ ಕಟುವ್ಯವಹಾರ ನಡೆಸಬೇಕಾಗುವದೆಂದು ನನಗೇನು ಗೊತ್ತಿತ್ತು ? ಆಹಾ ! ನಾನು ಅವರಿಗೆಂತಹ ಅನ್ಯಾಯ ಮಾಡಿದೆ ? ಅವರ ಸ್ಥಿತಿಯು ನನ್ನ ಸ್ಥಿತಿಗಿಂತ ಅಸಹ್ಯವಾಗಿಯೇ ಇರಬೇಕು ! ನಾನಾದರೆ ಇಲ್ಲಿಗೆ ಬಂದುಬಿಟ್ಟೆ ! ಅವರು ಎಲ್ಲಿ ಹೋಗುವರು ? ಎರಡು ದಿನಗಳಿಂದಲೂ ಊಟ ಮಾಡಿಲ್ಲವೆಂದೂ, ಯಾವಾಗಲೂ ಅಳುತ್ತಿರುವರೆಂದೂ ಜಯರಾಮನು ಹೇಳಿದನು. ಅವರಿಗೆ ಯಾವ ರೀತಿ ತಿಳಿಸಲಿ ? ಈ ಹತಭಾಗ್ಯನಿಗೋಸ್ಕರ ಅವರು ತಮ್ಮ ತಲೆಗೇಕೆ ವಿಪತ್ತಿ ತಂದುಕೊಳ್ಳುವರು ? ನನ್ನ ವಿಷಯ ಬಾರಿಬಾರಿಗೂ ಏಕೆ ಕೇಳುವರು ? ಆಗಾಗ ನನಗೇಕೆ ಹೇಳಿ ಕಳುಹುವರು ? ಅವರ ವಿಷಯವಾಗಿ ನನ್ನ ಮನಸ್ಸಿನಲ್ಲಾವ ದೂಷಣೆಯೂ ಇಲ್ಲವೆಂದು ಹೇಗೆ ತಿಳಿಸಲಿ ? ಅವರು ಈಗಲೂ ಅಳುತ್ತ ಕುಳಿತಿರಬಹುದು ? ಎಂತಹ ಅನರ್ಥವಾಯಿತು ? ಬಾಬೂಜೀಯವರಿಗೆ ಏನಾಗಿಹೋಯಿತು ? ಇದಕ್ಕಾಗಿಯೇ ವಿವಾಹ ಮಾಡಿಕೊಂಡರೇ ? ಓರ್ವ ಬಾಲಿಕೆಯ ಹತ್ಯೆ ಮಾಡುವುದಕ್ಕಾಗಿ ಅವಳನ್ನು ಕರೆತಂದರೇ ? ಇಂತಹ ಕೋಮಲ ಪುಷ್ಪವನ್ನು ಕಸಕಿ ಹಾಕುವುದಕ್ಕಾಗಿ ಕಿತ್ತು ತಂದರೇ ?

ಅವರ ಉದ್ಧಾರವೆಂತಾಗುವುದು ? ನಿರಪರಾಧ ಮುಖವು ಯಾವ ರೀತಿ ಉಜ್ವಲವಾಗುವುದು ? ಕೇವಲಂ ನನ್ನೊಡನೆ ಸ್ನೇಹದಿಂದ ವರ್ತಿಸಿದ್ದಕ್ಕಾಗಿ ಅವರಿಗೆ ಈ ದಂಡನೆಯೇ ? ಅವರ ಸೌಜನ್ಯಕ್ಕೆ ಇಂತಹ ಉಪಹಾರವೇ ?

ಈ ಪರಿಯ ನಿರ್ದಯ ಆಘಾತವನ್ನು ಅವರು ಸಹಿಸುತ್ತಿದ್ದರೆ, ನಾನು ಹೇಗೆ ಸುಮ್ಮನೆ ಕುಳಿತಿರಲಿ ? ನನ್ನ ಮಾನರಕ್ಷಣೆಗಾಗಲ್ಲ; ಅವರ ಆತ್ಮರಕ್ಷಣೆಗೋಸ್ಕರ ಈ ಪ್ರಾಣವನ್ನು ಬಲಿದಾನ ಮಾಡಲೇಬೇಕು ! ಇದರ ಹೊರತು ಉದ್ಧಾರದ ಬೇರಾವ ಉಪಾಯವೂ ಇಲ್ಲ. ಆಹಾ ! ಮನಸಿನಲ್ಲಿ ಎಂತೆಂತಹ ಆಸೆಗಳಿದ್ದವು! ಎಲ್ಲವನ್ನೂ ಮಣ್ಣುಪಾಲು ಮಾಡಬೇಕಾಯಿತು ! ನನ್ನ ಕಾರಣದಿಂದ ಒಬ್ಬ ಸಾಧ್ವೀ ಸತಿಯ ಮೇಲೆ ಸಂದೇಹವೇ ? ಹೇಗಾದರೂ ಅವರನ್ನು ರಕ್ಷಿಸುವುದು ನನ್ನ ಕರ್ತವ್ಯ ! ಇದೇ ನಿಜವಾದ ವೀರತೆ ! ಮಾತೆ, ನನ್ನ ರಕ್ತದಿಂದ ಈ ಕಳಂಕವನ್ನು ತೊಳೆಯುವೆನು ! ಇದರಲ್ಲೇ ನಮ್ಮೀರ್ವರ ಕಲ್ಯಾಣವೂ ಇರುವುದು.

ಮಾನಸರಾಮನು ದಿನವೆಲ್ಲಾ ಇದೇ ಯೋಚನೆಯಲ್ಲಿ ಮಗ್ನನಾಗಿದ್ದನು. ಸಾಯಂಕಾಲ ಅವನ ಇಬ್ಬರು ತಮ್ಮಂದಿರೂ ಬಂದರು. ಮನೆಗೆ ಬಾರೆಂದು ಅವನನ್ನು ಬಲಾತ್ಕಾರ ಮಾಡತೊಡಗಿದರು.

ಶ್ರೀರಾಮ – ಅಣ್ಣಾ ! ಏಕೆ ಬರುವುದಿಲ್ಲ ? ಬಾ, ಹೋಗೋಣ !

ಮಾನಸರಾಮ—ಇಲ್ಲ; ನನಗೆ ಪುರಸತ್ತಿಲ್ಲ.

ಜಯರಾಮ—ನಾಳೆ ಭಾನುವಾರವಲ್ಲವೇ ?

ಮಾನಸರಾಮ—ಭಾನುವಾರವಾದರೂ ಕೆಲಸವಿರುವುದು !

ಜಯರಾಮ—ಹಾಗಾದರೆ ನಾಳೆ ಬರುವೆಯಾ ?

ಮಾನಸರಾಮ—ಇಲ್ಲ, ನಾಳೆ ನಾನೊಂದು ಮ್ಯಾಚಿಗೆ ಹೋಗಬೇ.....

ಶ್ರೀರಾಮ—ಅಮ್ಮ ಲಾಡು ಮಾಡುತ್ತಿರುವರು. ನೀನು ಬರದಿದ್ದರೆ ನಿನಗೊಂದೂ ಸಿಗುವುದಿಲ್ಲ ! ನಾನು ನೀನು ಇಬ್ಬರೇ ತಿಂದುಬಿಡೋಣ ಜಯಾ ! ಅಣ್ಣನಿಗೆ ಬೇಡ !

ಜಯರಾಮ—ಅಣ್ಣಾ, ನಾಳೆ ನೀನು ಬರದೇಹೋದರೆ ಬಹುಶಃ ಅಮ್ಮನೇ ಇಲ್ಲಿಗೆ ಬರಬಹುದು !

ಮಾನಸರಾಮ—ನಿಜವಾಗಿಯೂ ? ಇಲ್ಲ, ಇಲ್ಲ; ಅವರು ಬರಲಾರರು! ಇಲ್ಲಿಗೆ ಬಂದರಾದರೆ ಬಹಳ ತೊಂದರೆಯಾಗುವುದು. ನಾನು ಮ್ಯಾಚಿಗೆ ಹೋಗಿರುವೆನೆಂದು ಅವರಿಗೆ ತಿಳಿಸಿಬಿಡು !

ಜಯರಾಮ—ನಾನೇಕೆ ಸುಳ್ಳು ಹೇಳಲಿ ? ಮುಖ ಗಂಟಿಕ್ಕಿಕೊಂಡು

ಕುಳಿತಿದ್ದನೆಂದು ಹೇಳುವೆನು. ಖಂಡಿತ ಅವರನ್ನು ಸಂಗಡ ಕರೆತರುವೆನು ನೋಡುತ್ತಿರು.

ಶ್ರೀರಾಮ—ಈ ದಿನ ಕ್ಲಾಸಿಗೇಕೆ ಹೋಗಲಿಲ್ಲ ? ಸುಮ್ಮನೆ ಮಲಗಿದ್ದನೆಂದು ಹೇಳುವೆನು !

ನಾಳೆ ಬರುವೆನೆಂದು ಸುಳ್ಳುಹೇಳಿ ಮಾನಸರಾಮನು ತಮ್ಮಂದಿರಿಂದ ತಪ್ಪಿಸಿಕೊಂಡನು. ಅವರು ಹೊರಟುಹೋದನಂತರ ಪುನಃ ಚಿಂತೆಯಲ್ಲಿ ಮುಳುಗಿದನು. ರಾತ್ರಿಯೆಲ್ಲಾ ಆ ಪಕ್ಕ ಈ ಪಕ್ಕ ಹೊರಳಾಡುತ್ತ ಕಾಲ ತಳ್ಳಿದನು. ರಜಾ ದಿನವೂ ಕುಳಿತಿದ್ದಂತೆಯೇ ಕಳೆಯಿತು. ಅಮ್ಮನು ನಿಜವಾಗಿಯೂ ಎಲ್ಲಿ ಬಂದುಬಿಡುವರೋ—ಎಂದು ದಿನವೆಲ್ಲಾ ಅವನಿಗೆ ಅನುಮಾನವಿತ್ತು. ಹೊರಗಡೆ ಯಾವುದಾದರೂ ಗಾಡಿಯ ಶಬ್ದವಾದರೆ, ಅವನ ಎದೆ ಧಗ್ಗೆನ್ನುತ್ತಿತ್ತು !

ಹಾಸ್ಟಲಿನಲ್ಲಿ ಒಂದು ಸಣ್ಣ ಔಷಧಾಲಯವಿತ್ತು. ಸಾಯಂಕಾಲದ ಸಮಯದಲ್ಲಿ ಒಬ್ಬ ಡಾಕ್ಟರು ಒಂದು ಘಂಟೆ ಕಾಲ ಅಲ್ಲಿಗೆ ಬಂದು ಹೋಗುತ್ತಿದ್ದರು. ಯಾರಾದರೂ ಹುಡುಗರು ಖಾಯಿಲೆ ಇದ್ದರೆ ಅವರಿಗೆ ಔಷಧ ಕೊಡುತ್ತಿದ್ದರು. ಇಂದು ಅವರು ಬಂದಾಗ ಮಾನಸರಾಮನು ಏನೋ ಯೋಚಿಸುತ್ತ ಅವರ ಬಳಿ ಹೋಗಿ ನಿಂತನು. ಅವರು ಮಾನಸರಾಮನನ್ನು ಚೆನ್ನಾಗಿ ಬಲ್ಲರು. ಆತನನ್ನು ನೋಡಿದೊಡನೆಯೇ ಆಶ್ಚರ್ಯದಿಂದ ಕೇಳಿದರು—ಇದೇಕೆ ಹೀಗಾಗಿರುವೆ ? ದಿನ–ದಿನಕ್ಕೂ ಸವೆದು ಹೋಗುತ್ತಿರುವೆ ? ಬಾ, ಇಲ್ಲಿ ! ಏನಾಗಿದೆ ನೋಡೋಣ !

ಮಾನಸರಾಮನು ನಸುನಕ್ಕು—'ನನಗೆ ಜೀವನರೋಗ. ನಿಮ್ಮ ಬಳಿ ಇದಕ್ಕೂ ಔಷಧಿ ಇದೆಯೇ ?' ಎಂದನು.

ಡಾಕ್ಟರ್—ನಿನ್ನನ್ನು ಪರೀಕ್ಷಿಸಿ ನೋಡುವೆನು. ನಿನ್ನ ಮುಖವೇ ಬದಲಾಯಿಸಿ ಹೋಗಿದೆ. ಗುರ್ತು ಹಿಡಿಯಲು ಸಹ ಆಗುವಂತಿಲ್ಲ !

ಎನ್ನುತ್ತ ಅವರು ಮಾನಸರಾಮನ ಕೈಯನ್ನು ಹಿಡಿದುಕೊಂಡರು; ಮತ್ತು ಎದೆ, ಬೆನ್ನು, ನಾಲಿಗೆ, ಕಣ್ಣು—ಮುಂತಾಗಿ ಎಲ್ಲವನ್ನು ಪರೀಕ್ಷಿಸಿ ನೋಡಿದರು. ಬಳಿಕ ಚಿಂತಿತರಾಗಿ ಹೇಳಿದರು—ನಾನು ಈ ದಿನವೇ ವಕೀಲ ಸಾಹೇಬರನ್ನು ಕಾಣುವೆನು. ನಿನಗೆ ಥೈಸಿಸ್ ಆಗಿದೆ ಲಕ್ಷಣಗಳೆಲ್ಲಾ ಅದರದೇ!

ಮಾನಸರಾಮನು ಉತ್ಸುಕತೆಯಿಂದ ಕೇಳಿದನು—ಹಾಗಿದ್ದರೆ ಇನ್ನೆಷ್ಟು ದಿನಗಳಲ್ಲಿ ನನ್ನ ಸಮಾಪ್ತಿಯಾಗುವುದು, ಡಾಕ್ಟರ್‌ಸಾಹೇಬರೇ ?

ಡಾಕ್ಟರ್—ಎಂತಹ ಮಾತನ್ನಾಡುವೆ ? ನಾನು ವಕೀಲಸಾಹೇಬರನ್ನು ಕಂಡು, ನಿನ್ನನ್ನು ಯಾವುದಾದರೂ ಪರ್ವತಪ್ರದೇಶಕ್ಕೆ ಕಳುಹಿಸುವ ಸಲಹೆ ಕೊಡುವೆನು. ಭಗವಂತನ ಕೃಪೆಯಿದ್ದರೆ ಬಹಳ ಬೇಗ ಗುಣಮುಖನಾಗುವೆ. ಖಾಯಿಲೆ ಇನ್ನೂ ಆರಂಭಾವಸ್ಥೆಯಲ್ಲಿದೆ.

ಮಾನಸರಾಮ—ಹಾಗಿದ್ದರೆ ಇನ್ನೂ ಒಂದೆರಡು ವರ್ಷಗಳು ಬೇಕಾಗ ಬಹುದು. ಅಷ್ಟು ದಿನಗಳು ನಿರೀಕ್ಷಿಸಲಾರೆ, ಡಾಕ್ಟರ್‌ಸಾಹೇಬರೇ ? ನನಗೆ ಥೈಸಿಸೂ ಇಲ್ಲ; ಬೇರೇನೂ ಖಾಯಿಲೆ ಇಲ್ಲ. ನೀವು ವೃಥಾ ತಂದೆಯವರನ್ನು ತೊಂದರೆಗೀಡುಮಾಡಬೇಡಿ ! ಸದ್ಯಕ್ಕೆ ನನಗೆ ತಲೆ ನೋಯುತ್ತಿದೆ; ಅದಕ್ಕೆ ಔಷಧಿ ಕೊಡಿ. ಎರಡು ರಾತ್ರಿಯಿಂದ ನಿದ್ರೆಯಿಲ್ಲ; ನಿದ್ರೆ ಬರುವಂತೆ ಏನಾದರೂ ಸೇರಿಸಿ ಕೊಡಿ !

ಡಾಕ್ಟರು ವಿಷದೌಷಧಿಯ ಅಲಮಾರನ್ನು ತೆಗೆದರು. ಮತ್ತು ಒಂದು ಸೀಸೆಯಿಂದ ಸ್ವಲ್ಪ ಔಷಧಿಯನ್ನು ಮಾನಸರಾಮನಿಗೆ ಕೊಟ್ಟರು. 'ಇದು ವಿಷದೌಷಧಿ ! ಇದನ್ನು ಕುಡಿದರೆ ಮನುಷ್ಯರು ಸತ್ತುಹೋಗುವುದಿಲ್ಲವೇ ?' ಎಂದು ಹೇಳಿದನು.

ಡಾಕ್ಟರ್—ಇಲ್ಲ; ಸತ್ತುಹೋಗುವುದಿಲ್ಲ. ಆದರೆ ತಲೆ ಸುತ್ತುವುದು.

ಮಾನಸರಾಮ—ಕುಡಿದ ಕೂಡಲೇ ಪ್ರಾಣ ಹೋಗುವಂತಹ ಯಾವುದಾದರೂ ಔಷಧಿ ಇದರಲ್ಲಿದೆಯೋ ?

ಡಾಕ್ಟರ್—ಒಂದೇಕೆ, ಎರಡೇಕೆ ? ಅಂತಹ ಔಷಧಿಗಳು ಬೇಕಾದಷ್ಟಿವೆ. ಅದೋ, ಆ ಸೀಸೆಯಲ್ಲಿನ ಒಂದು ತೊಟ್ಟು ಹೊಟ್ಟೆಗೆ ಸೇರಿದರೂ ಸಾಕು. ನಿಮಿಷಮಾತ್ರದಲ್ಲಿ ಮರಣ ಹೊಂದುವರು !

ಮಾನಸರಾಮ—ವಿಷವನ್ನು ಕುಡಿದರೆ ಬಹಳ ಕಷ್ಟವಾಗುವುದಿಲ್ಲವೇ ?

ಡಾಕ್ಟರ್—ಇಲ್ಲ; ಎಲ್ಲಾ ವಿಷಗಳಿಂದಲೂ ಕಷ್ಟವಾಗುವುದಿಲ್ಲ. ಕೆಲವಂತೂ ಕುಡಿದ ಕೂಡಲೇ ಪ್ರಾಣಹೋಗುವುದು !

ಮಾನಸರಾಮನು ಮನಸಿನಲ್ಲೇ ಯೋಚಿಸಿಕೊಂಡನು—ಹಾಗಿದ್ದರೆ ಪ್ರಾಣಬಿಡುವುದು ಬಹಳ ಸುಲಭವೇ ಆಯಿತು ! ಜನರು ಇದಕ್ಕಾಗಿ ಇಷ್ಟೇಕೆ

ಹೆದರುವರು ? ಆ ಸೀಸೆಯು ಸಿಗುವುದಾದರೂ ಹೇಗೆ ? ಔಷಧಿಯ ಹೆಸರನ್ನು ಕೇಳಿಕೊಂಡು, ಬೇರೆ ಯಾರ ಬಳಿಯಾದರೂ ತೆಗೆದುಕೊಳ್ಳೋಣವೆಂದರೆ ಅವರೂ ಕೊಡುವುದಿಲ್ಲ. ಉಂಹುಂ ! ಈ ಸೀಸೆ ಸಿಗುವುದೇನೂ ಕಷ್ಟವಿಲ್ಲ ! ಇದರಿಂದ ಪ್ರಾಣ ಬಹಳ ಸುಲಭವಾಗಿ ಹೋಗುವುದೆಂದು ತಿಳಿಯಿತಲ್ಲಾ ? ಎಂದುಕೊಂಡು ಅತ್ಯಂತ ಪ್ರಸನ್ನನಾದನು. ಅವನ ಮನಸಿನ ಭಾರವು ಕಡಿಮೆಯಾದಂತಾಯಿತು! ಚಿಂತೆಯ ಮೇಘರಾಶಿಗಳು ಛಿನ್ನ ಭಿನ್ನವಾದುವು. ಎಷ್ಟೋ ತಿಂಗಳ ನಂತರ ಇಂದು ಅವನ ಮನದಲ್ಲಿ ಒಂದು ಬಗೆಯ ಸ್ಫೂರ್ತಿಯುಂಟಾಯಿತು. ಅವನ ಕೆಲವು ಮಿತ್ರರು ಹಾಸ್ಟಲ್ ವಾರ್ಡರನ ಅನುಮತಿ ಪಡೆದು ಸಿನೆಮಾ ನೋಡಲು ಹೊರಟಿದ್ದರು ಮಾನಸರಾಮನೂ ಅವರ ಸಂಗಡ ಹೊರಟನು. ತನಗಿಂತ ಸುಖಿ ಪ್ರಪಂಚದಲ್ಲಿ ಇನ್ನಾರೂ ಇಲ್ಲವೋ ಎಂಬಷ್ಟು ಸಂತುಷ್ಟನಾಗಿದ್ದನು. ಸಿನೆಮಾದ ನಕಲಿಯನ್ನು ನೋಡಿ, ನಕ್ಕುನಕ್ಕು ಸಾಕಾಗುತ್ತಿದ್ದನು ! ಹಾಡನ್ನು ಕೇಳಿ ಮತ್ತನಾದಂತೆ 'ಓಹೋಹೋ' ಎಂದು ಕಿರಿಚಿಕೊಳ್ಳುತ್ತಿದ್ದನು ! ದರ್ಶಕರ ದೃಷ್ಟಿ ಆಗಾಗ ಅವನ ಕಡೆ ಬೀಳುತ್ತಿತ್ತು. ಇವನಾವ ರಸಿಕ, ಭಾವುಕ ಮಹಾಶಯ ? ಎಂದುಕೊಳ್ಳುತ್ತಿದ್ದರು. ಅವನ ಉಚ್ಛೃಂಖಲತೆಯನ್ನು ಕಂಡು ಅವನ ಮಿತ್ರರು ಆಚ್ಚರಿಗೊಂಡರು. ಮಾನಸರಾಮನು ಅತ್ಯಂತ ಗಂಭೀರ ಸ್ವಭಾವದ ಶಾಂತಚಿತ್ತ ಯುವಕ. ಇಂದೇಕೆ ಇಷ್ಟು ಹಾಸ್ಯಶೀಲನಾದನು ! ಅವನ ವಿನೋದಕ್ಕೆ ಪಾರಮೇರೆಗಳೇ ಇಲ್ಲವೇ ? ಎಂದುಕೊಳ್ಳುತ್ತಿದ್ದರು.

ಹತ್ತು ಘಂಟೆಗೆ ಥೀಯೇಟರಿನಿಂದ ಹಿಂದಿರುಗಿದನಂತರವೂ ಅವನ ಹಾಸ್ಯೋನ್ಮಾದ ಕಡಿಮೆಯಾಗಲಿಲ್ಲ. ಎಷ್ಟೋ ಮಿತ್ರರ ಮಂಚಗಳನ್ನು ಬದಲಾಯಿಸಿಟ್ಟನು. ಕೆಲವರ ಕೊಠಡಿ ಬಾಗಿಲವನ್ನು ಹೊರಗಿನಿಂದ ಮುಚ್ಚಿ ಅವರು ಒಳಗಿನಿಂದ ಡಬಡಬ ಬಡಿಯುವುದನ್ನು ಕೇಳಿ ನಕ್ಕನು. ಇಷ್ಟೇ ಅಲ್ಲ; ಹಾಸ್ಟಲಿನ ಅಧ್ಯಕ್ಷರಿಗೂ ಸಹ ನಿದ್ದೆ ಬಾರದಂತೆ ಗಲಾಟೆ ಮಾಡಿದನು. ಮಾನಸರಾಮನ ಈ ವಿಚಿತ್ರ ವರ್ತನೆಯನ್ನು ಕಂಡು ಅವರು ಖೇದವನ್ನು ವ್ಯಕ್ತಪಡಿಸಿದರು. ಪಾಪ, ಅವನ ಅಂತಸ್ಥಲದಲ್ಲಿ ಎಂತಹ ಭೀಷಣ ಕ್ರಾಂತಿಯಾಗುತ್ತಿತ್ತೆಂದು ಯಾರು ಬಲ್ಲರು ? ಸಂದೇಹದ ನಿರ್ದಯ ಆಘಾತವು ಅವನ ಲಜ್ಜೆ ಮತ್ತು ಆತ್ಮಸನ್ಮಾನಗಳನ್ನು ತುಳಿದು ಹಾಕಿತ್ತು ! ಅವನಿಗೆ ಅಪಮಾನ

ಮತ್ತು ತಿರಸ್ಕಾರಗಳ ಭಯವು ಲೇಶಮಾತ್ರವೂ ಇಲ್ಲದಂತಾಗಿತ್ತು ! ಇದು ವಿನೋದವಲ್ಲ; ಅವನ ಆತ್ಮದ ಕರುಣ ವಿಲಾಪ !

ಮಿತ್ರರೆಲ್ಲರೂ ಮಲಗಿದುದನ್ನು ಕಂಡು ತಾನೂ ತನ್ನ ಮಂಚದ ಮೇಲೆ ಮಲಗಿಕೊಂಡನು. ಆದರೆ ಅವನಿಗೆ ನಿದ್ದೆ ಬರಲಿಲ್ಲ ! ಒಂದು ಕ್ಷಣದ ನಂತರ ಎದ್ದು ಕುಳಿತು, ತನ್ನ ಪುಸ್ತಕಗಳೆಲ್ಲವನ್ನೂ ಕಟ್ಟಿ ಪೆಟ್ಟಿಗೆಯಲ್ಲಿರಿಸಿದನು. ಸಾಯುವುದೇ ಸ್ಥಿರವಾಗಿರುವಾಗ, ಓದಿ ಮಾಡುವುದಾದರೂ ಏನು ? ಈ ಯಾತನಾ ಪೂರ್ಣ ಜೀವನಕ್ಕಿಂತ ಮೃತ್ಯುವೇ ಮೇಲು !

ಎಂದು ಯೋಚಿಸುತ್ತಿರುವಂತೆಯೇ ಬೆಳಗಾಯಿತು. ಮೂರು ರಾತ್ರಿಗಳಿಂದ ಅವನು ನಿದ್ದೆ ಮಾಡಿರಲಿಲ್ಲ. ಈಗ ಎದ್ದು ಕುಳಿತೊಡನೆಯೇ ಕಾಲುಗಳು ಥರಥರ ಕಂಪಿಸತೊಡಗಿದವು; ತಲೆ ಗಿರ್ರನೆ ತಿರುಗತೊಡಗಿತು; ಕಣ್ಣುಗಳು ಉರಿಯುತ್ತಿದ್ದವು; ಶರೀರದ ಸರ್ವಾಂಗಗಳೂ ಶಿಥಿಲವಾಗಿದ್ದವು ! ಬಿಸಿಲೇರುತ್ತ ಬಂತು. ಕೈಕಾಲು ಮುಖ ತೊಳೆದುಕೊಂಡು ಬರಲು ಹೋಗುವಷ್ಟು ಸಹ ಶಕ್ತಿ ಅವನಿಗಿರಲಿಲ್ಲ. ಅಕಸ್ಮಾತ್ತಾಗಿ ಮನೆ ಅಡಿಗೆಯವಳು ಒಬ್ಬ ಆಳನ್ನು ಸಂಗಡ ಕರೆದುಕೊಂಡು, ಕೈಯಲ್ಲೇನೋ ಹಿಡಿದುಕೊಂಡು ಬರುತ್ತಿರುವುದನ್ನು ಕಂಡನು. ಅವನ ಎದೆ ಧಗ್ಗೆಂದಿತು. 'ಹಾ ಭಗವಂತ ! ಅವರು ಬಂದು ಬಿಟ್ಟರೇ ? ಇನ್ನೇನು ಗತಿ ? ಅಡಿಗೆಯವಳು ಒಬ್ಬಳೇ ಬಂದಿರಲಿಕ್ಕಿಲ್ಲ ! ಹೊರಗಡೆ ಗಾಡಿ ನಿಂತಿರಬಹುದು' ಎಂದು ಯೋಚಿಸಿಕೊಂಡು, ಕೈಲಾಗದಿದ್ದರೂ ಓಡಿ ಹೋಗಿ ಗಾಬರಿಯಿಂದ ಅವಳನ್ನು ಕೇಳಿದನು—ಅಮ್ಮನೂ ಬಂದಿರುವರೇ ? ಅಮ್ಮನು ಬಂದಿಲ್ಲವೆಂದು ತಿಳಿದ ನಂತರ ಅವನ ಚಿತ್ತ ಶಾಂತವಾಯಿತು. ಅಡಿಗೆಯವಳು ಹೇಳಿದಳು—ಮಾನಸಬಾಬೂ! ನೀವು ನಿನ್ನೆ ಏಕೆ ಬರಲಿಲ್ಲ ? ಬಹೂಜೀಯವರು ನಿಮ್ಮ ಹಾದಿಯನ್ನೇ ಕಾಯುತ್ತಿದ್ದರು. ಅವರ ಮೇಲೆ ನಿಮಗೇಕಿಷ್ಟು ಸಿಟ್ಟು ? ನಿಮ್ಮ ವಿಷಯವಾಗಿ ಅವರದಾವ ದೂರೂ ಇಲ್ಲವೆಂದು ಸದಾ ಹೇಳುತ್ತಿರುವರು. ನಿಮಗೆ ಈ ಮಿಠಾಯಿ ಕೊಟ್ಟು ಬಾರೆಂದೂ, ಮತ್ತು ಅವರ ಕಾರಣದಿಂದ ನೀವು ಮನೆಯೇಕೆ ಬಿಟ್ಟರೆಂದೂ ಅಳುತ್ತ ಹೇಳಿಕೊಂಡರು. ಈ ತಟ್ಟೆಯನ್ನು ಎಲ್ಲಿರಿಸಲಿ ?

ಮಾನಸರಾಮನು ಸಿಟ್ಟಿನಿಂದ ನುಡಿದನು—ತಟ್ಟೆಯನ್ನು ನಿನ್ನ ತಲೆಯ ಮೇಲೆ ಇಟ್ಟುಕೋ ! ಅಲ್ಲಿಂದ ಮಿಠಾಯಿ ಹೊತ್ತುಕೊಂಡು ಬಂದಳಂತೆ ?

ಜೋಕೆ! ಇನ್ನು ಮೇಲೆ ಇಲ್ಲಿಗೆಂದಾದರೂ ಬಂದೀಯೆ! ನನಗೆ ಅವರ ಮಿಠಾಯಿ ಬೇಡವೆಂದು ಹೋಗಿ ಹೇಳು. ಅವರ ಮನೆಯಲ್ಲಿ ಅವರು ಸುಖದಿಂದಿರಲಿ! ನಾನು ಇಲ್ಲೇ ಆರಾಮದಿಂದಿರುವೆನು; ಬೇಕಾದಂತೆ ತಿನ್ನುವೆನು; ಆನಂದ ದಿಂದಿರುವೆನು! ನನಗಾರ ಭಯವೂ ಇಲ್ಲ. ಅವರ ಮನಸಿಗೆ ಬಂದುದನ್ನೆಲ್ಲಾ ಮಾಡಲಿ! ಆಲಹಾಬಾದ್, ಕಲ್ಕತ್ತ, ಲಕ್ನೋ ಎಲ್ಲಿಗೆ ಬೇಕಾದರೂ ಕಳು ಹಲಿ! ಈ ಕ್ಷಣ ಹೊರಟು ಹೋಗುವೆನು. ನನಗೆ ಈ ಊರಿನಂತೆಯೇ ಬೇರೆ ಊರು. ಇಲ್ಲಿಟ್ಟಿರುವುದಾದರೂ ಏನು?

ಅಡಿಗೆಯವಳು—ಮಿಠಾಯಿಯನ್ನು ಇಟ್ಟುಕೊಳ್ಳಿ, ಬಾಬೂ! ಇಲ್ಲ ದಿದ್ದರೆ ಅವರು ಅತ್ತುಅತ್ತು ಸತ್ತು ಹೋಗುವರು! ನಿಜವಾಗಿಯೂ ಹೇಳು ವೆನು?

ಮಾನಸರಾಮನು ಉಕ್ಕಿಬರುತ್ತಿದ್ದ ಕಂಬನಿಯನ್ನು ತಡೆದು ನುಡಿದನು—ಸತ್ತುಹೋಗುವರೇ? ಸಾಯಲಿ, ನನಗೇನು? ಅವರಿಂದ ನನಗಾದ ಸುಖ ವಾದರೂ ಏನು? ಅವರಿಗಾಗಿ ನಾನೇಕೆ ಮರುಗಲಿ? ನನ್ನ ಸರ್ವನಾಶ ಮಾಡಿ ಬಿಟ್ಟರು? ನನಗೆ ಯಾರ ಸಂಗಡಲೂ ಏನೂ ಹೇಳಿ ಕಳುಹಿಸಬೇಡವೆಂದು ಅವರಿಗೆ ಹೋಗಿ ತಿಳಿಸು!

ಅಡಿಗೆಯವಳು—ಇಲ್ಲಿ ಬೇಕಾದಂತೆ ತಿನ್ನುವೆನು, ಸಂತೋಷದಿಂದಿರುವೆ ನೆಂದು ಹೇಳುವಿರಿ. ಆದರೆ ನಿಮ್ಮ ದೇಹವು ಅರ್ಧಕ್ಕರ್ಧ ಸಹ ಇಲ್ಲ! ಇಲ್ಲಿಗೆ ಬರುವಾಗ ಇದ್ದಂತೆ ಕೂಡ ಈಗಿಲ್ಲ!

ಮಾನಸರಾಮ—ನಿನ್ನ ಕಣ್ಣುಗಳೇ ಬದಲಾಯಿಸಿರಬೇಕು? ಇನ್ನು ನಾಲ್ಕಾರು ದಿನಗಳಲ್ಲಿ ಎಷ್ಟು ಪುಷ್ಟ ಬಲಿಷ್ಠನಾಗುವೆನೆಂದು ನೋಡುತ್ತಿರು! ನನಗೋಸ್ಕರ ಅಳಬೇಡವೆಂದು ಅವರಿಗೆ ಹೋಗಿ ಹೇಳು. ನನಗಾಗಿ ಅತ್ತು ಕರೆದು, ಊಟ ಬಿಟ್ಟರೆ ಅದಕ್ಕೆ ನಾನೇನು ಮಾಡಲಿ? ನನ್ನನ್ನು ಮನೆಯಿಂದ ಹೊರದೂಡಿದರು. ಈಗ ತಾವೇ ಸಂತೋಷದಿಂದಿರಲಿ. ಪ್ರೀತಿಯ ತೋರಿಕೆ ಯನ್ನು ತೋರಬಂದಿರುವರು? ಇಂತಹ ಬೂಬಾಟಿಕೆ ನಾನೆಷ್ಟು ಕಂಡಿರು ವೆನೋ?

ಅಡಿಗೆಯವಳು ಹೊರಟು ಹೋದಳು. ಅವಳ ಸಂಗಡ ಮಾತನಾಡು ತ್ತಿದ್ದಂತೆಯೇ ಮಾನಸರಾಮನಿಗೆ ಸ್ವಲ್ಪ ಚಳಿ ಬಂದಿತ್ತು. ಈ ಅಭಿನಯ

ಮಾಡುವುದಕ್ಕಾಗಿ ತನ್ನ ಮನೋಭಾವಗಳನ್ನು ಅಷ್ಟು ಅದುಮಿರಿಸುವುದು ಅವನಿಗೆ ಅಸಾಧ್ಯವಾಯಿತು. ಈ ಕುಟಿಲ ವ್ಯವಹಾರವನ್ನು ಆದಷ್ಟು ಜಾಗ್ರತೆ ಅಂತ್ಯಗೊಳಿಸಲು ಅವನ ಆತ್ಮಸನ್ಮಾನವು ಆತುರಗೊಳ್ಳುತ್ತಿತ್ತು. ಆದರೆ, ಇದರ ಪರಿಣಾಮವೇನಾಗುವುದು ? ನಿರ್ಮಲೆಯು ಈ ಆಘಾತವನ್ನು ಸಹಿಸ ಬಲ್ಲಳೇ ? ಇದುವರೆಗೆ ಮೃತ್ಯುಕಲ್ಪನೆ ಮಾಡುವಾಗ ಅವನು ಬೇರೆ ಯಾರ ವಿಷಯವನ್ನೂ ಯೋಚಿಸುತ್ತಿರಲಿಲ್ಲ. ಆದರೆ ತನ್ನ ಜೀವನದ ಸಂಗಡ ಇನ್ನೊಂದು ಪ್ರಾಣಿಯ ಜೀವನಸೂತ್ರವು ಬೆರೆತಿರುವುದೆಂದು ಇಂದು ಅವನಿಗೆ ಜ್ಞಾತವಾಯಿತು ! ಅವಳ ನಿಷ್ಠುರತೆಯೇ ನನ್ನ ಪ್ರಾಣಹತ್ಯೆಗೆ ಕಾರಣವೆಂದು ನಿರ್ಮಲೆಯು ತಿಳಿದುಕೊಳ್ಳುವಳು. ಆದರೆ, ಇದರಿಂದ ಅವಳ ಕೋಮಲ ಹೃದಯವು ಚೂರುಚೂರಾಗುವುದಿಲ್ಲವೇ ? ಅವಳ ಜೀವನವು ಸಂಕಟದಲ್ಲಿ ಸಿಲುಕಿದೆ ! ಸಂದೇಹವೆಂಬ ಕಠೋರ ಬಲೆಯಲ್ಲಿ ಸಿಕ್ಕಿಬಿದ್ದ ಅಬಲೆಯು ತನ್ನನ್ನು ಹತ್ಯಾಕಾರಿಣಿಯೆಂದರಿತು, ಎಷ್ಟು ದಿನ ಜೀವಿಸಿರಬಲ್ಲಳು ?

ಮಾನಸರಾಮನು ಮಂಚದ ಮೇಲೆ ಮಲಗಿ ಕಂಬಳಿಯನ್ನು ಹೊದ್ದು ಕೊಂಡನು. ಅಷ್ಟಾದರೂ ಚಳಿಯಿಂದ ಅವನ ಶರೀರ ಕಂಪಿಸತೊಡಗಿತು. ಸ್ವಲ್ಪ ಹೊತ್ತಿನಲ್ಲೇ ಜೋರಾಗಿ ಜ್ವರ ಬಂತು; ಪ್ರಜ್ಞೆ ತಪ್ಪಿತು. ಈ ಅಚೇ ತನಾವಸ್ಥೆಯಲ್ಲಿ ಅವನಿಗೆ ವಿಧವಿಧವಾದ ಕನಸುಗಳು ಕಾಣತೊಡಗಿದವು. ತುಸು ಹೊತ್ತಿನಲ್ಲೇ ಅವನು ಬೆಚ್ಚಿ, ಕಣ್ಣುಬಿಟ್ಟನು. ನಂತರ ಪುನಃ ಪ್ರಜ್ಞೆ ತಪ್ಪಿತು.

ಅಕಸ್ಮಾತ್ ವಕೀಲಸಾಹೇಬರ ಧ್ವನಿಯನ್ನು ಕೇಳಿ ಪುನಃ ಅವನು ಬೆಚ್ಚಿಬಿದ್ದನು. ಕಂಬಳಿಯನ್ನು ತೆಗೆದೆಸೆದು ಮಂಚದಿಂದ ಕೆಳಗಿಳಿದು ನಿಂತು ಕೊಂಡನು. ಈಗಲೇ, ಇವರೆದುರಿಗೇ ಪ್ರಾಣಬಿಡಲೇ ? ಎನ್ನುವಷ್ಟು ಆವೇಗ ಅವನ ಮನದಲ್ಲುಂಟಾಯಿತು. ನಾನು ಸತ್ತರೆ ಇವರಿಗೆ ನಿಜವಾಗಿಯೂ ಸಂತೋಷವಾಗುವುದು. ಬಹುಶಃ ಇನ್ನೆಷ್ಟು ಹೊತ್ತಿನಲ್ಲಿ ಸಾಯುವನೆಂದು ನೋಡಿಕೊಂಡು ಹೋಗುವುದಕ್ಕಾಗಿಯೇ ಬಂದಿರಬಹುದು—ಎಂದು ಕೊಂಡನು. ವಕೀಲಸಾಹೇಬರು ಅವನ ಕೈಹಿಡಿದುಕೊಂಡು ಕೇಳಿದರು— ದೇಹಸ್ಥಿತಿ ಹೇಗಿದೆ ಮಗು ? ಎದ್ದು ನಿಂತೆ ಏಕೆ ? ಮಲಗಿಕೋ !

ಮಾನಸರಾಮ—ನನ್ನ ದೇಹಸ್ಥಿತಿ ಸರಿಯಾಗಿದೆ! ನಿಮಗೆ ವೃಥಾ ತೊಂದರೆಯಾಯಿತು.

ಮುನ್ಷಿಯವರು ಏನೂ ಉತ್ತರ ಕೊಡಲಿಲ್ಲ. ಹುಡುಗನ ಸ್ಥಿತಿಯನ್ನು ಕಂಡು ಅವರ ಕಣ್ಣುಗಳು ಕಂಬನಿದುಂಬಿದವು. ಯಾವ ದಷ್ಟ-ಪುಷ್ಟ ಬಾಲಕನನ್ನು ನೋಡಿ ಚಿತ್ತವು ಪ್ರಸನ್ನವಾಗುತ್ತಿತ್ತೋ, ಅದೇ ಬಾಲಕನು ಇಂದು ಸವೆದು ಕಡ್ಡಿಯಾಗಿದ್ದನು. ಐದಾರು ದಿನಗಳಲ್ಲಿ ಆವನು ಗುರ್ತಿಸ ಲಾಗದಷ್ಟು ದುರ್ಬಲನಾಗಿದ್ದನು. ಮುನ್ಷಿಯುವರು ಅವನನ್ನು ಮೆಲ್ಲನೆ ಮಂಚದ ಮೇಲೆ ಮಲಗಿಸಿ ಕಂಬಳಿಯನ್ನು ಹೊದಿಸಿ, ಈಗೇನು ಮಾಡುವು ದೆಂದು ಯೋಚಿಸತೊಡಗಿದರು. ಹುಡುಗನು ಎಲ್ಲಿ ಕೈತಪ್ಪಿ ಹೋಗುವನೋ ಎಂಬ ಚಿಂತೆಯಿಂದ ವಿಹ್ವಲರಾದರು. ಬಳಿಯಲ್ಲಿದ್ದ ಬೆಂಚಿನ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು. ಮಾನಸರಾಮನೂ ಹೊದಿಕೆಯಲ್ಲೇ ಅಳು ತ್ತಿದ್ದನು. ಕೆಲವು ದಿನಗಳ ಹಿಂದೆ ಇದೇ ಪುತ್ರನನ್ನು ಕಂಡು, ಪಿತನ ಹೃದ ಯವು ಹೆಮ್ಮೆಗೊಳ್ಳುತ್ತಿತ್ತು. ಆದರೆ ಇಂದು ಅವನಿಂತಹ ದಾರುಣ ದೆಸೆ ಯಲ್ಲಿರುವುದನ್ನು ಕಂಡೂ ಅವನನ್ನು ಮನೆಗೆ ಕರೆದುಕೊಂಡು ಹೋಗಲು ಅವರ ಹೃದಯ ಹಿಂಜರಿಯಿತು! ಇಲ್ಲೇ ಔಷಧಿ-ಚಿಕಿತ್ಸೆ ನಡೆಸಿದರಾಯಿತು. ಡಾಕ್ಟರೂ ಇಲ್ಲೇ ಇರುವರು; ಯಾವ ತೊಂದರೆಯೂ ಆಗುವುದಿಲ್ಲ. ಮನೆಗೆ ಕರೆದುಕೊಂಡು ಹೋಗುವುದರಿಂದ ತೊಂದರೆಗಳೇ ಹೆಚ್ಚಾಗುವವು! ನಿರ್ಮ ಲೆಯು ಯಾವಾಗಲೂ ಇವನ ಬಳಿ ಕುಳಿತು ಉಪಚರಿಸುವಳು. ಆಗ ತಾವು ಅಡ್ಡಿ ಮಾಡುವಂತಿಲ್ಲ-ಎಂಬುದೇ ಅವರಿಗೆ ಎಲ್ಲಕ್ಕಿಂತ ಮಿಗಿಲಾದ ಭಯ ವಾಗಿತ್ತು.

ಇಷ್ಟರಲ್ಲಿ ಹಾಸ್ಟಲಿನ ಅಧ್ಯಕ್ಷರು ಬಂದು ಹೇಳಿದರು—ತಾವು ಇವ ನನ್ನು ಸಂಗಡ ಕರೆದುಕೊಂಡು ಹೋಗುವುದು ಉತ್ತಮವೆಂದು ತೋರು ವುದು. ಗಾಡಿ ತಂದಿರುವಿರಷ್ಟೆ? ಯಾವ ತೊಂದರೆಯೂ ಆಗಲಾರದು; ಕರೆದುಕೊಂಡು ಹೋಗಿ. ಇಲ್ಲಿ ಸರಿಯಾಗಿ ನೋಡಿಕೊಳ್ಳಲು ಸಾಧ್ಯವಿಲ್ಲ!

ಮುನ್ಷಿ—ಹೌದು, ನಾನೂ ಅದೇ ಯೋಚನೆಯಿಂದಲೇ ಬಂದೆ. ಆದರೆ, ಇವನ ಸ್ಥಿತಿಯು ಬಹಳ ನಾಜೂಕಾಗಿದೆ. ಸ್ವಲ್ಪ ಅಸಾವಧಾನವಾ ದರೂ, ಪ್ರಾಣ ಹೋಗುವಂತಿದೆ!

ಅಧ್ಯಕ್ಷರು— ಇಲ್ಲಿಂದ ಇವನನ್ನು ಕರೆದುಕೊಂಡು ಹೋಗಲು ಸ್ವಲ್ಪ ತೊಂದರೆಯಾಗುವುದು ದಿಟ ! ಮನೆಯಲ್ಲಿ ಸಿಗುವಷ್ಟು ಆರಾಮವು ಇಲ್ಲಿ ಸಿಗ ಲಾರದೆಂದು ನನಗೆನಿಸುವುದು ! ಅದೂ ಅಲ್ಲದೆ, ಖಾಯಿಲೆಯ ಹುಡುಗರನ್ನು ಇಲ್ಲಿರಿಸಿಕೊಳ್ಳುವುದೂ ಹಾಸ್ಟಲಿನ ನಿಯಮಕ್ಕೆ ವಿರುದ್ಧವಾಗಿದೆ !

ಮುನ್ಷಿ—ನೀವು ಹೇಳಿದರೆ ನಾನು ಮುಖ್ಯೋಪಾಧ್ಯಾಯರಿಂದ ಅಪ್ಪಣೆ ಯನ್ನು ಪಡೆದು ಬರುವೆನು. ಈ ಸ್ಥಿತಿಯಲ್ಲಿ ಇವನನ್ನು ಮನೆಗೆ ಕರೆದು ಕೊಂಡು ಹೋಗುವುದು ನನಗೆ ಉಚಿತ ತೋರುವುದಿಲ್ಲ.

ಮುಖ್ಯೋಪಾಧ್ಯಾಯರ ಹೆಸರು ಹೇಳಿ ತನ್ನನ್ನೂ ಹೆದರಿಸುತ್ತಿರುವ ರೆಂದು ಅಧ್ಯಕ್ಷರು ತಿಳಿದುಕೊಂಡರು. ಸ್ವಲ್ಪ ಸಿಟ್ಟಿನಿಂದ ಹೇಳಿದರು— ಮುಖ್ಯೋಪಾಧ್ಯಾಯರಾದರೂ ನಿಯಮ ವಿರುದ್ಧವಾಗಿ ಯಾವ ಮಾತನ್ನೂ ಆಡಲಾರರು ! ನಾನು ಇಷ್ಟು ಭಾರಿಯ ಜವಾಬ್ದಾರಿಯನ್ನು ಹೇಗೆ ಹೊರಲಿ ?

ಈಗೇನು ಮಾಡುವುದು ! ಮನೆಗೆ ಕರೆದುಕೊಂಡು ಹೋಗಲೇಬೇಕೇ ? ಇವನನ್ನು ಇಲ್ಲೇ ಇರಿಸಲು ಇನ್ನಾವ ನೆಪವನ್ನೂ ಹೇಳುವಂತಿಲ್ಲ; ಅಥವಾ ಆಸ್ಪತ್ರೆಯಲ್ಲಿರಿಸೋಣವೆಂದರೆ, ಅದಕ್ಕೂ ಯಾವ ನೆಪವೂ ಇಲ್ಲ. ಡಾಕ್ಟರ್ ಫೀಜನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಮಗನನ್ನು ಆಸ್ಪತ್ರೆಗೆ ಹಾಕಿದರೆಂದು ಜನರು ಆಡಿಕೊಳ್ಳುವರು ! ಆದ್ದರಿಂದ ಮನೆಗೆ ಕರೆದುಕೊಂಡು ಹೋದ ಹೊರತು ಬೇರೆ ಯಾವ ಉಪಾಯವೂ ಇಲ್ಲ !—ಎಂದುಕೊಂಡರು ಮುನ್ಷಿ ಯವರು.

ಈ ಸಮಯದಲ್ಲಿ ಅಧ್ಯಕ್ಷ ಮಹಾಶಯರು ಲಂಚವನ್ನು ತೆಗೆದುಕೊಳ್ಳು ವಂತಿದ್ದರೆ ಅದನ್ನು ಕೊಡಲೂ ಸಿದ್ಧರಾಗಿದ್ದರು ! ಮಾನಸರಾಮನನ್ನು ಮನೆಗೆ ಕರೆದುಕೊಂಡು ಹೋಗದಿರುವಂತಹ ಉಪಾಯವನ್ನು ಯಾರಾದರೂ ಹೇಳಿಕೊಡುವಂತಿದ್ದರೆ ಅವರಿಗೆ ಚಿರಋಣಿಯಾಗಿರುತ್ತಿದ್ದರು. ಏನು ಮಾಡ ಬೇಕೆಂದು ಯೋಚಿಸುವಷ್ಟು ಸಮಯವೂ ಇರಲಿಲ್ಲ. ಮುನ್ಷಿಯವರು ವಿವಶ ರಾಗಿ, ಇಬ್ಬರು ಆಳುಗಳನ್ನು ಕರೆದು ಮಾನಸರಾಮನನ್ನು ಎತ್ತ ಹೇಳಿದರು. ಮಾನಸರಾಮನು ಅರ್ಧಚೇತನಾವಸ್ಥೆಯಲ್ಲಿದ್ದನು. ಬೆಚ್ಚಿ ನುಡಿದನು— ಏನದು ? ಯಾರು ?

ಮುನ್ಷಿ—ಯಾರೂ ಇಲ್ಲ, ಮಗು! ನಾನು! ನಿನ್ನನ್ನು ಮನೆಗೆ ಕರೆದುಕೊಂಡು ಹೋಗಲು ಬಂದಿರುವೆನು. ನಡೆ, ಹೋಗೋಣ!

ಮಾನಸರಾಮ—ನನ್ನನ್ನು ಮನೆಗೇಕೆ ಕರೆದುಕೊಂಡು ಹೋಗುವಿರಿ? ನಾನಲ್ಲಿಗೆ ಬರುವುದಿಲ್ಲ!

ಮುನ್ಷಿ—ಇಲ್ಲಿ ಇರಲಾಗದು ಮಗು, ಇಲ್ಲಿನ ನಿಯಮವೇ ಹೀಗಿದೆ!

ಮಾನಸರಾಮ—ಏನೇ ಇರಲಿ, ನಾನು ಮನೆಗೆ ಬರುವುದಿಲ್ಲ! ನನ್ನನ್ನು ಮತ್ತೆಲ್ಲಿ ಬೇಕಾದರೂ ಕರೆದುಕೊಂಡು ಹೋಗಿ. ಮರದ ನೆರಳಲ್ಲಿ, ಜೋಪಡಿಯಲ್ಲಾದರೂ ಇರಿಸಿ! ಆದರೆ, ಮನೆಗೆ ಮಾತ್ರ ಬೇಡ!

ಅಧ್ಯಕ್ಷರು ಮುನ್ಷಿಯವರೊಡನೆ ಹೇಳಿದರು—ನೀವು ಈ ಮಾತು ಗಳನ್ನು ಗಮನಿಸಬೇಡಿ. ಅವನಿಗೆ ಪ್ರಜ್ಞೆ ಇಲ್ಲ.

ಮಾನಸರಾಮ—ಯಾರಿಗೆ ಪ್ರಜ್ಞೆ ಇಲ್ಲ? ನಾನು ಪ್ರಜ್ಞೆ ತಪ್ಪಿರು ವೆನೇ? ಯಾರನ್ನಾದರೂ ಬೈದು ಹೊಡೆಯುವೆನೇ? ಹಲ್ಲು ಕಚ್ಚುವೆನೇ? ನನಗೇಕೆ ಪ್ರಜ್ಞೆ ಇಲ್ಲ! ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಬೇಡಿ! ಆಗುವುದೆಲ್ಲಾ ಇಲ್ಲೇ ಆಗಲಿ. ಹಾಗೊಂದು ವೇಳೆ ಹೋಗಲೇ ಬೇಕಾದರೆ, ಆಸ್ಪತ್ರೆಗೆ ಕರೆದುಕೊಂಡು ಹೋಗಿ! ನಾನು ಅಲ್ಲೇ ಇರುವೆನು ಬದುಕುವು ದಾದರೆ ಬದುಕುವೆನು; ಸಾಯುವುದಾದರೆ ಸಾಯುವೆನು! ಆದರೆ, ಮನೆಗೆ ಖಂಡಿತವಾಗಿಯೂ ಬರುವುದಿಲ್ಲ!

ಮಾನಸರಾಮನ ಮಾತನ್ನು ಕೇಳಿ ಮುನ್ಷಿಯವರು ಅಧ್ಯಕ್ಷರನ್ನು ಪುನಃ ಪ್ರಾರ್ಥಿಸಿಕೊಂಡರು. ಆದರೆ, ಅವರು ಕೇಳಲಿಲ್ಲ.

ಕಡೆಗೆ ಮುನ್ಷಿಯವರು ಮಾನಸರಾಮನೊಡನೆ ಹೇಳಿದರು—ಮಗು, ಮನೆಗೆ ಬರಲು ಇಷ್ಟೇಕೆ ತಿರಸ್ಕರಿಸುವೆ? ಅಲ್ಲಿ ಎಲ್ಲಾ ವಿಧವಾದ ಆರಾಮವೂ ಸಿಗುವುದು.

ಮುನ್ಷಿಯವರು ಈ ಮಾತನ್ನೇನೋ ಆಡಿದರು. ಆದರೆ ಮಾನಸ ರಾಮನು ಮನೆಗೆ ಬರಲು ಎಲ್ಲಿ ಒಪ್ಪಿಬಿಡುವನೋ ಎಂದು ಮನದಲ್ಲೇ ಹೆದರುತ್ತಿದ್ದರು. ಏನಾದರೂ ನೆಪದಿಂದ ಅವನನ್ನು ಆಸ್ಪತ್ರೆಯಲ್ಲಿರಿಸ ಬೇಕೆಂದೂ, ತಪ್ಪೆಲ್ಲವನ್ನೂ ಅವನ ತಲೆಗೇ ಹೊರಿಸಬೇಕೆಂದೂ ಯೋಚಿಸು ತ್ತಿದ್ದರು.

ಮಾನಸರಾಮನು ತಲೆಯಲ್ಲಾಡಿಸಿ ಹೇಳಿದನು—ಇಲ್ಲ, ಇಲ್ಲ; ಖಂಡಿತ ವಾಗಿಯೂ ಇಲ್ಲ. ನಾನು ಮನೆಗೆ ಬರುವುದಿಲ್ಲ! ನನ್ನನ್ನು ಆಸ್ಪತ್ರೆಗೆ ಹಾಕಿ ಬಿಡಿ; ಮತ್ತು ಮನೆಯವರಾರೂ ನನ್ನನ್ನು ಬಂದು ನೋಡಬಾರದೆಂದು ತಿಳಿಸಿ ಬಿಡಿ! ನನಗಾವ ಖಾಯಿಲೆಯೂ ಇಲ್ಲ. ನೀವು ನನ್ನನ್ನು ಬಿಟ್ಟುಬಿಡಿ! ನಾನು ನಡೆದು ಬರುವೆನು.

ಎನ್ನುತ್ತ ಅವನು ಎದ್ದು ನಿಂತನು. ಮತ್ತು ಉನ್ಮತ್ತನಂತೆ ದ್ವಾರದ ಕಡೆಗೋಡಿದನು. ಆವರ ಕಾಲುಗಳು ನಡುಗತೊಡಗಿದವು. ಮುನ್ಷಿಯವರು ಆಹೊತ್ತಿನಲ್ಲಿ ಹಿಡಿದುಕೊಳ್ಳದಿದ್ದರೆ ಅವನಿಗೆ ಬಲವಾದ ಪೆಟ್ಟಾಗುತ್ತಿತ್ತು! ಇಬ್ಬರು ಆಳುಗಳ ಸಹಾಯದಿಂದ ಮುನ್ಷಿಯವರು ಅವನನ್ನೆತ್ತಿ ತಂದು, ಗಾಡಿಯಲ್ಲಿ ಕುಳ್ಳಿರಿಸಿದರು.

ಗಾಡಿಯು ಆಸ್ಪತ್ರೆಯ ಕಡೆಗೆ ನಡೆಯಿತು. ಮುನ್ಷಿಯವರ ಮನಸಿನಲ್ಲಿದ್ದುದೇ ನೆರವೇರಿತು! ಈ ಶೋಕದಲ್ಲೂ ಅವರ ಚಿತ್ತವು ಶಾಂತವಾಗಿತ್ತು. ಹುಡುಗನು ತನ್ನ ಇಚ್ಛೆಯಿಂದ ಆಸ್ಪತ್ರೆಗೆ ಹೋಗುತ್ತಿರುವನೆಂಬುದೇ, ಅವನಿಗೆ ಮನೆಯ ಮೇಲಣ ಮಮತೆ ಇಲ್ಲವೆನ್ನುವುದಕ್ಕೆ ಸಾಕಷ್ಟು ಪ್ರಮಾಣವಲ್ಲವೇ? ಮಾನಸರಾಮನು ನಿರ್ದೋಷಿಯೆಂದು ಇದರಿಂದಲೇ ಸಿದ್ಧವಾಗುವುದಿಲ್ಲವೇ? ಅನ್ಯಾಯವಾಗಿ ಅವರು ಅವನಲ್ಲಿ ತಪ್ಪೆಣಿಸಿದರು.

ತುಸು ಹೊತ್ತಿನಲ್ಲೇ ಮುನ್ಷಿಯವರ ಮನದಲ್ಲಿ ಸಂತೋಷಕ್ಕೆ ಬದಲು ಗ್ಲಾನಿಯುಂಟಾಯಿತು. ತನ್ನ ಪ್ರಾಣಪ್ರಿಯ ಪುತ್ರನನ್ನು ಮನೆಗೆ ಕರೆದು ಕೊಂಡು ಹೋಗದೆ, ಆಸ್ಪತ್ರೆಗೆ ಕರೆದುಕೊಂಡು ಹೋಗುವುದೇ? ಅವನ ಜೀವನವು ಸಂಕಟದಲ್ಲಿ ಸಿಲುಕಿರುವಾಗಲೂ ಅವನಿಗೆ ಮನೆಯಲ್ಲಿ ಸ್ಥಾನ ವಿಲ್ಲವೇ? ಇದೆಂತಹ ವಿಡಂಬನೆ?

ಒಂದು ಕ್ಷಣದ ನಂತರ ಮುನ್ಷಿಯವರ ಮನದಲ್ಲಿ ಅಕಸ್ಮಾತ್ ಈ ಪ್ರಶ್ನೆ ಎದ್ದಿತು—ಮಾನಸರಾಮನು ತನ್ನ ಮನೋಭಾವಗಳನ್ನು ತಿಳಿದುಕೊಂಡು ಬಿಟ್ಟನೇ? ಅದಕ್ಕಾಗಿಯೇ ಅವನಿಗೆ ಮನೆಯ ಮೇಲಿಷ್ಟು ತಿರಸ್ಕಾರವೇ? ಹಾಗಿದ್ದರೆ ನಿಜವಾಗಿಯೂ ಅನರ್ಥವಾಗುವುದು!

ಈ ಅನರ್ಥದ ಕಲ್ಪನೆಯಿಂದ ಮುನ್ಷಿಯವರ ಮೈ ನವಿರೆದ್ದಿತು; ಮತ್ತು ಎದೆ ಡಬಡಬ ಬಡಿದುಕೊಳ್ಳತೊಡಗಿತು. ಅವನ ಜ್ವರಕ್ಕೆ ಇದೇ

ಕಾರಣವಾಗಿದ್ದರೆ ಅವನನ್ನು ಭಗವಂತನೇ ಕಾಪಾಡಬೇಕು! ಮುನ್ಷಿಯವರ ಸ್ಥಿತಿಯು ಅತ್ಯಂತ ದಯನೀಯವಾಯಿತು. ಕೈ ಕಾಸಿಕೊಳ್ಳಲು ಹೊತ್ತಿಸಿದ ಬೆಂಕಿಯಿಂದ ಮನೆ ಹೊತ್ತಿಸಿದಂತಾಯಿತು. ಈ ಕರುಣೆ, ಶೋಕ, ಪಶ್ಚಾತ್ತಾಪ ಮತ್ತು ಸಂಶಯಗಳಿಂದ ಅವರ ಮನಸು ಗಾಬರಿಗೊಂಡಿತು. ಅವರ ಗುಪ್ತ ರೋದನಧ್ವನಿಯು ಹೊರಬಿದ್ದಿದ್ದರೆ, ಕೇಳುವವರೆಲ್ಲರೂ ಅಳುವಂತಿತ್ತು! ಅವರು ಒಮ್ಮೆ ಪುತ್ರನ ವರ್ಣಹೀನ ಮುಖದ ಕಡೆಗೆ ವಾತ್ಸಲ್ಯಪೂರ್ಣ ನೇತ್ರಗಳಿಂದ ನೋಡಿದರು! ವೇದನೆಯಿಂದ ವಿಕಲರಾಗಿ ಒಮ್ಮೆ ಎದೆಗಪ್ಪಿಕೊಂಡರು; ಮತ್ತು ಬಿಕ್ಕಿ ಬಿಕ್ಕಿ ಅತ್ತರು!

ಎಮರಿಗೆ ಆಸ್ಪತ್ರೆಯ ಹೆಬ್ಬಾಗಿಲು ಗೋಚರವಾಯಿತು.

## ಹನ್ನೊಂದನೆಯ ಪರಿಚ್ಛೇದ

ಮುನ್ಷಿ ತೋತಾರಾಮರು ಸಾಯಂಕಾಲ ಕಛೇರಿಯಿಂದ ಹಿಂದಿರುಗಿದೊಡನೆಯೇ ನಿರ್ಮಲೆಯು ಕೇಳಿದಳು—'ಅವನನ್ನು ನೋಡಿದಿರಾ? ಈಗ ಹೇಗಿರುವನು?' ನಾಮಮಾತ್ರಕ್ಕೂ ಅವಳ ಮುಖದಲ್ಲಿ ಚಿಂತೆಯ ಚಿನ್ಹೆ ಇಲ್ಲದಿರುವುದನ್ನು ಅವರು ಕಂಡರು. ಅವಳ ಅಲಂಕಾರ, ಶೃಂಗಾರಗಳು ದಿನಕ್ಕಿಂತ ದ್ವಿಗುಣವಾಗಿದ್ದವು. ದಿನವೂ ಅವಳು ಕುತ್ತಿಗೆಗೆ ಸರ ಹಾಕಿಕೊಳ್ಳುತ್ತಿರಲಿಲ್ಲ. ಇಂದು ಅದನ್ನೂ ಹಾಕಿಕೊಂಡಿದ್ದಳು. ಮೇಲುಹೊದಿಕೆಯು ಅವಳಿಗಿಷ್ಟವಿರಲಿಲ್ಲ; ಆದರೆ, ಈ ದಿನ ಅವಳ ರೇಷ್ಮೆಯು ಸೀರೆಯ ಮೇಲೆ, ಕಪ್ಪಾದ ಕೇಶರಾಶಿಯ ಮೇಲೆ ಅದೂ ಶೋಭಿಸುತ್ತಿತ್ತು.

ಮುನ್ಷಿಯವರು ಮುಖ ತಿರುಗಿಸಿ ನುಡಿದರು—ಹೇಗಿರುವನೆಂದು ಹೇಳಲಿ? ಖಾಯಿಲೆ ಹಾಗೆಯೇ ಇದೆ, ಅಷ್ಟೆ!

ನಿರ್ಮಲೆ—ನೀವು ಅವನನ್ನು ಮನೆಗೆ ಕರೆತರಲು ಹೋಗಿದ್ದಿರಲ್ಲವೇ?

ಮುನ್ಷಿಯವರು ಸಿಟ್ಟಿನಿಂದ ಹೇಳಿದರು—ಅವನು ಬರದಿದ್ದರೆ, ನಾನು ಬಲಾತ್ಕಾರವಾಗಿ ಎತ್ತಿ ತರಲಾಗುವುದೇ? 'ಮನೆಯಲ್ಲಿ ನಿನಗೆ ಬೇಕಾದ ಆರಾಮವಿರುವುದು; ಯಾವತೊಂದರೆಯೂ ಇಲ್ಲ' ಎಂದು ಎಷ್ಟೋ ತಿಳಿಸಿದೆ. ಆದರೆ, ಮನೆಯ ಹೆಸರನ್ನು ಕೇಳಿದೊಡನೆಯೇ ಅವನಿಗೆ ಜ್ವರ ಹೆಚ್ಚಿ

ದಂತಾಗುತ್ತಿತ್ತು. ಅಲ್ಲೇ ಪ್ರಾಣ ಬಿಡುವೆನು; ಮನೆಗೆ ಬರುವುದಿಲ್ಲವೆಂದು ಹೇಳಿದನು. ಕೊನೆಗೆ ವಿವಶನಾಗಿ ಆಸ್ಪತ್ರೆಗೆ ಹಾಕಿ ಬಂದೆ! ಇನ್ನೇನು ಮಾಡಲಿ?

ರುಕ್ಮಿಣಿಯೂ ಅಂಗಳದಲ್ಲೇ ನಿಂತು ಕೇಳುತ್ತಿದ್ದಳು. ಅವಳೆಂದಳು— ಅವನು ಬಹಳ ಹಠವಾದಿ. ಇಲ್ಲಿಗೆ ಖಂಡಿತವಾಗಿಯೂ ಬರುವುದಿಲ್ಲ; ಮತ್ತು ಅಲ್ಲೂ ಗುಣಮುಖವಾಗುವುದಿಲ್ಲ!

ಮುನ್ಷಿಯವರು ಕಾತರ ಸ್ವರದಿಂದ ಹೇಳಿದರು – ಅಕ್ಕಾ, ನೀನು ನಾಲ್ಕಾರು ದಿನಗಳು ಅವನ ಬಳಿಯಲ್ಲಿರು. ನೀನಿದ್ದರೆ ಅವನಿಗೆ ಸ್ವಲ್ಪ ಸಮಾಧಾನವಾಗುವುದು. ನನ್ನ ಈ ಬೇಡಿಕೆಗೆ ಕಿವಿಗೊಡು, ಅಕ್ಕ! ಒಬ್ಬನೇ ಅತ್ತು ಅತ್ತು ಪ್ರಾಣ ಬಿಡುವನು. 'ಹಾ, ಅಮ್ಮಾ! ಹಾ, ಅಮ್ಮಾ!' ಎಂಬ ಮಂತ್ರವನ್ನೇ ಸದಾ ಜಪಿಸುತ್ತಿರುವನು. ಈಗ ನಾನು ಅಲ್ಲಿಗೇ ಹೋಗುತ್ತಿರುವೆನು; ನನ್ನ ಸಂಗಡಲೇ ಬಾ! ಅವನ ಸ್ಥಿತಿಯು ಆಶಾದಾಯಕವಾಗಿಲ್ಲ! ಹಿಂದಿನ ಆ ರೂಪವೇ ಇಲ್ಲ ಭಗವಂತನೇನು ಮಾಡುವನೋ ನೋಡೋಣ.

ಎನ್ನುತ್ತಿರುವಂತೆಯೇ ಮುನ್ಷಿಯವರ ಕಣ್ಣುಗಳು ಕಂಬನಿದುಂಬಿದವು; ಆದರೆ, ರುಕ್ಮಿಣಿಯು ಅವಿಚಲಿತ ಭಾವದಿಂದ ನುಡಿದಳು—ನಾನು ಅಲ್ಲಿಗೆ ಬರಲು ಸಿದ್ಧಳಾಗಿರುವೆನು. ನಾನಲ್ಲಿರುವುದರಿಂದ ನನ್ನ ಕಂದನ ಪ್ರಾಣ ಉಳಿಯುವುದಾದರೆ ಈ ಕ್ಷಣವೇ ಬರುವೆನು! ಆದರೆ, ನನ್ನ ಮಾತನ್ನು ಗಮನಿಸಿ ಕೇಳು! ಅವನು ಅಲ್ಲಿ ಗುಣ ಹೊಂದಲಾರ. ನನಗೆ ಅವನ ಸ್ವಭಾವ ಚೆನ್ನಾಗಿ ಗೊತ್ತು. ಅವನಿಗೆ ಯಾವ ಖಾಯಿಲೆಯೂ ಇಲ್ಲ; ಕೇವಲ ಮನೆಯಿಂದ ಹೊರದೂಡಲ್ಪಟ್ಟೆನೆಂಬ ಚಿಂತೆ. ಈ ದುಃಖವೇ ಜ್ವರದ ರೂಪದಲ್ಲಿ ಪ್ರಕಟವಾಗಿದೆ. ನೀನು ಒಂದಲ್ಲ, ಸಾವಿರ ಚಿಕಿತ್ಸೆ ಮಾಡಿದರೂ ಅದರಿಂದ ಅವನಿಗೆ ಗುಣವಾಗಲಾರದು!

ಮುನ್ಷಿ—ಅಕ್ಕ! ಅವನನ್ನು ಮನೆಯಿಂದ ಯಾರು ಹೊರದೂಡಿದರು? ಕೇವಲ ಓದಿನ ಯೋಚನೆಯಿಂದ ಅವನನ್ನಲ್ಲಿಗೆ ಕಳುಹಿದೆನು.

ರುಕ್ಮಿಣಿ—ನೀನು ಯಾವ ಯೋಚನೆಯಿಂದ ಕಳುಹಿಸಿದ್ದರೂ ಸರಿ; ಆ ವಿಷಯ ಅವನ ಮನದಲ್ಲಿ ಬಲವಾಗಿ ನಾಟಿತು! ಈಗ ನನ್ನನ್ನು ಲಕ್ಷಿಸುವರಾರು? ಯಾವ ವಿಚಾರದಲ್ಲಾಗಲಿ, ಮಾತನಾಡುವ ಅಧಿಕಾರ ನನಗೆ

ಎಲ್ಲಿಯದು ? ನೀನು ಯಜಮಾನ; ನಿನ್ನ ಪತ್ನಿ ಯಜಮಾನಿ; ನಾನು ಕೇವಲ ನಿನ್ನ ಅನ್ನಕ್ಕೆ ಕಾದು ಬಿದ್ದಿರುವ ಅಭಾಗಿನಿ ವಿಧವೆ! ನನ್ನ ಮಾತನ್ನಾರು ಕೇಳುವರು ? ನನ್ನನ್ನಾರು ಲಕ್ಷಿಸುವರು ? ಆದರೂ ಹೇಳದಿರಲು ಮನಸು ಬಾರದು. ಎಂದು ಮಾನಸರಾಮನು ಮನೆಗೆ ಬರುವನೋ, ಎಂದು ನಿನ್ನ ಹೃದಯವೂ ಹಿಂದಿನಂತಾಗುವುದೋ ಅಂದೇ ಅವನು ಗುಣಮುಖನಾಗುವನು.

ಎಂದು ಹೇಳಿ ರುಕ್ಮಿಣಿಯು ಒಳಕ್ಕೆ ಹೊರಟುಹೋದಳು. ಅವಳ ಜ್ಯೋತಿಹೀನ ಹಾಗೂ ಅನುಭವಪೂರ್ಣ ನೇತ್ರಗಳೆದುರಿಗೆ ನಡೆಯುತ್ತಿದ್ದ ಘಟನೆಗಳ ರಹಸ್ಯವನ್ನು ಅವಳು ಚೆನ್ನಾಗಿ ಅರಿಯುತ್ತಿದ್ದಳು; ಮತ್ತು ಆದರ ಕ್ರೋಧವೆಲ್ಲವನ್ನೂ ನಿರಪರಾಧಿ ನಿರ್ಮಲೆಯ ಮೇಲೆ ತೋರುತ್ತಿದ್ದಳು. 'ಈ ಲಕ್ಷ್ಮಿಯು ಮನೆಯಲ್ಲಿರುವ ವರೆಗೆ ಇಲ್ಲಿನ ಸ್ಥಿತಿ ಹೀಗೆಯೇ!' ಎಂದು ಈಗಲೂ ಹೇಳಹೊರಟಿದ್ದಳು. ಆದರೆ, ಅಷ್ಟಕ್ಕೇ ನಿಲ್ಲಿಸಿದಳು. ಅಷ್ಟಾದರೂ ಮುನ್ಷಿಯವರಿಗೆ ಅವಳ ಮಾತಿನ ಅರ್ಥ ತಿಳಿಯದಿರಲಿಲ್ಲ. ಅವಳು ಒಳಕ್ಕೆ ಹೋದನಂತರ ಮುನ್ಷಿಯವರು ತಲೆತಗ್ಗಿಸಿ ಯೋಚಿಸತೊಡಗಿದರು. ಅವರಿಗೆ ತಮ್ಮ ಮೇಲೇ ಕೋಪವುಂಟಾಯಿತು. ಯಾವುದಾದರೂ ಗೋಡೆಗೆ ತಲೆ ಹೊಡೆದುಕೊಂಡು ಪ್ರಾಣ ಬಿಡಲೇ ?—ಎಂದೆನಿಸಿತು ! ಅವರೇಕೆ ವಿವಾಹ ಮಾಡಿಕೊಂಡರು ? ವಿವಾಹದ ಅವಶ್ಯಕತೆಯಾದರೂ ಏನಿತ್ತು ? ಭಗವಂತನು ಅವರಿಗೆ ಮೂರು ಮಕ್ಕಳನ್ನು ಕೊಟ್ಟಿದ್ದನು. ಅಲ್ಲದೆ ವಯಸ್ಸೂ ಐವತ್ತಕ್ಕೆ ಸಮೀಪಿಸಿತ್ತು. ಇಷ್ಟಾದರೂ ಏಕೆ ವಿವಾಹ ಮಾಡಿಕೊಂಡರು ? ಈ ನೆಪ ದಿಂದಲೇ ಅವರ ಸರ್ವನಾಶ ಮಾಡಬೇಕೆಂದು ಭಗವಂತನು ಬಯಸಿದನೇ ? ಅವರು ತಲೆ ಎತ್ತಿ ಒಮ್ಮೆ ನಿರ್ಮಲೆಯ ಸಹಾಸ್ಯ ಹಾಗೂ ನಿಶ್ಚಲ ಮೂರ್ತಿ ಯನ್ನು ನೋಡಿ, ಆಸ್ಪತ್ರೆಗೆ ಹೊರಟರು. ನಿರ್ಮಲೆಯ ಸಹಾಸ್ಯ ಕಾಂತಿಯು ಅವರ ಚಿತ್ತವನ್ನು ಶಾಂತಗೊಳಿಸಿತು. ಅನೇಕ ದಿನಗಳ ಬಳಿಕ ಇಂದು ಅವ ರಿಗೆ ಈ ಶಾಂತಿಯು ದೊರಕಿತು. ಪ್ರೇಮಪೀಡಿತ ಹೃದಯವು ಈ ಸ್ಥಿತಿಯಲ್ಲಿ ಇಷ್ಟು ಶಾಂತ ಹಾಗೂ ಅವಿಚಲಿತವಾಗಿರಬಲ್ಲದೇ ? ಇಲ್ಲ, ಇಲ್ಲ; ಎಂದಿಗೂ ಇಲ್ಲ. ಹೃದಯದ ಹುಣ್ಣನ್ನು ಭಾವಕೌಶಲದಿಂದ ಮುಚ್ಚಲಳವಲ್ಲ! ತಮ್ಮ ಚಿತ್ತದ ದುರ್ಬಲತೆಗಾಗಿ ಈಗ ಅವರಿಗೆ ಅತ್ಯಂತ ವ್ಯಸನವಾಯಿತು. ಅಕಾರಣ ವಾಗಿ ಅವರು ತಮ್ಮ ಹೃದಯದಲ್ಲಿ ಸಂದೇಹಕ್ಕೆ ಸ್ಥಾನ ಕೊಟ್ಟು, ಇಷ್ಟು

ಅನರ್ಥ ಮಾಡಿದರು. ಮಾನಸರಾಮನ ವಿಷಯದಲ್ಲೂ ಅವರಿಗಿದ್ದ ಸಂಶಯ ದೂರವಾಯಿತು. ಆದರೆ ಅದರ ಸ್ಥಾನದಲ್ಲಿ ಮತ್ತೊಂದು ಪ್ರಶ್ನೆ ಎದ್ದಿತು—ಮಾನಸರಾಮನು ನನ್ನ ಮನಸಿನ ಈ ಸಂಶಯವನ್ನು ತಿಳಿದುಕೊಂಡನೇ? ಅದಕ್ಕಾಗಿಯೇ ಮನೆಗೆ ಬರಲು ತಿರಸ್ಕರಿಸುತ್ತಿರುವನೇ? ಹಾಗಾದರೆ ನಿಜವಾಗಿಯೂ ಮಹಾ ಅನರ್ಥವಾಗುವುದು!—ಹೀಗೆಂದು ಯೋಚಿಸಿ ಅವರ ಹೃದಯ ಧಡಿಸತೊಡಗಿತು. ಗಾಡಿಯನ್ನು ಬೇಗ ನಡೆಯಿಸೆಂದು ಗಾಡಿಯವನಿಗೆ ಹೇಳಿದ್ದರು. ಎಷ್ಟೋ ದಿನಗಳ ನಂತರ ಇಂದು ಅವರ ಹೃದಯಮಂಡಲದ ಮೇಲೆ ಕವಿದಿದ್ದ ಕಾರ್ಮೋಡವು ಚದುರಿತು; ಮತ್ತು ಪ್ರಕಾಶ ಲಹರಿಯು ಹೊರಹೊಮ್ಮಲು ಆತುರಗೊಳ್ಳುತ್ತಿತ್ತು! ಗಾಡಿಯವನು ತೂಕಡಿಸುತ್ತಿರುವನೋ?–ಎಂದು ಒಮ್ಮೆ ಅವನ ಕಡೆ ನೋಡಿದರು. ಕುದುರೆಯ ನಡಿಗೆಯು ಹಿಂದೆಂದೂ ಅವರಿಗೆ ಇಷ್ಟು ನಿಧಾನವಾಗಿ ತೋರಿರಲಿಲ್ಲ!

ಆಸ್ಪತ್ರೆಯನ್ನು ತಲುಪಿ ಆತುರದಿಂದ ಅವರು ಮಾನಸರಾಮನ ಬಳಿ ಹೋದರು. ನೋಡಲಾಗಿ ಡಾಕ್ಟರ್‌ಸಾಹೇಬರು ಅವನೆದುರಿಗೆ ಚಿಂತಾಮಗ್ನರಾಗಿ ನಿಂತಿದ್ದರು. ಮುನ್ಷಿಯವರ ಕೈಕಾಲುಗಳು ತಣ್ಣಗಾದವು. ಮುಖದಿಂದ ಮಾತು ಹೊರಡದಾಯಿತು. ಗದ್ಗದಸ್ವರದಿಂದ, ಅತಿ ಕಷ್ಟದೊಡನೆ ಕೇಳಿದರು—ಸ್ಥಿತಿ ಹೇಗಿದೆ, ಡಾಕ್ಟರ್‌ಸಾಹೇಬರೇ?–ಹೀಗೆಂದು ಕೇಳಿ ಅಳತೊಡಗಿದರು. ಡಾಕ್ಟರ್‌ಸಾಹೇಬರು ಅವರ ಪ್ರಶ್ನೆಗೆ ಉತ್ತರ ಕೊಡಲು ತುಸು ತಡವಾಯಿತು. ಅಷ್ಟರಲ್ಲಿ ಮುನ್ಷಿಯವರ ಮನಸು ತಡೆಯಲಿಲ್ಲ. ಮಂಚದ ಮೇಲೆ ಕುಳಿತು ಅಚೇತ ಬಾಲಕನ ತಲೆಯನ್ನು ತಮ್ಮ ತೊಡೆಯ ಮೇಲಿರಿಸಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದರು. ಮಾನಸರಾಮನ ದೇಹವು ಕೆಂಡದಂತೆ ಕಾಯುತ್ತಿತ್ತು. ಅವನು ಒಮ್ಮೆ ಕಣ್ತೆರೆದು ನೋಡಿದನು—ಹಾ! ಎಂತಹ ಭಯಂಕರ ಹಾಗೂ ದೀನ ದೃಷ್ಟಿ! ಮುನ್ಷಿಯವರು ಬಾಲಕನನ್ನು ಎದೆಗಪ್ಪಿಕೊಂಡು ಡಾಕ್ಟರನ್ನು ಕೇಳಿದರು—ಸ್ಥಿತಿ ಹೇಗಿದೆ ಡಾಕ್ಟರ್‌ಸಾಹೇಬರೇ? ನೀವು ಮಾತನಾಡದೇ ಸುಮ್ಮನಿರುವಿರೇಕೆ?

ಡಾಕ್ಟರು ಸಂದಿಗ್ಧ ಸ್ವರದಿಂದ ನುಡಿದರು—ಸ್ಥಿತಿ ಹೇಗಿದೆ ಎಂಬುದನ್ನು ನೀವೇ ನೋಡುತ್ತಿರುವಿರಿ? ನಾನೇನು ಹೇಳಲಿ? ೧೦೬ ಡಿಗರಿಗಳ ಜ್ವರವಿದೆ. ಜ್ವರದ ಪ್ರಕೋಪವು ಹೆಚ್ಚುತ್ತಲೇ ಇದೆ. ನನ್ನಿಂದ ಸಾಧ್ಯವಾದ

ಎಲ್ಲ ಪ್ರಯತ್ನವನ್ನೂ ಮಾಡುವೆನು. ಇದಕ್ಕೂ ಮೇಲಾಗಿ ಭಗವಂತನ ಇಚ್ಛೆ! ನೀವು ಹೋದಾಗಿನಿಂದ ಒಂದು ನಿಮಿಷವೂ ಈ ಸ್ಥಳ ಬಿಟ್ಟು ಕದಲಿಲ್ಲ. ಊಟ ಮಾಡಲು ಕೂಡ ಹೋಗಲಿಲ್ಲ. ಒಂದು ನಿಮಿಷದಲ್ಲಿ ಏನಾಗುವುದೋ ಎನ್ನು ವಷ್ಟು ಸ್ಥಿತಿ ನಾಜೂಕಾಗಿದೆ. ಮಹಾಜ್ವರವಾದುದರಿಂದ ಎಚ್ಚರವೇ ಇಲ್ಲ. ಸ್ವಲ್ಪ ತಡೆತಡೆದು ಸನ್ನಿಪಾತವೂ ಬರುತ್ತಿದೆ. ಇವನಿಗೆ ಮನೆಯಲ್ಲಿ ಯಾರಾ ದರೂ ಏನಾದರೂ ಅಂದರೇ? ಬಾರಿಬಾರಿಗೂ 'ಅಮ್ಮಾ, ನೀನೆಲ್ಲಿರುವೆ! ಅಮ್ಮಾ, ನೀನೆಲ್ಲಿರುವೆ!' ಎಂದು ಹೇಳುತ್ತಿರುವನು.

ಡಾಕ್ಟರ್‌ಸಾಹೇಬರು ಈ ಮಾತನ್ನು ಹೇಳುತ್ತಿರುವಂತೆಯೇ ಮಾನಸ ರಾಮನು ಇದ್ದಕ್ಕಿದ್ದಂತೆ ಎದ್ದು ಕುಳಿತನು. ಮತ್ತು ಮುನ್ಶಿಯವರನ್ನು ಮಂಚ ದಿಂದ ಕೆಳಕ್ಕೆ ತಳ್ಳಿ ಉನ್ಮತ್ತ ಸ್ವರದಿಂದ ನುಡಿದನು—ನನ್ನನ್ನು ಹೆದರಿ ಸುವಿರಾ? ಕೊಂದುಹಾಕಿಬಿಡಿ! ಈಗಲೇ ಬೇಕಾದರೂ ಕೊಂದುಹಾಕಿಬಿಡಿ! ಏಕೆ? ಕತ್ತಿ ಸಿಗುವುದಿಲ್ಲವೇ? ಹಗ್ಗವೂ ಸಿಗಲಿಲ್ಲವೇ? ನಾನೇ ನೇಣು ಹಾಕಿಕೊಳ್ಳುವೆನು. ಹಾ, ಅಮ್ಮಾ! ನೀನೆಲ್ಲಿರುವೆ? ಎನ್ನುತ್ತ ಅವನು ಪ್ರಜ್ಞೆ ತಪ್ಪಿ ಬಿದ್ದನು.

ಮುನ್ಶಿಯವರು ಒಂದು ಕ್ಷಣಕಾಲ ಮಾನಸರಾಮನ ಶಿಥಿಲ ಮುಖ ಮುದ್ರೆಯ ಕಡೆಗೆ ವ್ಯಥಿತ ನೇತ್ರಗಳಿಂದ ದಿಟ್ಟಿಸಿದರು ನಂತರ ಡಾಕ್ಟರ್ ಸಾಹೇಬರ ಕೈಗಳನ್ನು ಹಿಡಿದುಕೊಂಡು ಅತ್ಯಂತ ದೀನತಾಪೂರ್ಣ ಆಗ್ರಹ ದಿಂದ ಹೇಳಿದರು—ಡಾಕ್ಟರ್‌ಸಾಹೇಬರೇ! ಇವನನ್ನು ಹೇಗಾದರೂ ಮಾಡಿ ಉಳಿಸಿಕೊಡಿ! ಇಲ್ಲದಿದ್ದರೆ ನನ್ನ ಸರ್ವನಾಶವಾಗಿಹೋಗುವುದು. ನಾನು ಅಷ್ಟೇನೂ ಹಣವಂತನಲ್ಲ; ಆದರೂ ತಮಗೆ ಬೇಕಾದ ಪದಾರ್ಥಗಳನ್ನೆಲ್ಲಾ ತರಿಸಿಕೊಡುವನು. ಯಾವ ರೀತಿಯಿಂದಲಾದರೂ ಇವನನ್ನು ಕಾಪಾಡಿ! ದೊಡ್ಡ ದೊಡ್ಡ ಡಾಕ್ಟರುಗಳನ್ನು ಬೇಕಾದರೂ ಕರೆಸಿಕೊಳ್ಳಿ, ಅವರ ಅಭಿ ಪ್ರಾಯ ಸಲಹೆಗಳನ್ನು ಕೇಳಿಕೊಳ್ಳಿ; ನಾನು ಎಲ್ಲ ಖರ್ಚನ್ನೂ ಕೊಡುವೆನು. ಕಂದನ ಈ ಸ್ಥಿತಿಯನ್ನು ನಾನು ನೋಡಲಾರೆ. ಹಾ, ಮಗು!

ಡಾಕ್ಟರ್‌ಸಾಹೇಬರು ಕರುಣ ಸ್ವರದಿಂದ ಹೇಳಿದರು—ಬಾಬೂಸಾಹೇ ಬರೇ, ನಾನು ನನ್ನ ಕೈಲಾದುದನ್ನೆಲ್ಲಾ ಮಾಡುತ್ತಿರುವೆನು. ದೊಡ್ಡ ಡಾಕ್ಟರ ರನ್ನು ಕರೆಸಿ ಅವರ ಸಲಹೆ ತೆಗೆದುಕೊಳ್ಳಿರೆಂದು ಹೇಳುವಿರಿ. ಈಗಲೇ

ಬೇಕಾದರೂ ಡಾಕ್ಟರ್ ಲಹರಿ,ಡಾಕ್ಟರ್ ಭಟ್ಟ, ಮತ್ತು ಡಾಕ್ಟರ್ ಮಧುರ ಇವರನ್ನು ಕರೆಸುವೆನು. ಡಾಕ್ಟರ್ ವಿನಾಯಕ ಶಾಸ್ತ್ರಿಗಳನ್ನೂ ಕರೆಸುವೆನು. ಆದರೆ ವ್ಯರ್ಥವಾಗಿ ನಿಮಗೆ ಭರವಸೆ ಕೊಡಲಾರೆ! ಹುಡುಗನ ಸ್ಥಿತಿ ಬಹಳ ನಾಜೂಕಾಗಿದೆ.

ಮುನ್ಷಿಯವರು ಅಳುತ್ತ ಹೇಳಿದರು—ಇಲ್ಲ, ಡಾಕ್ಟರ್‌ಸಾಹೇಬರೇ! ಹಾಗೆನ್ನಬೇಡಿ; ದಯವಿಟ್ಟು ಹಾಗೆನ್ನಬೇಡಿ! ಪರಮಾತ್ಮನು ನನ್ನ ಮೇಲೆ ಇಷ್ಟು ಕೋಪ ಮಾಡಲಾರ. ತಾವು ಬೊಂಬಾಯಿ, ಕಲ್ಕತ್ತಾದಿಂದ ಡಾಕ್ಟರು ಗಳನ್ನು ಬೇಕಾದರೂ ಕರೆಸಿಕೊಳ್ಳಿ, ನಾನು ನಿಮಗೆ ಚಿರಋಣಿಯಾಗಿರುವೆನು. ಇವನೇ ನನ್ನ ಕುಲದೀಪ, ಇವನೇ ನನ್ನ ಜೀವನದ ಆಧಾರ! ಸಂಕಟದಿಂದ ನನ್ನ ಎದೆಯೊಡೆದು ಹೋಗುತ್ತಿದೆ. ಅವನಿಗೆ ಪ್ರಜ್ಞೆ ಬರುವಂತಹ ಯಾವು ದಾದರೂ ಔಷಧಿಯನ್ನು ದಯವಿಟ್ಟು ಕೊಡುವಿರಾ? ನನ್ನ ಕಿವಿಯಾರೆ ಅವನ ಮಾತುಗಳನ್ನು ಕೇಳುವೆನು. ಅವನಿಗೇನು ಕಷ್ಟವೆಂದು ತಿಳಿದುಕೊಳ್ಳುವೆನು. ಹಾ, ಮಗು!

ಡಾಕ್ಟರ್—ಮನಸಿಗೆ ಸ್ವಲ್ಪ ಸಮಾಧಾನ ತಂದುಕೊಳ್ಳಿ, ಬಾಬೂ! ನೀವು ವಯಸ್ಕರು; ಈ ರೀತಿ ಅತ್ತುಕರೆಯುವುದರಿಂದ ಅಥವಾ ಡಾಕ್ಟರುಗಳ ಗುಂಪನ್ನು ಜಮಾಯಿಸುವುದರಿಂದ ಯಾವ ಫಲವೂ ಆಗಲಾರದು! ಶಾಂತ ಚಿತ್ತರಾಗಿ ಕುಳಿತುಕೊಳ್ಳಿ. ನೀವೇ ಈ ರೀತಿ ಅಧೈರ್ಯಪಡತೊಡಗಿದರೆ ಹೇಗೆ?

ಮುನ್ಷಿ—ಇಲ್ಲ, ಡಾಕ್ಟರ್‌ಸಾಹೇಬರೇ! ಇನ್ನು ನಾನು ಮಾತನಾಡುವು ದಿಲ್ಲ; ಬಾಯಿ ತೆಗೆಯುವುದಿಲ್ಲ. ತಾವೇನು ಬೇಕಾದರೂ ಮಾಡಿ; ಹುಡುಗನು ತಮ್ಮ ಕೈಯಲ್ಲಿರುವನು! ತಾವೇ ಅವನನ್ನು ರಕ್ಷಿಸಬೇಕು! ಅವನಿಗೆ ಸ್ವಲ್ಪ ಪ್ರಜ್ಞೆ ಬಂದು, ನನ್ನನ್ನು ಗುರುತಿಸಿ ಒಂದೆರಡು ಮಾತನ್ನಾಡಿದರೆ ಅಷ್ಟೇ ಸಾಕು! ಇಂತಹ ಯಾವ ಸಂಜೀವಿನಿಯೂ ಇಲ್ಲವೇ? ಹಾ, ಇವನೊಡನೆ ಒಂದೆರಡು ಮಾತನ್ನು ಆಡುವಂತಾಗಬಾರದೇ?

ಎನ್ನುತ್ತ ಮುನ್ಷಿಯವರು ಆವೇಶದಿಂದ ಮಾನಸರಾಮನನ್ನು ಕುರಿತು ಹೇಳಿದರು—ಮಗು, ಸ್ವಲ್ಪ ಕಣ್ಣು ತೆಗೆ! ನಿನ್ನ ದೇಹಸ್ಥಿತಿ ಹೇಗಿದೆ? ನಾನು

ನಿನ್ನ ಬಳಿ ಕುಳಿತು ಅಳುತ್ತಿರುವೆನು, ನೋಡು! ನನಗೆ ನಿನ್ನ ಬಗ್ಗೆ ಯಾವ ದೂಷಣೆಯೂ ಇಲ್ಲ; ನನ್ನ ಮನವು ನಿನ್ನ ವಿಷಯದಲ್ಲಿ ನಿಷ್ಕಲ್ಮಷವಾಗಿದೆ!

ಡಾಕ್ಟರ್—ನೀವು ಪುನಃ ಏನೇನೋ ಮಾತನ್ನು ಆರಂಭಿಸಿದಿರಲ್ಲ? ಬಾಬೂಸಾಹೇಬರೇ, ನೀವು ಚಿಕ್ಕ ಮಗುವಲ್ಲ; ವಯಸ್ಕರು. ಸ್ವಲ್ಪ ಧೈರ್ಯವನ್ನು ತಳೆಯಿರಿ!

ಮುನ್ಷಿ—ಹಾಗೆಯೇ ಆಗಲಿ, ಡಾಕ್ಟರ್‌ಸಾಹೇಬರೇ! ಇನ್ನು ನಾನು ಮಾತನಾಡುವುದಿಲ್ಲ; ಅಪರಾಧವಾಯಿತು. ತಾವು ಬೇಕಾದ್ದನ್ನು ಮಾಡಿ. ನನ್ನ ಮನಸು ಅವನ ವಿಷಯದಲ್ಲಿ ನಿಷ್ಕಲ್ಮಷವಾಗಿದೆ–ಎಂದು ತಿಳಿಸಲು ಯಾವ ಉಪಾಯವೂ ಇಲ್ಲವೇ? ತಾವೇ ಅವನಿಗೆ ಈ ಮಾತನ್ನು ತಿಳಿಸಿಬಿಡಿ, ಡಾಕ್ಟರ್‌ಸಾಹೇಬರೇ! 'ನಿನ್ನ ಹತಭಾಗ್ಯ ತಂದೆಯು ಅಳುತ್ತಿರುವರು. ಅವರ ಮನಸು ನಿನ್ನ ವಿಷಯದಲ್ಲಿ ನಿಷ್ಕಲ್ಮಷವಾಗಿದೆ; ಅವರ ಭ್ರಮೆಯು ಈಗ ದೂರವಾಯಿತು'–ಎಂದಷ್ಟು ಮಾತ್ರ ಅವನಿಗೆ ಹೇಳಿಬಿಡಿ! ನಾನು ಸುಮ್ಮನೆ ಕುಳಿತಿರುವೆನು; ಇನ್ನು ಮಾತನಾಡುವುದಿಲ್ಲ!

ಡಾಕ್ಟರ್—ಸ್ವಲ್ಪ ತಾಳ್ಮೆಯನ್ನು ತಂದುಕೊಳ್ಳಿ, ಬಾಬೂಸಾಹೇಬರೇ! ಇಲ್ಲದಿದ್ದರೆ ನಾನು ವಿವಶನಾಗಿ, ನಿಮ್ಮನ್ನು ಮನೆಗೆ ಹೋಗಿರೆಂದು ಹೇಳಬೇಕಾಗುವುದು. ಐದು ನಿಮಿಷ ಆಫೀಸ್‌ರೂಮಿಗೆ ಹೋಗಿ, ಡಾಕ್ಟರುಗಳಿಗೆ ಕಾಗದ ಬರೆಯುವೆನು. ನೀವು ಸುಮ್ಮನೆ ಕುಳಿತುಕೊಂಡಿರಿ!

ಹಾ! ಪ್ರಾಯದ ಪುತ್ರನ ಈ ಸ್ಥಿತಿಯನ್ನು ಕಂಡು ಯಾವ ಪಿತನ ಮನಸು ಧೈರ್ಯದಿಂದಿರಬಲ್ಲದು? ಮುನ್ಷಿಯವರು ಬಹಳ ಗಂಭೀರ ಸ್ವಭಾವದ ಮನುಷ್ಯರು. ಈ ಸಮಯದಲ್ಲಿ ಅತ್ತುಕರೆಯುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದಿದ್ದರು. ಆದರೂ ಶಾಂತರಾಗಿ ಕುಳಿತಿರಲು ಅವರಿಗೆ ಸಾಧ್ಯವಾಗಲಿಲ್ಲ. ದೈವಗತಿಯಿಂದ ಅವನಿಗೆ ಈ ಖಾಯಿಲೆಯುಂಟಾಗಿದ್ದರೆ ಅವರು ಶಾಂತರಾಗಿರುತ್ತಿದ್ದರು; ಇತರರಿಗೂ ಸಮಾಧಾನ ಹೇಳುತ್ತಿದ್ದರು; ಮತ್ತು ತಾವೇ ಬೇಕಾದ ಡಾಕ್ಟರುಗಳನ್ನು ಕರೆಸಿ ತೋರಿಸುತ್ತಿದ್ದರು. ಆದರೆ ಇದೆಲ್ಲವೂ ತಾವೇ ಹೊತ್ತಿಸಿದ ಬೆಂಕಿ ಎಂದು ತಿಳಿದೂ ತಿಳಿದೂ ಹೇಗೆ ಧೈರ್ಯದಿಂದಿರುವರು? ಯಾವ ಪಿತನೂ ಇಷ್ಟು ವಜ್ರಹೃದಯಿಯಾಗಿರಲಾರ! ಈ ಸಮಯದಲ್ಲಿ ಅವರ ರೋಮರೋಮವೂ

ಅವರನ್ನು ಧಿಕ್ಕರಿಸುತ್ತಿತ್ತು! ನನಗೆ ಈ ದುರ್ಭಾವನೆ ಏಕುಂಟಾಯಿತು? ಪ್ರತ್ಯಕ್ಷಪ್ರಮಾಣವಿಲ್ಲದೆ ಇಂತಹ ಭೀಷಣ ಕಲ್ಪನೆಯನ್ನು ನಾನೇಕೆ ಮಾಡಿದೆ? ವಾಸ್ತವವಾಗಿಯೂ ವಿವಾಹಬಂಧನಕ್ಕೆ ಸಿಲುಕಿಕೊಂಡುದೇ ತಪ್ಪಾಯಿತು; ನನ್ನ ಕಾಲುಗಳನ್ನು ನಾನೇ ಕೊಡಲಿಯಿಂದ ಕಡಿದುಕೊಂಡಂತಾಯಿತು! ಹೌದು, ಇದೇ ಈ ಎಲ್ಲ ಉಪದ್ರವಗಳಿಗೂ ಮೂಲಕಾರಣ ಎಂದುಕೊಂಡರು.

ಅದಿರಲಿ, ನಾನು ವಿವಾಹ ಮಾಡಿಕೊಂಡದ್ದರಲ್ಲಿ ತಪ್ಪೇನು? ಪ್ರಪಂಚದ ಸ್ತ್ರೀ-ಪುರುಷರೆಲ್ಲರೂ ಮದುವೆ ಮಾಡಿಕೊಳ್ಳುವರು. ಅವರ ಜೀವನವು ಆನಂದದಿಂದ ಜರುಗುವುದು ಆನಂದದ ಆಸೆಯಿಂದಲೇ ನಾವು ವಿವಾಹ ಮಾಡಿಕೊಳ್ಳುವುದು. ನೂರಾರು ಜನರು ಎರಡನೆಯ, ಮೂರನೆಯ, ನಾಲ್ಕನೆಯ ಮತ್ತು ಏಳನೆಯ ವಿವಾಹವನ್ನು ಸಹ ಮಾಡಿಕೊಂಡು ಸಂತೋಷದಿಂದ ಜೀವಿಸಿಲ್ಲವೇ? ಎಲ್ಲರ ಗತಿಯೂ ನನ್ನಂತಾಗಿದ್ದರೆ ನಿಜವಾಗಿಯೂ ಯಾರೂ ವಿವಾಹದ ಹೆಸರನ್ನೇ ಎತ್ತುತ್ತಿರಲಿಲ್ಲ! ಅಷ್ಟೇಕೆ. ನಮ್ಮ ತಂದೆಯವರೇ ಐವತ್ತೈದನೆಯ ವರ್ಷದಲ್ಲಿ ವಿವಾಹ ಮಾಡಿಕೊಳ್ಳಲಿಲ್ಲವೇ? ನಾನು ಜನಿಸಿದಾಗ ಅವರ ವಯಸ್ಸು ಅರುವತ್ತಕ್ಕೆ ಕಡಿಮೆ ಇರಲಿಲ್ಲ. ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಸ್ವಲ್ಪ ಅಂತರವಿದೆ—ಎಂಬುದು ದಿಟ. ಹಿಂದಿನ ಸ್ತ್ರೀಯರು ಓದಿಬರೆದವರಾಗಿರಲಿಲ್ಲ. ಪತಿಯು ಎಂತಹವನೇ ಆಗಿರಲಿ, ಪೂಜ್ಯನೆಂದು ತಿಳಿಯುತ್ತಿದ್ದರು. ಅಥವಾ ಪುರುಷನೇ ಎಲ್ಲವನ್ನೂ ಸಹಿಸಿಕೊಂಡು ತನ್ನ ಕೆಲಸ ಮಾಡಿಕೊಳ್ಳುತ್ತಿದ್ದನೋ? ಇರಬಹುದು! ಯುವಕನು ವೃದ್ಧಳ ಸಂಗಡ ಯಾವ ರೀತಿ ಪ್ರಸನ್ನನಾಗಿರಲಾರನೋ, ಅಂತೆಯೇ ಯುವತಿಯಾದರೂ ವೃದ್ಧನ ಸಂಗಡ ಹೇಗೆ ಪ್ರಸನ್ನಳಾಗಿರುವಳು? ಆದರೆ ನಾನೇನೂ ಅಂತಹ ವೃದ್ಧನಲ್ಲ; ನೋಡಿದವರು ನನಗೆ ನಲವತ್ತಕ್ಕಿಂತ ಹೆಚ್ಚು ವಯಸ್ಸು ಹೇಳಲಾರರು! ಅದೇನೇ ಇರಲಿ, ಯೌವನವು ಕಳೆದ ಬಳಿಕ ಯುವತಿಯನ್ನು ವಿವಾಹ ಮಾಡಿಕೊಳ್ಳುವುದರಿಂದ ನಾಚಿಕೆಗೇಡೇ ಸರಿ! ಇದರಲ್ಲಾವ ಸಂದೇಹವೂ ಇಲ್ಲ! ಸ್ತ್ರೀಯು ಸ್ವಭಾವತಃ ಲಜ್ಜಾಶೀಲೆ. ಮತ್ತು ಪುರುಷರಿಗಿಂತ ಹೆಚ್ಚು ಸಂಯಮಶೀಲೆ. ಯೋಗ್ಯ ವಯಸ್ಕ ಪತಿಯನ್ನು ಪಡೆದು, ಇತರ ಪುರುಷರ ಸಂಗಡ ನಕ್ಕು ನುಡಿದರೂ ಅವಳ ಮನಸು ಶುದ್ಧವಾಗಿರುವುದು. ವೃದ್ಧನನ್ನು ವಿವಾಹವಾದ ಸ್ತ್ರೀಯು ಇತರರ ಕಡೆಗೆ

ಕಣ್ಣೆತ್ತಿ ನೋಡದಿದ್ದರೂ ಅವಳ ಮನಸು ದುಃಖದಿಂದಿರುವುದು. ಅದು ಗಟ್ಟಿ ಗೋಡೆಯಂತೆ; ಇದು ಟೊಳ್ಳು ಗೋಡೆಯಂತೆ.

ಎಂದು ಮುಂತಾಗಿ ಯೋಚಿಸುತ್ತಿರುವಂತೆಯೇ ಮುನ್ಷಿಯವರಿಗೆ ಜಂಪು ಹತ್ತಿದಂತಾಯಿತು. ಮನಸಿನ ಭಾವನೆಗಳು ತತ್ಕಾಲಕ್ಕೆ ಸ್ಪಷ್ಟದ ರೂಪವನ್ನು ಧರಿಸಿದವು. ಅವರು ಈ ರೀತಿಯ ಕನಸನ್ನು ಕಾಣತೊಡಗಿದರು— ತಮ್ಮ ಮೊದಲನೆಯ ಹೆಂಡತಿಯು ಮಾನಸರಾಮ-ನೆದುರಿಗೆ ಬಂದು ನಿಂತು ಹೇಳುವಳು— ಸ್ವಾಮೀ, ನೀವೇನು ಮಾಡಿದಿರಿ? ನನ್ನ ರಕ್ತವನ್ನು ಸವಿಸಿ ಸಾಕಿದ ಈ ಬಾಲಕನನ್ನು ನೀವಿಷ್ಟು ನಿರ್ದಯದಿಂದ ಕೊಂದುಹಾಕುತ್ತಿರುವಿರಲ್ಲಾ? ಇಂತಹ ಆದರ್ಶಚರಿತ್ರ ಬಾಲಕನ ಮೇಲೆ ಈಪರಿಯ ಘೋರ ಕಳಂಕವನ್ನು ಹಚ್ಚಿದಿರಾ? ಈಗ ಕುಳಿತು ದುಃಖಿಸುವುದರಿಂದೇನು? ಅವನು ನಿಮ್ಮ ಕೈತಪ್ಪಿದಂತೆಯೇ! ನಿಮ್ಮ ನಿರ್ದಯ ಕರಗಳಿಂದ . ಕಿತ್ತುಕೊಂಡು, ಅವನನ್ನು ನನ್ನ ಸಂಗಡ ಕರೆದುಕೊಂಡು ಹೋಗುವೆನು. ನೀವೆಂದೂ ಸಂಶಯ ಸ್ವಭಾವದವರಲ್ಲ; ವಿವಾಹವಾದೊಡನೆಯೇ ಸಂಶಯದ ಗಂಟನ್ನೂ ಕಟ್ಟಿಕೊಂಡು ಬಂದಿರಾ? ಈ ಕೋಮಲ ಹೃದಯದ ಮೇಲೆ ಇಂತಹ ಕಠೋರ ಆಘಾತವೇ? ಇಷ್ಟು ಭೀಷಣ ಕಳಂಕವೇ? ಈಪರಿಯ ಅಪಮಾನವನ್ನು ಸಹಿಸಿ ಜೀವಿಸಿರುವವರು ನಿಜವಾಗಿಯೂ ನಾಚಿಕೆಗೇಡಿಗಳೇ ಸರಿ! ನನ್ನ ಪುತ್ರನು ಇದೆಲ್ಲವನ್ನೂ ಸಹಿಸಲಾರ! ಎನ್ನುತ್ತ ಪುತ್ರನನ್ನು ತನ್ನ ಸಂಗಡ ಕರೆದುಕೊಂಡು ಹೊರಟುಹೋದಳು ಮುನ್ಷಿಯವರು ಅಳುತ್ತ ಮಾನಸರಾಮನನ್ನು ಅವಳ ಕೈಯಿಂದ ಕಿತ್ತುಕೊಳ್ಳಲು ಕೈ ಚಾಚಿದರು; ಅಷ್ಟರಲ್ಲಿ ಎಚ್ಚರಿಕೆಯಾಯಿತು. ನೋಡಲಾಗಿ, ಡಾಕ್ಟರ್ ಲಹರಿ, ಡಾಕ್ಟರ್ ಭಟ್ಟ ಮುಂತಾಗಿ ಐದಾರು ಮಂದಿ ಡಾಕ್ಟರುಗಳು ಎದುರಿಗೆ ನಿಂತಿದ್ದರು.

# ಹನ್ನೆರಡನೆಯ ಪರಿಚ್ಛೇದ

ಮೂರು ದಿನಗಳು ಕಳೆದವು. ಮುನ್ಷಿಯವರು ಮನೆಗೆ ಬರಲಿಲ್ಲ. ರುಕ್ಮಿಣಿಯು ಎರಡು ಹೊತ್ತೂ ಆಸ್ಪತ್ರೆಗೆ ಹೋಗಿ ಮಾನಸರಾಮನನ್ನು ನೋಡಿಕೊಂಡು ಬರುತ್ತಿದ್ದಳು. ಜಿಯರಾಮ, ಶ್ರೀರಾಮರೂ ಹೋಗುತ್ತಿದ್ದರು.

ಆದರೆ, ನಿರ್ಮಲೆ ಹೇಗೆ ಹೋಗುವಳು ? ಅವಳ ಕಾಲುಗಳಿಗೆ ಬೇಡಿ ಬಿದ್ದಿತ್ತು. ಮಾನಸರಾಮನ ದೇಹಸ್ಥಿತಿಯನ್ನರಿಯಲು ಅವಳ ಮನಸು ಕಾತರಗೊಳ್ಳು ತ್ತಿತ್ತು. ರುಕ್ಮಿಣಿಯನ್ನು ಕೇಳಿದರೆ ಗದರಿಸುತ್ತಿದ್ದಳು. ಹುಡುಗರನ್ನು ಕೇಳಿ ದರೆ ಮನಸಿಗೆ ಬಂದ ಮಾತನ್ನು ಹೇಳುತ್ತಿದ್ದರು. ಒಮ್ಮೆ ತಾನೇ ಹೋಗಿ ನೋಡಬೇಕೆಂದು ಅವಳ ಚಿತ್ತವು ವ್ಯಾಕುಲಗೊಳ್ಳುತ್ತಿತ್ತು ಮುನ್ಷಿಯವರ ಸಂದೇಹವೇ ಅವರ ಪುತ್ರಪ್ರೇಮವನ್ನು ಶಿಥಿಲ ಮಾಡಿತೋ, ಅವರ ಕೃಪ ಣತೆಯೋ ಮಾನಸರಾಮನು ಗುಣಮುಖವಾಗಲು ಬಾಧಕವಾಯಿತೋ ?– ಎಂದು ಅವಳಿಗೆ ಭಯವಾಯಿತು. ಆಸ್ಪತ್ರೆಯ ಡಾಕ್ಟರ ಬಳಿ ಹೋಗಿ, ಅವ ರಿಗೆ ಸಹಸ್ರ ರೂಪಾಯಿಗಳ ಉಪಹಾರವನ್ನಿತ್ತು, ಮಾನಸರಾಮನನ್ನು ಹೇಗಾದರೂ ಮಾಡಿ ರಕ್ಷಿಸಿರೆಂದು ಕೇಳಿಕೊಳ್ಳಲೇ ?–ಎಂಬ ಪ್ರಬಲ ಇಚ್ಛೆ ಅವಳ ಮನದಲ್ಲುಂಟಾಯಿತು ಆದರೆ ಅವಳ ಬಳಿ ಅಷ್ಟು ಹಣವೂ ಇರಲಿಲ್ಲ, ಅಷ್ಟು ಸಾಹಸವೂ ಇರಲಿಲ್ಲ ! ಈಗಲೂ ಅವಳು ಅಲ್ಲಿಗೆ ಹೋಗುವಂತಿದ್ದರೆ, ಮಾನಸರಾಮನು ಗುಣಮುಖವಾಗುತ್ತಿದ್ದನು. ಅವನ ಸೇವೆ ಶುಶ್ರೂಷೆಗಳು ಸರಿಯಾದ ರೀತಿಯಲ್ಲಿ ನಡೆಯುತ್ತಿಲ್ಲ. ಇಲ್ಲದಿದ್ದರೆ ಮೂರು ದಿನಗಳ ವರೆಗೆ ಜ್ವರ ಇಳಿಯದಿರುವುದೇ ? ಇದು ದೈಹಿಕ ಜ್ವರವಲ್ಲ, ಮಾನಸಿಕ ಜ್ವರ ! ಚಿತ್ತವು ಶಾಂತವಾದ ಹೊರತು ಇದರ ಪ್ರಕೋಪವು ಶಾಂತವಾಗಲಾರದು ! ಅವಳು ಒಂದು ದಿನದ ಮಟ್ಟಿಗಾದರೂ ಅವನ ಬಳಿ ಕುಳಿತಿದ್ದು, ಮುನ್ಷಿ ಯವರ ಮನಸು ನಿರ್ಮಲವಾಗಿರುವಂತಿದ್ದರೆ ಬಹುಶಃ ತಂದೆಯವರ ಹೃದ ಯವು ನಿಷ್ಕಲ್ಮಷವಾಗಿದೆಯೆಂದು ಅವನಿಗೆ ನಂಬಿಕೆಯುಂಟಾಗುತ್ತಿತ್ತು ! ಮತ್ತು ಅವನು ಬೇಗನೆ ಗುಣಮುಖವಾಗುತ್ತಿದ್ದನು. ಆದರೆ ಹೀಗಾಗುವುದೇ? ಅವಳು ಅಲ್ಲಿಗೆ ಬಂದರೆ ಮುನ್ಷಿಯವರ ಮನಸು ಪ್ರಸನ್ನವಾಗಿರಬಲ್ಲದೇ ? ಇಷ್ಟಾಗರೂ ಅವರ ಮನಸು ಅವಳ ವಿಷಯದಲ್ಲಿ ನಿಷ್ಕಲ್ಮಷವಾಗಲಿಲ್ಲವೇ ? ಮನೆಯಿಂದ ಹೊರಡುವಾಗ ಅವರು ತಮ್ಮ ಪ್ರಮಾದಕ್ಕಾಗಿ ಪಶ್ಚಾತ್ತಾಪಪಡು ತ್ತಿರುವರೋ—ಎಂಬಂತೆ ತೋರುತ್ತಿತ್ತು. ಆದರೆ, ಅಲ್ಲಿಗೆ ಹೋದಕೂಡಲೇ ಅವರ ಸಂದೇಹವು ಪುನಃ ಕಾಣಿಸಿಕೊಂಡೀತೇ ?

ಎಂದು ಮುಂತಾದ ಯೋಚನೆಗಳಲ್ಲೇ ಮೂರು ದಿನಗಳು ಕಳೆದವು. ಮನೆಯಲ್ಲಿ ಒಲೆಯನ್ನೂ ಹೊತ್ತಿಸಲಿಲ್ಲ, ಯಾರೂ ಏನನ್ನೂ ತಿನ್ನಲಿಲ್ಲ.

ಹುಡುಗರಿಗೆ ಮಾತ್ರ ಅಂಗಡಿಯಿಂದ ಪೂರಿಯನ್ನು ತರಿಸಿಕೊಟ್ಟು, ನಿರ್ಮಲೆಯೂ ರುಕ್ಮಿಣಿಯೂ ಉಪವಾಸವಿರುತ್ತಿದ್ದರು; ಅವರಿಗೆ ಭೋಜನದ ಇಚ್ಛೆಯೇ ಇರಲಿಲ್ಲ!

ನಾಲ್ಕನೆಯ ದಿನ ಜಯರಾಮನು ಶಾಲೆಯಿಂದ ಹಿಂತಿರುಗುವಾಗ ಆಸ್ಪತ್ರೆಗೆ ಹೋಗಿ ಬಂದನು. 'ಆಸ್ಪತ್ರೆಗೆ ಹೋಗಿದ್ದೆಯಾ ಜಯಾ? ಈ ದಿನ ಸ್ಥಿತಿ ಹೇಗಿದೆ? ನಿಮ್ಮ ಅಣ್ಣನು ಎದ್ದು ಕುಳಿತಿದ್ದನೇ?' ಎಂದು ನಿರ್ಮಲೆಯು ಕೇಳಿದಳು.

ಜಯರಾಮನು ಅಳುಮುಖ ಮಾಡಿಕೊಂಡು 'ಅಮ್ಮಾ, ಈ ದಿನ ಅವನು ಏನೂ ಮಾತನಾಡುತ್ತಲೇ ಇರಲಿಲ್ಲ. ಸುಮ್ಮನೆ ಮಂಚದ ಮೇಲೆ ಮಲಗಿ, ಜೋರಾಗಿ ಕೈಕಾಲುಗಳನ್ನು ಬಡಿಯುತ್ತಿದ್ದನು' ಎಂದು ಹೇಳಿದನು.

ನಿರ್ಮಲೆಯ ಮುಖ ಮಲಿನವಾಯಿತು. ಗಾಬರಿಯಿಂದ ಕೇಳಿದಳು—ನಿಮ್ಮ ತಂದೆಯವರು ಅಲ್ಲಿರಲಿಲ್ಲವೇ?

ಜಯ—ಏಕಿರಲಿಲ್ಲ? ಅಲ್ಲೇ ಇದ್ದರು. ಈ ದಿನ ಬಹಳ ಅಳುತ್ತಿದ್ದರು!

ನಿರ್ಮಲೆಯ ಎದೆ ಡಬಡಬ ಬಡಿದುಕೊಳ್ಳತೊಡಗಿತು. 'ಡಾಕ್ಟರುಗಳು ಅಲ್ಲಿರಲಿಲ್ಲವೇ?' ಎಂದು ಕೇಳಿದಳು.

ಜಯ—ಡಾಕ್ಟರುಗಳೂ ಅಲ್ಲೇ ಇದ್ದರು. ಮತ್ತು ತಮ್ಮತಮ್ಮಲ್ಲೇ ಸಲಹೆ ನಡೆಸಿಕೊಳ್ಳುತ್ತಿದ್ದರು. ರೋಗಿಯ ದೇಹಕ್ಕೆ ಸ್ವಲ್ಪ ತಾಜಾ ರಕ್ತವನ್ನು ಸೇರಿಸಬೇಕೆಂದು ಮುಖ್ಯ ಡಾಕ್ಟರು ಇಂಗ್ಲೀಷಿನಲ್ಲಿ ಹೇಳುತ್ತಿದ್ದರು. ಅದಕ್ಕೆ ಬಾಬೂಜೀಯವರು 'ನನ್ನ ದೇಹದಲ್ಲಿ ಎಷ್ಟು ರಕ್ತ ಬೇಕಾದರೂ ತೆಗೆದುಕೊಳ್ಳಿ' ಎಂದರು. ಡಾಕ್ಟರು ನಕ್ಕು 'ನಿಮ್ಮ ರಕ್ತದಿಂದ ಪ್ರಯೋಜನವಾಗಲಾರದು; ಯಾರಾದರೂ ದೃಢಕಾಯ ಯುವಕನ ರಕ್ತ ಬೇಕು' ಎಂದು ಹೇಳಿದರು. ಹೀಗೆನ್ನುತ್ತ ಅಣ್ಣನಿಗೆ ಒಂದು ಇಂಜಕ್ಷನ್ ಕೊಟ್ಟರು. ಅಬ್ಬಬ್ಬ, ಎಷ್ಟು ದೊಡ್ಡ ಸೂಜಿ! ಅಣ್ಣನು ತುಟಿಪಿಟಕ್ಕೆನ್ನಲಿಲ್ಲ. ನಾನು ಹೆದರಿಕೆಯಿಂದ ಕಣ್ಣುಗಳನ್ನೇ ಮುಚ್ಚಿಕೊಂಡುಬಿಟ್ಟೆ!

ಮಹಾ ಸಂಕಲ್ಪಗಳು ಯಾವಾಗಲೂ ಆವೇಶದಲ್ಲೇ ಜನ್ಮತಾಳುವವು! ಇದುವರೆಗೆ ನಿರ್ಮಲೆಯು ಹೆದರಿ ಸಾಯುತ್ತಿದ್ದಳು. ಇಂದು ಅವಳ ಮುಖದ ಮೇಲೆ ದೃಢಸಂಕಲ್ಪವು ಕಾಣಿಸಿಕೊಂಡಿತು. ತನ್ನ ದೇಹದ ತಾಜಾ ರಕ್ತ ವನ್ನು ಕೊಡುವುದಾಗಿ ಅವಳು ನಿಶ್ಚಯಿಸಿಕೊಂಡಳು. ಅವಳ ರಕ್ತದಿಂದ ಮಾನಸರಾಮನ ಪ್ರಾಣ ಉಳಿಯುವಂತಿದ್ದರೆ ಅದರ ಅಂತಿಮ ಬಿಂದು ವನ್ನು ಸಹ ಸಂತೋಷದಿಂದ ಸಮರ್ಪಿಸಲು ಸಿದ್ಧವಾಗಿದ್ದಳು! ಈಗ ಯಾರೇನು ತಿಳಿದುಕೊಂಡರೂ ಅವಳು ಲಕ್ಷಿಸುವಂತಿರಲಿಲ್ಲ. 'ಜಯ, ನೀನು ಓಡಿಹೋಗಿ ಒಂದು ಗಾಡಿ ಕರೆದುಕೊಂಡು ಬಾ! ನಾನು ಆಸ್ಪತ್ರೆಗೆ ಹೋಗು ವೆನು' ಎಂದಳು.

ಜಯ—ಈ ಹೊತ್ತಿನಲ್ಲಿ ಅಲ್ಲಿ ಬಹಳ ಮಂದಿ ಇರುವರು. ಸ್ವಲ್ಪ ರಾತ್ರಿಯಾಗಲಿ.

ನಿರ್ಮಲೆ—ಇಲ್ಲ, ನೀನು ಈಗಲೇ ಗಾಡಿ ಕರೆದುಕೊಂಡು ಬಾ!

ಜಯ—ಬಾಬೂಜೀಯವರು ಕೋಪಗೊಂಡರೆ?

ನಿರ್ಮಲೆ—ಕೋಪಗೊಳ್ಳಲಿ! ನೀನು ಈ ಕ್ಷಣ ಹೋಗಿ ಗಾಡಿ ಕರೆದು ಕೊಂಡು ಬಾ!

ಜಯ—ಅಮ್ಮನೇ ಗಾಡಿ ಕರೆತರಲು ಹೇಳಿದರೆಂದು ಬಾಬೂಜೀ ಯವರಿಗೆ ಹೇಳುವೆನು!

ನಿರ್ಮಲೆ—ಹೇಳು!

ಅತ್ತ ಜಯರಾಮನು ಗಾಡಿ ತರಲು ಹೋದನು. ಅಷ್ಟರಲ್ಲಿ ನಿರ್ಮ ಲೆಯು ತಲೆ ಬಾಚಿಕೊಂಡು, ಬಟ್ಟೆ ಬದಲಾಯಿಸಿ, ಆಭರಣವನ್ನು ಧರಿಸಿ, ದ್ವಾರದ ಬಳಿ ಬಂದು ಗಾಡಿಯ ಹಾದಿ ನೋಡುತ್ತ ನಿಂತಳು.

ರುಕ್ಮಿಣಿಯು ತನ್ನ ಕೊಠಡಿಯಲ್ಲಿ ಕುಳಿತಿದ್ದಳು. ನಿರ್ಮಲೆಯ ಈ ಸಿದ್ಧತೆಯನ್ನು ಕಂಡು ಕೇಳಿದಳು—ಎಲ್ಲಿಗೆ ಹೊರಟಿದ್ದೀವೆ?

ನಿರ್ಮಲೆ—ಸ್ವಲ್ಪ ಆಸ್ಪತ್ರೆಯ ವರೆಗೆ ಹೋಗಿ ಬರುವೆನು.

ರುಕ್ಮಿಣಿ—ಅಲ್ಲಿ ಹೋಗಿ ಏನು ಮಾಡುವೆ?

ನಿರ್ಮಲೆ—ಏನೂ ಇಲ್ಲ, ನಾನೇನು ಮಾಡುವೆನು? ಎಲ್ಲಾ ಮಾಡು ವವನು ಆ ಭಗವಂತನು! ಕೇವಲ ನೋಡಬೇಕೆಂದು ಆಸೆಯಾಗುತ್ತಿದೆ.

ರುಕ್ಮಿಣಿ—ನೀನು ಹೋಗಬೇಡವೆಂದು ಹೇಳುವೆನು.

ನಿರ್ಮಲೆಯು ವಿನೀತ ಭಾವದಿಂದ ನುಡಿದಳು—ಅಕ್ಕ! ಇಂದು ಅವನ ಸ್ಥಿತಿಯು ಬಹಳ ನಾಜೂಕಾಗಿದೆ ಎಂದು ಜಯರಾಮನು ತಿಳಿಸಿದನು. ಈಗಲೇ ಹೋಗಿ ಬರುವೆನು; ಮನಸು ನಿಲ್ಲುತ್ತಿಲ್ಲ! ನೀವೂ ಬನ್ನಿ, ಅಕ್ಕ!

ರುಕ್ಮಿಣಿ—ನಾನು ನೋಡಿ ಬಂದಿರುವೆನು. ಈಗ ಬೇರೆಯವರ ರಕ್ತವನ್ನು ತೆಗೆದು ಅವನ ಶರೀರಕ್ಕೆ ಸೇರಿಸುವುದರಿಂದ ಮಾತ್ರ ಅವನು ಜೀವಿಸುವ ಸಂಭವವಿದೆ. ತನ್ನ ಶರೀರದ ರಕ್ತವನ್ನು ಇತರರಿಗಾಗಿ ಯಾರು ಏಕೆ ತೆಗೆದು ಕೊಡುವರು? ಅವರಿಗೂ ಪ್ರಾಣಭಯವಿಲ್ಲವೇ?

ನಿರ್ಮಲೆ—ಇದಕ್ಕಾಗಿಯೇ ನಾನು ಹೋಗುತ್ತಿರುವೆನು. ನನ್ನ ರಕ್ತದಿಂದ ಕೆಲಸವಾಗಲಾರದೇ ಅಕ್ಕ!

ರುಕ್ಮಿಣಿ—ಏಕಾಗಲಾರದು? ಯೌವನಸ್ಥರ ತಾಜಾ ರಕ್ತವೇ ಈಗ ಆಗತ್ಯವಾಗಿರುವುದು. ಆದರೆ, ನಿನ್ನ ರಕ್ತದಿಂದ ಮಾನಸರಾಮನ ಪ್ರಾಣ ಉಳಿಯುವುದಕ್ಕಿಂತ ಸುಮ್ಮನಿರುವುದು ಮೇಲು!

ಗಾಡಿ ಬಂದಿತು. ಜಯರಾಮ ಮತ್ತು ನಿರ್ಮಲೆ ಇಬ್ಬರೂ ಅದರಲ್ಲಿ ಕುಳಿತರು. ಗಾಡಿ ಆಸ್ಪತ್ರೆಯ ಕಡೆಗೆ ನಡೆಯಿತು.

ರುಕ್ಮಿಣಿಯು ದ್ವಾರದ ಬಳಿ ನಿಂತು ಬಹಳ ಹೊತ್ತಿನ ವರೆಗೆ ಅಳುತ್ತಿದ್ದಳು. ಇಂದೇ ಮೊದಲನೆಯ ಬಾರಿ ಅವಳಿಗೆ ನಿರ್ಮಲೆಯ ಮೇಲೆ ದಯೆಯುಂಟಾದುದು! ತನ್ನ ಕೈ ನಡೆಯುವಂತಿದ್ದರೆ ನಿಜವಾಗಿಯೂ ನಿರ್ಮಲೆಯನ್ನು ಕಟ್ಟಿರಿಸುತ್ತಿದ್ದಳು. ಕರುಣೆ ಮತ್ತು ಸಹಾನುಭೂತಿಯ ಆವೇಶವು ನಿರ್ಮಲೆಯನ್ನು ಎಲ್ಲಿಗೆ ಎಳೆದುಕೊಂಡು ಹೋಯಿತೆಂಬುದನ್ನು ಅವಳು ಅಪ್ರಕಟ ರೂಪದಿಂದ ಕಾಣುತ್ತಿದ್ದಳು. ಅಷ್ಟಾದರೂ 'ಇದು ದುರ್ಭಾಗ್ಯ ಪ್ರೇರಣೆ, ಸರ್ವನಾಶದ ಮಾರ್ಗ!' ಎಂದುಕೊಂಡಳು.

ನಿರ್ಮಲೆಯು ಆಸ್ಪತ್ರೆಯನ್ನು ತಲುಪಿದಾಗ ದೀಪ ಹೊತ್ತಿಸಿತ್ತು. ಡಾಕ್ಟರುಗಳು ತಮ್ಮ ಅಭಿಪ್ರಾಯವನ್ನು ಹೇಳಿ ಹೊರಟುಹೋಗಿದ್ದರು. ಮಾನಸರಾಮನ ಜ್ವರ ತುಸು ಕಡಿಮೆಯಾಗಿತ್ತು. ಅವನು ಎವೆ ಇಕ್ಕದೆ ದ್ವಾರದೆಡೆಗೇ ದಿಟ್ಟಿಸುತ್ತಿದ್ದನು. ಅವನ ದೃಷ್ಟಿ ಉನ್ಮುಕ್ತ ಆಕಾಶದ ಕಡೆಗೆ

ನೆಟ್ಟಿತ್ತು. ಯಾವುದೋ ದೇವತೆಯ ಹಾದಿ ಕಾಯುತ್ತಿರುವನೋ ? ಎಂಬಂ
ತಿತ್ತು. ತಾನೆಲ್ಲಿರುವೆನು ? ಯಾವ ಸ್ಥಿತಿಯಲ್ಲಿರುವೆನು ? ಎಂಬುದರ ಅರಿವು
ಅವನಿಗಿರಲಿಲ್ಲ.

ಅಕಸ್ಮಾತ್ ನಿರ್ಮಲೆಯನ್ನು ಕಂಡು ಅವನು ಗಾಬರಿಯಿಂದ ಎದ್ದು
ಕುಳಿತನು. ಅವನ ಸಮಾಧಿ ಭಂಗವಾಯಿತು ! ಅವನ ವಿಲುಪ್ತ ಚೇತನೆಯು
ಪ್ರದೀಪ್ತವಾಯಿತು. ತನ್ನ ಸ್ಥಿತಿಯ ಅರಿವು ಆಗ ಅವನಿಗಾಯಿತು ! ಮರೆತಿದ್ದ
ಯಾವುದೋ ಮಾತು ನೆನಪಿಗೆ ಬಂದಂತಾಯಿತು. ಅವನು ಕಣ್ಣುಗಳನ್ನರಳಿಸಿ
ನಿರ್ಮಲೆಯನ್ನು ನೋಡಿ, ಮುಖ ತಿರುಗಿಸಿಕೊಂಡನು.

ಮುನ್ಷಿಯವರು ಆಶ್ಚರ್ಯಗೊಂಡು, ತೀವ್ರ ಸ್ವರದಿಂದ ನಿರ್ಮಲೆಯನ್ನು
ಕೇಳಿದರು—ನೀನು ಇಲ್ಲಿಗೇಕೆ ಬಂದೆ ? ಏನು ಮಾಡಲು ಬಂದೆ ?

ನಿರ್ಮಲೆ ಅವಾಕ್ಕಾದಳು ! ಈ ಒಂದು ಪ್ರಶ್ನೆಗೆ ಅವಳು ಉತ್ತರ
ಕೊಡಲಾರದೆಹೋದಳು ! ಇದೆಂತಹ ಜಟಿಲ ಪ್ರಶ್ನೆ ? ಮನೆಯ ಮನುಷ್ಯ
ನೊಬ್ಬನು ಖಾಯಿಲೆ ಇದ್ದು, ಅವನನ್ನು ನೋಡಬಂದರೆ, 'ಏನು ಮಾಡಲು
ಬಂದೆ ?' ಎಂದು ಕೇಳುವುದೇ ?

ಅವಳು ಬುದ್ಧಿಶೂನ್ಯಳಾದಳು; ಸಂಜ್ಞಾಹೀನಳಾದಳು. ಮುನ್ಷಿಯವರ
ಶೋಕಸಂತಾಪಗಳ ಮಾತನ್ನು ಹುಡುಗರ ಬಾಯಿಂದ ಕೇಳಿ, ಈಗಲಾದರೂ
ಅವರ ಮನಸು ನಿಷ್ಕಲ್ಮಷವಾಗಿರಬಹುದೆಂದು ಅವಳು ಊಹಿಸಿದ್ದಳು. ಆದರೆ
ಅದು ಕೇವಲ ತನ್ನ ಭ್ರಮೆ ಎಂದು ಈಗ ಅವಳಿಗರಿವಾಯಿತು. ನಿಜವಾ
ಗಿಯೂ ಮಹಾ ಭ್ರಮೆಯೇ ಹೌದು ! ಅಶ್ರುವೃಷ್ಟಿಯಿಂದಲೂ ಸಂದೇಹಾ
ಗ್ನಿಯು ಶಾಂತವಾಗಲಿಲ್ಲವೆಂದು ಅವಳು ತಿಳಿದಿದ್ದರೆ ನಿಜವಾಗಿಯೂ ಇಲ್ಲಿಗೆ
ಬರುತ್ತಿರಲಿಲ್ಲ; ಮನೆಯಲ್ಲೇ ಮರುಗಿ ಮರುಗಿ ಪ್ರಾಣ ಬಿಡುತ್ತಿದ್ದಳು. ಮನೆ
ಯಿಂದ ಹೊರಗೆ ಕಾಲಿಡುತ್ತಿರಲಿಲ್ಲ.

ಮುನ್ಷಿಯವರು ಪುನಃ ಅದೇ ಪ್ರಶ್ನೆಯನ್ನು ಕೇಳಿದರು —ನೀನು ಇಲ್ಲಿ
ಗೇಕೆ ಬಂದೆ ?

ನಿರ್ಮಲೆಯು ನಿಶ್ಶಂಕ ಭಾವದಿಂದ ಉತ್ತರವಿತ್ತಳು—ನೀವು ಇಲ್ಲೇನು
ಮಾಡಲು ಬಂದಿರಿ ?

ಮುನ್ಶಿಯವರಿಗೆ ಮಿತಿಮೀರಿದ ಕೋಪ ಬಂತು. ಸಿಡಿಗುಟ್ಟುತ್ತ ಮಂಚದಿಂದೆದ್ದು, ನಿರ್ಮಲೆಯ ಕೈಹಿಡಿದು ಹೇಳಿದರು—ನೀನಿಲ್ಲಿ ಬರುವ ಅವಶ್ಯಕತೆಯಿಲ್ಲ! ನಾನು ಹೇಳಿಕಳುಹಿಸಿದಾಗ ಬರಬೇಕಾಗಿತ್ತು, ತಿಳಿಯಿತೋ?

ಆಹಾ! ಎಂತಹ ಅನರ್ಥವಾಯಿತು! ಮಂಚದಿಂದ ಎದ್ದು ಕುಳಿತುಕೊಳ್ಳಲು ಸಹ ಸಾಧ್ಯವಿಲ್ಲದ ಮನಸಾರಾಮನು ತಟ್ಟನೆ ಎದ್ದು ನಿಂತು, ನಿರ್ಮಲೆಯ ಕಾಲುಗಳನ್ನು ಹಿಡಿದು, ಅಳುತ್ತ ಹೇಳಿದನು—ಅಮ್ಮಾ! ಈ ಹತಭಾಗ್ಯನಿಗೋಸ್ಕರ ವ್ಯರ್ಥವಾಗಿ ನಿಮಗಿಷ್ಟು ಕಷ್ಟವಾಯಿತು. ನಾನು ನಿಮ್ಮ ಸ್ನೇಹವನ್ನೆಂದೂ ಮರೆಯಲಾರೆ! ನನ್ನ ಪುನರ್ಜನ್ಮವು ನಿಮ್ಮ ಗರ್ಭದಲ್ಲಾಗಿ, ನಿಮ್ಮ ಋಣವನ್ನು ತೀರಿಸುವಂತಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸುವೆನು! ನಾನು ನಿಮ್ಮನ್ನು ವಿಮಾತೆ ಎಂದು ಭಾವಿಸಲಿಲ್ಲ. ಮಾತೆ ಎಂದೇ ತಿಳಿದೆನೆಂಬುದನ್ನು ಭಗವಂತನೇ ಬಲ್ಲ! ನಿಮ್ಮ ವಯಸ್ಸು ನನಗಿಂತ ಅಷ್ಟೇನೂ ಹೆಚ್ಚಲ್ಲದಿದ್ದರೂ, ನೀವು ಮಾತೆಯ ಸ್ಥಾನದಲ್ಲಿರುವಿರಿ! ನಿಮ್ಮನ್ನು ನಾನು ಸದಾ ಇದೇ ಭಾವನೆಯಿಂದ ಕಾಣುತ್ತಿದ್ದೆನು. ಇನ್ನು ಮಾತನಾಡಲಾಗುವುದಿಲ್ಲ; ಅಮ್ಮಾ, ಕ್ಷಮಿಸಿ! ಇದೇ ಅಂತಿಮ ಭೇಟಿ!

ನಿರ್ಮಲೆಯು ಅಶ್ರುಪ್ರವಾಹವನ್ನು ತಡೆಯುತ್ತ ಹೇಳಿದಳು—ಇಂತಹ ಮಾತನ್ನೇಕೆ ಆಡುವೆ? ಇನ್ನು ನಾಲ್ಕಾರು ದಿನಗಳಲ್ಲಿ ಗುಣಮುಖನಾಗುವೆ!

ಮನಸಾರಾಮನು ಕ್ಷೀಣಸ್ವರದಿಂದ ನುಡಿದನು—ಇನ್ನು ಬದುಕಿರುವ ಆಸೆ ಇಲ್ಲ, ಮಾತನಾಡಲು ಶಕ್ತಿಯೂ ಇಲ್ಲ!

ಎನ್ನುತ್ತ ಮನಸಾರಾಮನು ಅಶಕ್ತನಾಗಿ ನೆಲದ ಮೇಲೆ ಮಲಗಿಕೊಂಡನು. ನಿರ್ಮಲೆಯು ಪತಿಯ ಕಡೆಗೆ ನಿರ್ಭಯ ನೇತ್ರದಿಂದ ನೋಡಿ ಕೇಳಿದಳು—ಡಾಕ್ಟರುಗಳು ಏನು ಸಲಹೆ ಇತ್ತರು?

ಮುನ್ಶಿ—ತಾಜಾ ರಕ್ತವನ್ನು ಅವನ ಶರೀರಕ್ಕೆ ಸೇರಿಸಿದರೆ ಬದುಕಬಹುದೆಂದು ಹೇಳಿದರು.

ನಿರ್ಮಲೆ—ತಾಜಾ ರಕ್ತವು ಸಿಕ್ಕರೆ, ಅವನ ಪ್ರಾಣರಕ್ಷಣೆಯಾಗುವುದೇ?

ಮುನ್ಶಿಯವರು ನಿರ್ಮಲೆಯನ್ನು ತೀವ್ರ ದೃಷ್ಟಿಯಿಂದ ನೋಡಿ

ನುಡಿದರು—ಅದನ್ನು ಹೇಳಲು ನಾನೇನೂ ಭಗವಂತನಲ್ಲ; ಅಥವಾ ಡಾಕ್ಟರನ್ನೂ ನಾನು ಭಗವಂತನೆಂದು ಬಗೆದಿಲ್ಲ!

ನಿರ್ಮಲೆ—ತಾಜಾ ರಕ್ತವು ಅಂತಹ ಅಲಭ್ಯ ವಸ್ತುವೇನೂ ಅಲ್ಲ!

ಮುನ್ಷಿ—ಆಗಸದ ತಾರೆಗಳೂ ಅಲಭ್ಯವಲ್ಲ! ಬಾಯಿಮಾತಿಗೇನು ಕಷ್ಟ?

ನಿರ್ಮಲೆ—ನಾನು ನನ್ನ ರಕ್ತವನ್ನು ಕೊಡಲು ಸಿದ್ಧಳಿರುವೆನು. ಡಾಕ್ಟರರನ್ನು ಕರೆಯಿರಿ!

ಮುನ್ಷಿಯವರು ವಿಸ್ಮಿತರಾಗಿ ಕೇಳಿದರು—ನೀನೇ?

ನಿರ್ಮಲೆ—ಹೌದು, ನನ್ನ ರಕ್ತದಿಂದ ಕೆಲಸವಾಗಲಾರದೇ?

ಮುನ್ಷಿ—ನಿನ್ನ ರಕ್ತವನ್ನು ಕೊಡುವೆಯಾ? ಬೇಡ, ನಿನ್ನ ರಕ್ತದ ಅವಶ್ಯಕತೆಯಿಲ್ಲ. ಇದರಿಂದ ನಿನ್ನ ಪ್ರಾಣಭಯ ಉಂಟು.

ನಿರ್ಮಲೆ—ನನ್ನ ಪ್ರಾಣವು ಉಪಯೋಗವಾಗುವುದಾದರೂ ಇನ್ನೇಂದು?

ಮುನ್ಷಿಯವರು ಸಜಲ ನೇತ್ರಗಳಿಂದ ನುಡಿದರು—ಇಲ್ಲ, ನಿರ್ಮಲಾ! ಅದರ ಮೂಲ್ಯವು ಈಗ ನನ್ನ ದೃಷ್ಟಿಯಲ್ಲಿ ಬಹಳ ಹೆಚ್ಚಿದೆ. ಇದುವರೆಗೆ ಅದು ನನ್ನ ಭೋಗವಸ್ತುವಾಗಿತ್ತು; ಇಂದಿನಿಂದ ನನ್ನ ಭಕ್ತಿವಸ್ತುವಾಯಿತು! ನಾನು ನಿನಗೆ ಬಹಳ ಅನ್ಯಾಯ ಮಾಡಿದೆ; ನನ್ನನ್ನು ಕ್ಷಮಿಸು!

## ಹದಿಮೂರನೆಯ ಪರಿಚ್ಛೇದ

ಆಗಬೇಕಾದುದು ಆಗಿಹೋಯಿತು! ಯಾರಿಂದ ಏನೂ ಮಾಡಲಾಗಲಿಲ್ಲ. ಡಾಕ್ಟರ್‌ಸಾಹೇಬರು ನಿರ್ಮಲೆಯ ದೇಹದಿಂದ ರಕ್ತವನ್ನು ತೆಗೆಯಲು ಪ್ರಯತ್ನಿಸುತ್ತಿದ್ದಂತೆಯೇ ಮಾನಸರಾಮನು ತನ್ನ ಉಜ್ವಲ ಚರಿತ್ರೆಯ ಅಂತಿಮ ಪ್ರಭೆಯನ್ನು ಬೀರಿ, ಈ ಲೋಕವನ್ನು ಬಿಟ್ಟು ತೆರಳಿದನು! ಬಹುಶಃ ಇಷ್ಟು ಹೊತ್ತಿನ ವರೆಗೆ ಅವನ ಪ್ರಾಣವು ನಿರ್ಮಲೆಗೋಸ್ಕರ ಕಾದಿದ್ದಿತೋ ಏನೋ? ಅವಳನ್ನು ನಿಷ್ಕಳಂಕಳೆಂದು ಸಿದ್ಧಗೈದ ಹೊರತು ಅವನು ಹೇಗೆ ದೇಹತ್ಯಾಗ ಮಾಡುವನು? ಈಗ ಅವನ ಉದ್ದಿಶ್ಯ ಪೂರ್ತಿಯಾಯಿತು.

ಮುನ್ಷಿಯವರಿಗೆ ನಿರ್ಮಲೆಯು ನಿರ್ದೋಷಳೆಂದು ನಂಬಿಕೆಯುಂಟಾಯಿತು! ಆದರೆ ಯಾವಾಗ? ಎಲ್ಲವೂ ಮುಗಿದ ಮೇಲೆ! ಬಾಣವು ಕೈಬಿಟ್ಟು ಹೋದ ಬಳಿಕ!!

ಪುತ್ರ ಶೋಕದಿಂದ ಮುನ್ಷಿಯವರಿಗೆ ಜೀವನವು ಭಾರಸ್ವರೂಪ ವಾಯಿತು. ಅಂದಿನಿಂದ ಅವರ ಅಧರದಲ್ಲಿ ನಗೆಯು ಮೂಡಲಿಲ್ಲ. ಜೀವನವು ವ್ಯರ್ಥವೆಂದು ತೋರಿತು. ಕಛೇರಿಗೆ ಮಾತ್ರ ಹೋಗುತ್ತಿದ್ದರು. ಆದರೆ ಮೊಕದ್ದಮೆಗಳಲ್ಲಿ ಮನಸಿಲ್ಲ; ಹೃದಯದ ದುಃಖವನ್ನು ಮರೆಯುವುದಕ್ಕೋಸುಗ ಒಂದೆರಡು ಘಂಟೆ ಕಾಲ ಹಾಗೂ ಹೀಗೂ ಕೆಲಸ ಮಾಡಿ ಹಿಂತಿರುಗುತ್ತಿದ್ದರು. ಊಟ ಮಾಡಲು ಕುಳಿತರೆ ಏನೂ ಸೇರುತ್ತಿರಲಿಲ್ಲ. ನಿರ್ಮಲೆಯು ಎಷ್ಟೋ ರುಚಿಯಾದ ಅಡಿಗೆಯನ್ನು ಮಾಡುತ್ತಿದ್ದಳು; ಆದರೆ, ಮುನ್ಷಿಯವರಿಗೆ ಒಂದೆರಡು ತುತ್ತಿಗಿಂತ ಹೆಚ್ಚು ತಿನ್ನಲಾಗುತ್ತಿರಲಿಲ್ಲ. ಮಾನಸ ರಾಮನ ಕೊಠಡಿಯ ಕಡೆಗೆ ಹೋದೊಡನೆಯೇ ಅವರ ಹೃದಯ ಸುಟ್ಟು ಭಸ್ಮವಾಗುತ್ತಿತ್ತು. ಅವರ ಆಸೆಗಳ ದೀಪವು ಪ್ರಜ್ವಲಿಸುತ್ತಿದ್ದೆಡೆಯಲ್ಲಿ ಈಗ ಅಂಧಕಾರ ಕವಿದಿತ್ತು! ಇನ್ನೂ ಇಬ್ಬರು ಪುತ್ರರು ಅವರಿಗಿದ್ದರು. ಆದರೇನು? ಹಾಲು ಕೊಡುವ ಹಸುವೇ ಹೋದಬಳಿಕ ಕರುವಿನ ಭರವಸೆ ಏನು? ಹೂ ಬಿಟ್ಟು ಹಣ್ಣು ಕೊಡುತ್ತಿದ್ದ ವೃಕ್ಷವೇ ಉರುಳಿದ ನಂತರ ಸಣ್ಣ ಸಣ್ಣ ಸಸಿಗಳದೇನು ಆಸೆ? ಪ್ರಪಂಚದಲ್ಲಿ ಯುವಕರು, ವೃದ್ಧರು ಎಲ್ಲರೂ ಸಾಯುವರು. ಆದರೆ ಮಗನ ಮೃತ್ಯುವಿಗೆ ತಾನೇ ಕಾರಣನಾದೆನಲ್ಲಾ? ಎಂಬುದೇ ಅವರಿಗೆ ಅತ್ಯಂತ ದುಃಖವಾಗಿತ್ತು. ಈ ಮಾತು ನೆನಪಾದೊಡನೆಯೇ ಎದೆಯೊಡೆದಂತಾಗುತ್ತಿತ್ತು!

ನಿರ್ಮಲೆಗೆ ಪತಿಯಲ್ಲಿ ನಿಜವಾದ ಸಹಾನುಭೂತಿ ಇತ್ತು. ಸಾಧ್ಯವಾದಷ್ಟು ಅವರನ್ನು ಪ್ರಸನ್ನರಾಗಿರಿಸಲು ಪ್ರಯತ್ನಿಸುತ್ತಿದ್ದಳು. ಮತ್ತು ಮರೆತು ಸಹ ಹಿಂದಿನ ಮಾತುಗಳನ್ನು ಆಡುತ್ತಿರಲಿಲ್ಲ. ಮುನ್ಷಿಯವರು ಅವಳೊಡನೆ ಮಾನಸರಾಮನ ಯಾವ ವಿಷಯವನ್ನಾಗಲೀ ಮಾತನಾಡಲು ನಾಚುತ್ತಿದ್ದರು. ತಮ್ಮ ಮನಸಿನ ಭಾವಗಳೆಲ್ಲವನ್ನೂ ನಿರ್ಮಲೆಗೆ ಬಿಚ್ಚಿ ತಿಳಿಸಿಬಿಡಲೇ? ಎಂದು ಒಮ್ಮೊಮ್ಮೆ ಅವರಿಗೆನಿಸುತ್ತಿತ್ತು. ಆದರೆ, ಲಜ್ಜೆಯು ಅವರ ನಾಲಿಗೆಯನ್ನು ತಡೆದು ನಿಲ್ಲಿಸುತ್ತಿತ್ತು. ಸಾಮಾನ್ಯವಾಗಿ ಮನುಷ್ಯನಿಗೆ

ತನ್ನ ದುಃಖಗಳನ್ನು ಆಪ್ತರ ಸಂಗಡ ಹೇಳಿಕೊಳ್ಳುವುದರಿಂದ ಒಂದು ಬಗೆಯ ಸಮಾಧಾನ ಸಿಗುವುದು; ಮುನ್ಷಿಯವರ ಪಾಲಿಗೆ ಈ ಸಾಂತ್ವನೆಯೂ ಪ್ರಾಪ್ತಿ ಇಲ್ಲದಾಯಿತು. ದುಃಖವೆಂಬ ವಿಷವು ಒಳಗಿಂದೊಳಗೇ ಹರಡಿ, ದಿನದಿನಕ್ಕೂ ಅವರ ಶರೀರವನ್ನು ಸವೆಸುತ್ತ ಬಂತು!

ಕೆಲವು ದಿನಗಳಿಂದ ಮುನ್ಷಿಯವರಿಗೂ ಮಾನಸರಾಮಗೆ ಚಿಕಿತ್ಸೆ ನಡೆಸಿದ ಡಾಕ್ಟರಿಗೂ ಸ್ನೇಹ ಉಂಟಾಗಿತ್ತು. ಅವರು ಮುನ್ಷಿಯವರಿಗೆ ಆಗಾಗ ಸಮಾಧಾನ ಹೇಳುತ್ತಿದ್ದರು; ಮತ್ತು ತಮ್ಮ ಸಂಗಡ ತಿರುಗಾಡಲು ಕರೆದುಕೊಂಡು ಹೋಗುತ್ತಿದ್ದರು. ಅವರ ಪತ್ನಿಯೂ ಒಂದೆರಡು ಬಾರಿ ನಿರ್ಮಲೆಯನ್ನು ನೋಡಲು ಬಂದಿದ್ದರು. ನಿರ್ಮಲೆಯೂ ಕೆಲವು ಸಲ ಅವರ ಮನೆಗೆ ಹೋಗಿಬಂದಿದ್ದಳು. ಆದರೆ ಅವರ ಮನೆಯಿಂದ ಹಿಂತಿರುಗಿದಾಗಲೆಲ್ಲಾ ಅವಳ ಮನಸು ಕೆಲವು ದಿನಗಳವರೆಗೆ ಉದಾಸೀನವಾಗಿರುತ್ತಿತ್ತು. ಆ ದಂಪತಿಗಳ ಸುಖಮಯ ಜೀವನವನ್ನು ಕಂಡು ಅವಳಿಗೆ ತನ್ನ ಸ್ಥಿತಿಯ ಬಗ್ಗೆ ದುಃಖವುಂಟಾಗುತ್ತಿತ್ತು. ಡಾಕ್ಟರ್‌ಸಾಹೇಬರಿಗೆ ಕೇವಲ ೨೦೦ ರೂಪಾಯಿಗಳ ಸಂಬಳ ಸಿಗುತ್ತಿತ್ತು. ಅದರಲ್ಲೇ ದಂಪತಿಗಳಿಬ್ಬರೂ ಆನಂದದಿಂದ ಜೀವನವನ್ನು ನಡೆಸುತ್ತಿದ್ದರು. ಮನೆಯಲ್ಲಿ ಒಬ್ಬ ಅಡಿಗೆಯವಳು ಮಾತ್ರ ಇದ್ದಳು. ಮನೆಗೆಲಸದ ಮುಕ್ಕಾಲು ಭಾಗವನ್ನೆಲ್ಲಾ ಪತ್ನಿಯೇ ಮಾಡಬೇಕಾಗುತ್ತಿತ್ತು. ಅವಳ ಮೈಮೇಲೆ ಹೆಚ್ಚಿನ ಆಭರಣಗಳೂ ಇರಲಿಲ್ಲ; ಅಷ್ಟಾದರೂ ಧನವನ್ನು ತೃಣಕ್ಕೆ ಸಮಾನವಾಗಿ ಗಣಿಸುವ ಆ ಪ್ರೇಮವು ಅವರಿಬ್ಬರಲ್ಲಿತ್ತು. ಪತಿ–ಪತ್ನಿಯರು ಪರಸ್ಪರ ಒಬ್ಬರೊಬ್ಬರನ್ನು ನೋಡಿ ಆನಂದದಿಂದ ಹಿಗ್ಗುತ್ತಿದ್ದರು. ನಿರ್ಮಲೆಯ ಮನೆಯಲ್ಲಿ ಅದಕ್ಕಿಂತ ಹೆಚ್ಚಿಗೆ ಧನವಿತ್ತು, ಆಭರಣಗಳಿಂದ ಅವಳ ದೇಹವು ಜಗ್ಗುವಂತಿತ್ತು; ಮನೆಗೆಲಸ ಯಾವುದನ್ನೂ ಅವಳು ಮಾಡಬೇಕಾಗುತ್ತಿರಲಿಲ್ಲ; ಆದರೇನು? ನಿರ್ಮಲೆಯು ಸಂಪನ್ನಳಾದರೂ ದುಃಖಿ! ಸುಧೆಯು ವಿಪನ್ನಳಾದರೂ ಸುಖಿ! ಇವೆಲ್ಲ ಕಾರಣದಿಂದ ನಿರ್ಮಲೆಯು ಸುಧೆಯ ಮನೆಗೆ ಆಭರಣಗಳನ್ನು ಧರಿಸಿ ಹೋಗಲು ನಾಚುತ್ತಿದ್ದಳು.

ಒಂದು ದಿನ ನಿರ್ಮಲೆಯು ಸುಧೆಯ ಮನೆಗೆ ಬಂದಳು. ಅವಳು ಬಹಳ ಉದಾಸೀನಳಾಗಿರುವುದನ್ನು ಕಂಡು ಸುಧೆಯು ಕೇಳಿದಳು—ಇಂದೇಕೆ ಇಷ್ಟು ಉದಾಸೀನಳಾಗಿರುವೆ, ನಿರ್ಮಲಾ? ವಕೀಲಸಾಹೇಬರ ದೇಹಸ್ಥಿತಿ ಸರಿಯಾಗಿದೆಯಷ್ಟೇ?

ನಿರ್ಮಲಾ—ಏನು ಹೇಳಲಿ ಸುಧಾ? ಅವರ ಸ್ಥಿತಿಯು ದಿನದಿನಕ್ಕೂ ಹದಗೆಡುತ್ತಿದೆ. ಏನೂ ಹೇಳುವಂತಿಲ್ಲ! ದೈವೇಚ್ಛೆ ಹೇಗಿರುವುದೋ ಹೇಳುವುದೆಂತು?

ಸುಧಾ—ವಕೀಲಸಾಹೇಬರು ಹವಾ ಬದಲಾವಣೆಗಾಗಿ ಬೇರೆ ಎಲ್ಲಾದರೂ ಹೋಗಿರಬೇಕೆಂದು ಡಾಕ್ಟರ್‌ಸಾಹೇಬರು ಹೇಳುವರು. ಇಲ್ಲದಿದ್ದರೆ ಯಾವುದಾದರೂ ಭಯಂಕರ ರೋಗಕ್ಕಿಟ್ಟುಕೊಳ್ಳುವುದು. ಎಷ್ಟೋ ಬಾರಿ ಅವರೂ ವಕೀಲಸಾಹೇಬರಿಗೆ ಹೇಳಿರುವರು. ಆದರೆ, ಅವರು 'ನನಗೇನೂ ಖಾಯಿಲೆ ಇಲ್ಲ; ನನ್ನ ದೇಹಸ್ಥಿತಿ ಸರಿಯಾಗಿಯೇ ಇದೆ!' ಎಂದುಬಿಡುವರು. ಈ ದಿನ ನೀನೇ ಹೇಳ ನೋಡು.

ನಿರ್ಮಲಾ—ಡಾಕ್ಟರ್‌ಸಾಹೇಬರ ಮಾತನ್ನೇ ಕೇಳದಿರುವಾಗ ನನ್ನ ಮಾತನ್ನು ಕೇಳುವರೇ?

ಎನ್ನುತ್ತಿದ್ದಂತೆಯೇ ನಿರ್ಮಲೆಯ ನಯನಗಳು ನೀರಾಡತೊಡಗಿದವು. ಈಚೆಗೆ ಕೆಲವು ತಿಂಗಳಿಂದ ಅವಳ ಹೃದಯವನ್ನು ವ್ಯಾಕುಲಗೊಳಿಸುತ್ತಿದ್ದ ಸಂದೇಹವು ಇಂದು ಬಾಯಿಂದ ಹೊರಬಿತ್ತು. ಇದುವರೆಗೆ ಅವಳು ಈ ಸಂದೇಹವನ್ನು ಬಚ್ಚಿಟ್ಟಿದ್ದಳು. ಆದರೆ, ಇನ್ನು ಬಚ್ಚಿಡಲು ಸಾಧ್ಯವಾಗಲಿಲ್ಲ. ಸುಧೆಯೊಡನೆ ಹೇಳಿದಳು—ಸುಧಾ! ಲಕ್ಷಣಗಳೇನೂ ಒಳ್ಳೆಯದಾಗಿ ಕಂಡುಬರುತ್ತಿಲ್ಲ! ಭಗವಂತನೇನು ಮಾಡುವನೋ?

ಸುಧಾ—ಹವಾ ಬದಲಾವಣೆಗಾಗಿ ಬೇರೆಲ್ಲಾದರೂ ಹೋಗಿರಬೇಕೆಂದು ನೀನು ಈ ದಿನ ಅವರಿಗೆ ಬಲಾತ್ಕಾರದಿಂದ ಹೇಳು. ನಾಲ್ಕಾರು ತಿಂಗಳು ಮತ್ತೆಲ್ಲಾದರೂ ಇರುವುದರಿಂದ ಮನಸಿನ ಎಷ್ಟೋ ದುಃಖಗಳು ಮರೆಯುವವು, ಅಥವಾ ಬೇರೆ ಮನೆಗಾದರೂ ಹೋದರೆ ಅವರ ದುಃಖವು ಕಡಿಮೆಯಾಗುವುದು. ಅಲ್ಲದೆ ನೀನು ಈಗ ಬೇರೆ ಊರಿಗೆ ಹೋಗಿರಲೂ ಸಾಧ್ಯವಿಲ್ಲ! ಇದೆಷ್ಟನೆಯ ತಿಂಗಳು?

ನಿರ್ಮಲೆ—ಎಂಟನೆಯ ತಿಂಗಳು ನಡೆಯುತ್ತಿದೆ. ಈ ಯೋಚನೆಯಿಂದ ನನಗೆ ಮತ್ತಷ್ಟು ದುಃಖವುಂಟಾಗುತ್ತಿದೆ! ನಾನು ಇದಕ್ಕಾಗಿ ಭಗವಂತನನ್ನೆಂದೂ ಬೇಡಿಕೊಳ್ಳಲಿಲ್ಲ. ನಾನು ಬಹಳ ಅಭಾಗಿನಿ, ಸುಧಾ! ವಿವಾಹಕ್ಕೆ ಒಂದು ತಿಂಗಳ ಮುಂಚಿತ ತಂದೆಯವರು ತೀರಿಹೋದರು. ಅವರು

ಸ್ವರ್ಗಸ್ಥರಾದಂದಿನಿಂದಲೂ ನನಗೆ ಶನಿಕಾಟವೇ ಕಟ್ಟಿತು! ಮೊದಲು ಮದುವೆಗೆ ನಿಶ್ಚಯವಾಗಿದ್ದ ವರನ ಮನೆಯವರು ಮುಖತಿರುಗಿಸಿಕೊಂಡರು. ಪಾಪ, ಅಮ್ಮನು ವಿವಶಳಾಗಿ ಈ ಮನೆಗೆ ನನ್ನನ್ನು ವಿವಾಹಮಾಡಿಕೊಡಬೇಕಾಗಿ ಬಂತು!

ಇಷ್ಟರಲ್ಲೇ ನನ್ನ ತಂಗಿಯ ಮದುವೆಯೂ ಆಗಲಿದೆ. ಅವಳ ಜೀವನ ನಾವೆಯು ಯಾವ ಘಟ್ಟವನ್ನು ಮುಟ್ಟುವುದೋ ನೋಡಬೇಕು!

ಸುಧಾ—ಮೊದಲು ಗೊತ್ತಾಗಿದ್ದ ಮನೆಯುವರೇಕೆ ತಿರಸ್ಕರಿಸಿದರು?

ನಿರ್ಮಲೆ—ಅದೇನು ಕಾರಣವೋ ಅವರೇ ಬಲ್ಲರು! ತಂದೆಯವರು ತೀರಿಹೋದರು; ವರದಕ್ಷಿಣೆಯ ಗಂಟನ್ನಾರು ಕೊಡುವರು?-ಎಂದಿರಬಹುದು.

ಸುಧಾ—ಇದು ನಿಜವಾಗಿಯೂ ನೀಚತೆ! ಅವರಾವ ಊರಿನವರು?

ನಿರ್ಮಲೆ—ಲಕ್ನೋದವರು. ಹೆಸರು ನೆನಪಿಲ್ಲ. ಆದರೆ ಸೇಂದೀ ಇಲಾಖೆಯಲ್ಲಿ ಭಾರೀ ಉದ್ಯೋಗದಲ್ಲಿದ್ದರು!

ಸುಧೆಯು ಗಂಭೀರ ಭಾವದಿಂದ ಕೇಳಿದಳು—ಅವರ ಮಗನಿಗೇನು ಕೆಲಸವಿತ್ತು?

ನಿರ್ಮಲೆ—ಏನೂ ಇಲ್ಲ. ಇನ್ನೂ ಓದುತ್ತಿದ್ದರು. ಬಹಳ ಬುದ್ಧಿವಂತರು!

ಸುಧೆಯು ತಲೆ ತಗ್ಗಿಸಿ ಹೇಳಿದಳು—ಅವರು ತಂದೆಯುವರ ಸಂಗಡ ಏನೂ ಹೇಳಲಿಲ್ಲವೇ? ಅವರೂ ಪ್ರಾಪ್ತವಯಸ್ಕರಾಗಿದ್ದರು; ತನ್ನ ತಂದೆಗೆ ತಿಳಿಯಹೇಳಲಾಗಲಿಲ್ಲವೇ?

ನಿರ್ಮಲೆ—ಇದೆಲ್ಲಾ ನನಗೇನು ಗೊತ್ತು? ಸುಧಾ! ಹಣದ ಗಂಟೆಂದರೆ ಯಾರಿಗೆ ಪ್ರಿಯವಲ್ಲ? ಹುಡುಗನೇ ಮದುವೆ ಮಾಡಿಕೊಳ್ಳಲು ತಿರಸ್ಕರಿಸಿದನೆಂದು ನಮ್ಮ ಮನೆಯಿಂದ ಹೋಗಿದ್ದ ಪುರೋಹಿತರು ಹೇಳಿದರು. ಹುಡುಗನ ತಾಯಿ ನಿಜವಾಗಿಯೂ ದೇವಿ! ಅವಳು ಪತಿ-ಪುತ್ರರಿಬ್ಬರಿಗೂ ತಿಳಿಯಹೇಳಿದಳಂತೆ; ಆದರೆ ಅವಳದೇನೂ ನಡೆಯಲಿಲ್ಲ!

ಸುಧಾ—ನನಗಂತಹ ಹುಡುಗನು ಇದ್ದರೆ ಏನು ಮಾಡುತ್ತಿದ್ದೆ, ಗೊತ್ತೇ?

ನಿರ್ಮಲೆ—ನನ್ನ ಭಾಗ್ಯದಲ್ಲಿ ಬರೆದಿದ್ದಂತೆ ನಡೆಯಿತು! ಪಾಪ, ಇನ್ನು ಕೃಷ್ಣಳ ಹಣೆಯಲ್ಲೇನು ಬರೆದಿರುವುದೋ?

ಸಾಯಂಕಾಲವಾದ ನಂತರ ನಿರ್ಮಲೆ ಮನೆಗೆ ಹೋದಳು ಡಾಕ್ಟರ್ ಸಾಹೇಬರು ಹೊರಗಿನಿಂದ ಮನೆಗೆ ಬಂದಾಗ ಸುಧೆಯು ಅವರನ್ನು ಕೇಳಿದಳು—ನಾನೊಂದು ಪ್ರಶ್ನೆ ಕೇಳುವೆನು. ಉತ್ತರ ಕೊಡುವಿರಾ? ಒಂದೆಡೆಯಲ್ಲಿ ವಿವಾಹ ಗೊತ್ತುಮಾಡಿಕೊಂಡಿದ್ದು, ನಂತರ ಧನದಾಸೆಗಾಗಿ ಬೇರೆಡೆಯಲ್ಲಿ ಸಂಬಂಧ ಬೆಳೆಯಿಸುವವನಿಗೆ ನೀವೇನು ಹೇಳುವಿರಿ?

ಡಾಕ್ಟರ್ ಸಿಂಹರು ಪತ್ನಿಯ ಕಡೆಗೆ ಕುತೂಹಲದಿಂದ ನೋಡಿ ಹೇಳಿದರು—ಹಾಗೆ ಮಾಡಬಾರದು; ಅಷ್ಟೆ! ಮತ್ತೇನು ಹೇಳಲಿ?

ಸುಧಾ—ಇದು ಘೋರ ನೀಚತೆ ಮತ್ತು ಅಲ್ಪತನವೆಂದು ಏಕೆ ಹೇಳುವುದಿಲ್ಲ?

ಸಿಂಹ—ಅದೂ ಸರಿಯೆ, ಹಾಗೆಂದರೂ ನನ್ನದಾವ ಅಡ್ಡಿಯೂ ಇಲ್ಲ!

ಸುಧಾ—ಇದರಲ್ಲಿ ಯಾರ ಅಪರಾಧ ಹೆಚ್ಚಿನದು? ವರನದೇ ಅಥವಾ ವರನ ಪಿತನದೇ?

ಸುಧೆಯ ಈ ಪ್ರಶ್ನೆಗಳ ಆಶಯವೇನೆಂದು ಸಿಂಹರಿಗೆ ಇದುವರೆಗೂ ತಿಳಿಯಲಿಲ್ಲ. ವಿಸ್ಮಿತರಾಗಿ ಹೇಳಿದರು—ಹೇಗೆ ಹೇಳಲಾಗುವುದು? ಅದು ಸ್ಥಿತಿ ಇದ್ದಂತೆ! ವರನು ತಂದೆಯ ಆಧೀನದಲ್ಲಿದ್ದರೆ ತಂದೆಯದೇ ಅಪರಾಧವೆಂದು ತಿಳಿಯಬೇಕು!

ಸುಧಾ—ಅಧೀನನಾಗಿದ್ದ ಮಾತ್ರಕ್ಕೆ ಯುವಕನಾದವನಿಗೆ ತನ್ನ ಕರ್ತವ್ಯದ ಜ್ಞಾನವಿಲ್ಲವೇ? ತನಗೆ ಕೋಟು-ಸೂಟುಗಳು ಬೇಕಾಗಿದ್ದರೆ, ತಂದೆಯು ಬೇಡವೆಂದರೂ ಅತ್ತು ಕರೆದು ಬಲಾತ್ಕಾರದಿಂದಲಾದರೂ ಹೊಲಿಸಿಕೊಳ್ಳುವುದಿಲ್ಲವೇ? ಹೀಗಿರುವಲ್ಲಿ ಇಂತಹ ಮಹತ್ವದ ವಿಷಯದಲ್ಲಿ ತನ್ನ ನಿರ್ಧಾರವನ್ನು ತನ್ನ ತಂದೆಯ ಕಿವಿಗೆ ಹಾಕಲು ಹೆದರುವುದೇಕೆ? ವರ ಮತ್ತು ವರನ ತಂದೆ ಇಬ್ಬರೂ ಅಪರಾಧಿಗಳು; ಅದರಲ್ಲೂ ವರನು ಹೆಚ್ಚು ಅಪರಾಧಿ ಎಂದು ನನ್ನ ಅಭಿಪ್ರಾಯ! ವೃದ್ಧ ತಂದೆಯೇನೋ ಸಾಧ್ಯವಾದಷ್ಟು ಖರ್ಚನ್ನೂ ಕನ್ಯಾಪಕ್ಷದವರ ತಲೆಗೇ ಕಟ್ಟೋಣವೆಂದು ಯೋಚಿಸಬಹುದು. ಆದರೆ ಇಂತಹ ಸಮಯದಲ್ಲಿ ವರನು ನಿಜವಾಗಿಯೂ ಸ್ವಾರ್ಥಿಯಲ್ಲದಿದ್ದರೆ,

ತನ್ನ ಆತ್ಮಬಲದ ಪರಿಚಯವನ್ನು ಕೊಡುವುದು ಅವನ ಧರ್ಮ! ಹಾಗಲ್ಲ ದಿದ್ದರೆ ಅವನು ನಿಜವಾಗಿಯೂ ಲೋಭಿ ಹಾಗೂ ಹೇಡಿ ಎಂದು ನಾನು ಹೇಳುವೆನು! ದುರ್ಭಾಗ್ಯವಶಾತ್ ಇಂತಹ ಒಬ್ಬ ವ್ಯಕ್ತಿಯೇ ನನ್ನ ಪತಿಯಾ ಗಿರುವರು; ಅವರನ್ನು ಯಾವ ಶಬ್ದಗಳಿಂದ ತಿರಸ್ಕರಿಸಬೇಕೋ ನನಗೆ ತೋರ ದಂತಾಗಿದೆ!

ಡಾಕ್ಟರ್ ಸಿಂಹರವರು ಕಕ್ಕಾಬಿಕ್ಕಿಯಾಗಿ ಹೇಳಿದರು—ಅದು ...ಅದು ....ಅದು ಬೇರೆ ವಿಷಯ; ಹಣಕಾಸಿನ ಕಾರಣವಲ್ಲ; ಬೇರೆ ವಿಷಯವಾಗಿತ್ತು. ಕನ್ಯೆಯ ಪಿತನು ಒಳ್ಳೆಯ ಸಮಯಕ್ಕೆ ಸ್ವರ್ಗಸ್ಥರಾದರು. ಆ ಸ್ಥಿತಿಯಲ್ಲಿ ನಾವೇನು ಮಾಡಲಾಗುವುದು? ಅದೂ ಅಲ್ಲದೆ, ಕನ್ಯೆಯಲ್ಲಿ ಯಾವುದೋ ದೋಷವಿತ್ತೆಂದೂ ತಿಳಿಯಬಂತು. ಅದಿರಲಿ; ಈ ಕಥೆ ನಿನಗಾರು ಹೇಳಿದರು?

ಸುಧಾ—ಕನ್ಯೆಯು ಕುಂಟಿ, ಕುರುಡಿ, ಭ್ರಷ್ಟೆ ಅಥವಾ ನೀಚಳೆಂದು ಹೇಳಿಬಿಡಿ! ಅದನ್ನೇಕೆ ಬಾಕಿ ಇಟ್ಟಿರುವಿರಿ? ಭಲಾ, ಹೇಳಿ ನೋಡೋಣ? ಕನ್ಯೆಯಲ್ಲಿ ಯಾವ ದೋಷವಿತ್ತು?

ಸಿಂಹ—ಕನ್ಯೆಯನ್ನು ನಾನು ನೋಡಿರಲಿಲ್ಲ ಆದರೆ ಅವಳಲ್ಲಿ ದೋಷ ವಿದೆ ಎಂಬುದು ತಿಳಿದುಬಂದ ವಿಷಯ!

ಸುಧಾ—ಕನ್ಯೆಯ ತಂದೆಯು ಸ್ವರ್ಗಸ್ಥರಾದರು. ಇನ್ನು ಅಷ್ಟು ಹೆಚ್ಚಿನ ವರದಕ್ಷಿಣೆ ಸಿಗಲಾರದು ಎಂಬುದೇ ಎಲ್ಲಕ್ಕೂ ಮಿಗಿಲಾದ ದೋಷ ವಾಗಿತ್ತಲ್ಲವೇ? ಇದನ್ನು ಒಪ್ಪಿಕೊಳ್ಳಲು ಹಿಂಜರಿಯುವಿರೇಕೆ? ನಾನು ನಿಮ್ಮಗೇನೂ ಅನ್ನುವುದಿಲ್ಲ. ಅಥವಾ ಒಂದೆರಡು ಮಾತು ಅಂದರೂ ಈ ಕಿವಿ ಯಿಂದ ಕೇಳಿ ಆ ಕಿವಿಯಿಂದ ಬಿಟ್ಟುಬಿಡಿ! ಅದಕ್ಕೂ ಹೆಚ್ಚಾಗಿ ಅಂದೆನಾದರೆ ನಿಮ್ಮ ಬೆತ್ತವನ್ನು ಬೇಕಾದರೂ ಉಪಯೋಗಿಸಿ. ಆ ಕನ್ಯೆಯಲ್ಲಿ ದೋಷ ವಿತ್ತೆಂದು ಹೇಳುವುದಾದರೆ, ಲಕ್ಷ್ಮಿಯು ಸಹ ನಿರ್ದೋಷಿಯಲ್ಲವೆಂದು ನನ್ನ ಮತ! ಅವಳನ್ನು ಮದುವೆಯಾಗಲು ನಿಮ್ಮ ಭಾಗ್ಯದಲ್ಲಿ ಬರೆದಿರಲಿಲ್ಲ, ಅಷ್ಟೆ; ಇನ್ನೇನು ಹೇಳಲಿ? ನಿಮಗೆ ನಾನು ಗಂಟುಬೀಳಬೇಕಾಗಿತ್ತು.

ಸಿಂಹ—ಅವಳು ಹೀಗಿದ್ದಳು, ಹಾಗಿದ್ದಳೆಂದು ನಿನಗಾರು ಹೇಳಿದರು? ನೀನು ಇತರರ ಮಾತು ಕೇಳಿ ಹೇಗೆ ನಿಜವೆಂದು ತಿಳಿದುಕೊಂಡೆಯೋ, ಹಾಗೆಯೇ ನಾವೂ ತಿಳಿದುಕೊಂಡೆವು!

ಸುಧಾ—ಅವರಿವರ ಮಾತನ್ನು ಕೇಳಿ ನಾನು ಒಪ್ಪಲಿಲ್ಲ. ನನ್ನ ಕಣ್ಣಾರೆ ನೋಡಿದೆ. ಹೆಚ್ಚು ವರ್ಣಿಸಿ ಪ್ರಯೋಜನವೇನು ? ಅಂತಹ ಸುಂದರ ಸ್ತ್ರೀಯನ್ನು ನಾನೆಂದೂ ನೋಡಿರಲಿಲ್ಲ

ಡಾಕ್ಟರ್ ಸಿಂಹರು ಆತುರದಿಂದ ಕೇಳಿದರು—ಹಾಗಿದ್ದರೆ ಅವಳು ಇಲ್ಲೇ ಎಲ್ಲಾದರೂ ಇರುವಳೇ ? ನಿಜವಾಗಿಯೂ ಹೇಳು; ಅವಳನ್ನೆಲ್ಲಿ ನೋಡಿದೆ ? ನಮ್ಮ ಮನೆಗೆ ಬಂದಿದ್ದಳೇ ?

ಸುಧಾ—ಹೌದು, ನಮ್ಮ ಮನೆಗೆ ಬಂದಿದ್ದಳು. ಒಂದು ಬಾರಿಯಲ್ಲ; ಅನೇಕ ಬಾರಿ ಬಂದಿರುವಳು. ನಾನೂ ಅವಳ ಮನೆಗೆ ಎಷ್ಟೋ ಸಲ ಹೋಗಿರು ವೆನು. ಇಲ್ಲದ ದೋಷಗಳನ್ನು ಹುಡುಕಿ ಯಾವ ಕನ್ಯೆಯನ್ನು ಬೇಡವೆಂದು ತ್ಯಜಿಸಿದಿರೋ, ಅದೇ ಕನ್ಯೆಯೇ ವಕೀಲಸಾಹೇಬರ ಪತ್ನಿ !

ಸಿಂಹ—ನಿಜವಾಗಿಯೂ ?

ಸುಧಾ—ಸತ್ಯವಾಗಿಯೂ ! ಈಗಲೂ ನೀವೇ ಆ ಮಹಾಪುರುಷರೆಂದು ಅವಳಿಗೆ ತಿಳಿದರೆ, ಇನ್ನು ಮುಂದೆ ಈ ಮನೆಗೆ ಕಾಲಿಡಲಾರಳು ! ಅಂತಹ ಸುಶೀಲೆ, ಕಾರ್ಯನಿಪುಣೆ, ಚತುರೆ ಮತ್ತು ಪರಮ ಸುಂದರ ಸ್ತ್ರೀಯರು ಒಬ್ಬಿಬ್ಬರು ಸಹ ಸಿಗಲಾರರು ! ನೀವು ನನ್ನನ್ನೇ ಹೊಗಳುವಿರಿ. ನಾನು ಅವಳ ದಾಸಿಯಾಗಿರಲು ಸಹ ಯೋಗ್ಯವಾಗಿಲ್ಲ. ಭಗವಂತನು ಕೊಟ್ಟಂತೆ ಮನೆಯಲ್ಲಿ ಬೇಕಾದಷ್ಟಿದೆ; ಆದರೇನು ? ಯೋಗ್ಯವಯಸ್ಕ ಪತಿಯು ಸಿಗದ ಮೇಲೆ ಏನಿದ್ದ ರೇನು ? ಆ ವೃದ್ಧ ವಕೀಲರೊಡನೆ ಜೀವನ ನಡೆಸುತ್ತಿರುವ ಅವಳೇ ಧೈರ್ಯ ಶಾಲಿ ! ನಾನಾಗಿದ್ದರೆ ಎಂದೋ ವಿಷ ಕುಡಿದು ಪ್ರಾಣ ಬಿಡುತ್ತಿದ್ದೆ ! ಮನ ಸಿನ ವ್ಯಥೆಯು ಮತ್ತೊಬ್ಬರಲ್ಲಿ ಹೇಳಿಕೊಳ್ಳುವುದರಿಂದ ತುಸು ಕಡಿಮೆ ಯಾಗುವುದು. ನಗುವಳು, ಮಾತನಾಡುವಳು, ಒಡವೆ-ವಸ್ತ್ರ ಧರಿಸುವಳು; ಆದರೆ, ಅವಳ ರೋಮರೋಮವೂ ರೋದಿಸುತ್ತಿರುವುದು !

ಸಿಂಹ—ಹಾಗಿದ್ದರೆ ವಕೀಲಸಾಹೇಬರನ್ನು ಬಹಳ ದೂಷಿಸಬಹು ದಲ್ಲವೇ ?

ಸುಧಾ—ದೂಷಿಸುವಳೇಕೆ ? ಅವರು ಅವಳ ಪತಿಯಲ್ಲವೇ ? ಪ್ರಪಂಚ ದಲ್ಲಿ ಈಗ ವಕೀಲಸಾಹೇಬರೇ ಅವಳ ಸರ್ವಸ್ವ ! ವೃದ್ಧರಾಗಲಿ, ರೋಗಿ ಯಾಗಲಿ, ಅವರು ಅವಳ ಸ್ವಾಮಿಯಲ್ಲವೇ ? ಉತ್ತಮ ಕುಲದ ಸ್ತ್ರೀಯು

ಪತಿಯನ್ನೆಂದೂ ನಿಂದಿಸಲಾರಳು; ಇದೆಲ್ಲ ಕೇವಲ ನೀಚ ಹೆಂಗಸರ ಕೆಲಸ! ಪತಿಯ ಸ್ಥಿತಿಯನ್ನು ಕಂಡು ಅವಳು ಮನದಲ್ಲೇ ಕೊರಗುವಳು. ಆದರೆ, ಬಾಯಿಂದೇನೂ ಹೇಳುವುದಿಲ್ಲ.

ಸಿಂಹ—ವಕೀಲಸಾಹೇಬರು ಈ ವಯಸ್ಸಿನಲ್ಲೇಕೆ ಮದುವೆ ಮಾಡಿಕೊಂಡರು?

ಸುಧಾ—ಇಂತಹ ಮನುಷ್ಯರಿಲ್ಲದಿದ್ದರೆ, ಬಡ ಕುವರಿಯರ ನಾವೆಯನ್ನು ಪಾರಗಾಣಿಸುವವರಾರು? ನೀವು ಮತ್ತು ನಿಮ್ಮ ಸಂಗಡಿಗರು ಭಾರಿಯ ಗಂಟನ್ನು ಕೊಟ್ಟು ಹೊರತು ಮಾತನ್ನೇ ಆಡುವುದಿಲ್ಲ! ಅಂದಬಳಿಕ ಅವಳಾರ ಮನೆಗೆ ಸೇರಬೇಕು? ನೀವು ನಿಜವಾಗಿಯೂ ಬಹಳ ಅನ್ಯಾಯ ಮಾಡಿದಿರಿ! ಇದಕ್ಕಾಗಿ ನೀವು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಭಗವಂತನು ಅವಳ ಸೌಮಾಂಗಲ್ಯವನ್ನು ಕಾಪಾಡಲಿ! ಆದರೆ, ವಕೀಲಸಾಹೇಬರ ಗತಿ ಏನಾದರೂ ಆದರೆ ಅವಳ ಜೀವನವು ಸರ್ವನಾಶವಾಗುವುದು! ಈ ದಿನ ಅವಳು ಬಹಳ ಅಳುತ್ತಿದ್ದಳು. ನೀವು ನಿಜವಾಗಿಯೂ ನಿರ್ದಯಿಗಳು! ನಾನು ನನ್ನ ಸೋಹನನಿಗೆ ಯಾವುದಾದರೂ ಬಡ ಹುಡುಗಿಯನ್ನು ತಂದು ಮದುವೆ ಮಾಡುವೆನು.

ಡಾಕ್ಟರ್ ಸಿಂಹರಿಗೆ ಇದರ ಹಿಂದಿನ ವಾಕ್ಯ ಕೇಳಿಸಲಿಲ್ಲ. ಅವರು ಘೋರ ಚಿಂತೆಯಲ್ಲಿ ಮುಳುಗಿದರು. ವಕೀಲಸಾಹೇಬರ ಗತಿ ಏನಾದರೂ ಆದರೆ ಎಂಬ ಪ್ರಶ್ನೆಯು ಆಗಾಗ ಅವರ ಮನಸಿನಲ್ಲಿದ್ದು ಅವರನ್ನು ವ್ಯಾಕುಲಗೊಳಿಸುತ್ತಿತ್ತು. ಇಂದು ಅವರಿಗೆ ತಮ್ಮ ಸ್ವಾರ್ಥದ ಭಯಂಕರ ಸ್ವರೂಪವು ಗೋಚರವಾಯಿತು. ವಾಸ್ತವವಾಗಿಯೂ ಇದು ಅವರ ಅಪರಾಧವೇ ಆಗಿತ್ತು. ಬೇರೆ ಎಲ್ಲೂ ವಿವಾಹ ಮಾಡಿಕೊಳ್ಳುವುದಿಲ್ಲವೆಂದು ನಿರ್ಧರವಾಗಿ ತಂದೆಗೆ ತಿಳಿಸಿದ್ದರೆ, ಅವರೇನು ಬಲಾತ್ಕಾರದಿಂದ ಮದುವೆ ಮಾಡುತ್ತಿದ್ದರೇ?

ಸುಧಾ—ನಿಮಗಿಷ್ಟವಿದ್ದರೆ, ನಾಳೆ ನಿರ್ಮಲೆಯನ್ನು ನಿಮಗೆ ಭೇಟಿ ಮಾಡಿಸುವೆನು. ಅವಳೂ ನಿಮ್ಮ ಸ್ವರೂಪವನ್ನು ಸ್ವಲ್ಪ ನೋಡಲಿ! ನಿಮ್ಮ ಸಂಗಡ ಏನೂ ಮಾತನಾಡಲಾರಳು; ಆದರೆ ಕೇವಲ ಒಂದೇ ದೃಷ್ಟಿಯಲ್ಲಿ ನಿಮ್ಮನ್ನು ತಿರಸ್ಕರಿಸುವಳು. ಅವಳ ಆ ತಿರಸ್ಕಾರವನ್ನು ನೀವೆಂದೂ

ಮರೆಯಲಾರಿರಿ ! ಹೇಳಿ, ನಾಳೆ ಭೇಟಿ ಮಾಡಿಸಲೇ ? ನಿಮ್ಮ ಸಂಕ್ಷಿಪ್ತ ಪರಿ ಚಯವನ್ನೂ ಮಾಡಿಸುವೆನು !

ಸಿಂಹ—ಬೇಡ, ಸುಧಾ ! ಕೈಮುಗಿದು ಕೇಳಿಕೊಳ್ಳುವೆನು; ಆ ಕೆಲಸ ಮಾತ್ರ ಮಾಡಬೇಡ ! ಹಾಗೇನಾದರೂ ಮಾಡಿದೆಯಾದರೆ ನಾನು ನಿಜ ವಾಗಿಯೂ ಮನೆ ಬಿಟ್ಟು ಓಡಿಹೋಗಬೇಕಾಗುವುದು !

ಸುಧಾ—ಮುಳ್ಳು ಚುಚ್ಚಿಕೊಂಡು ಅದರ ಫಲವನ್ನು ಅನುಭವಿಸುವು ದಿಲ್ಲವೆಂದರೆ ಹೇಗೆ ? ಅವಳ ಗೋಳನ್ನಾದರೂ ಸ್ವಲ್ಪ ನೋಡಿ ! ನಮ್ಮ ತಂದೆಯವರು ನಿಮ್ಮ ಮದುವೆಯಲ್ಲಿ ಐದು ಸಾವಿರ ರೂಪಾಯಿ ಕೊಟ್ಟ ರಲ್ಲವೇ ? ಇನ್ನು ತಮ್ಮನ ಮದುವೆಯಲ್ಲಿ ಬೇರೆ ಐದಾರು ಸಾವಿರ ಸಿಗುವುದು. ನಂತರ ಪ್ರಪಂಚದಲ್ಲಿ ನಿಮ್ಮಷ್ಟು ಧನವಂತರೇ ಯಾರೂ ಇರಲಾರರು ! ಹನ್ನೊಂದು ಸಾವಿರವೆಂದರೆ ಎಷ್ಟಾಯಿತು ? ಅಬ್ಬಬ್ಬ ! ಹನ್ನೊಂದು ಸಾವಿರ ! ಎಣಿಸುವುದಕ್ಕೇ ತಿಂಗಳುಗಟ್ಟಲೆ ಬೇಕು. ಮಕ್ಕಳು ಮನಬಂದಂತೆ ಖರ್ಚು ಮಾಡಿದರೂ ಇನ್ನೂ ನಾಲ್ಕಾರು ಪೀಳಿಗೆಗೆ ಸಾಕಾಗುವುದು. ಎಲ್ಲಾದರೂ ಮಾತುಕತೆಯಾಗಿದೆಯೆ ?

ಈ ಪರಿಹಾಸ್ಯವನ್ನು ಕೇಳಿ ಡಾಕ್ಟರ್‌ಸಾಹೇಬರಿಗೆ ತಲೆ ಎತ್ತಲಾರದಷ್ಟು ಅಪಮಾನವಾಯಿತು. ಅವರ ವಾಕ್ಚಾತುರ್ಯವೆಲ್ಲ ಎತ್ತಲೋ ಹಾರಿ ಹೋಯಿತು. ಮುಖ ಪೆಚ್ಚಾಯಿತು. ಆ ಹೊತ್ತಿಗೆ ಸರಿಯಾಗಿ ಡಾಕ್ಟರ್ ಸಾಹೇಬರನ್ನು ಹೊರಗಿನಿಂದ ಯಾರೋ ಕೂಗಿದರು. ಬಡಜೀವ ಬದುಕಿ ತೆಂದುಕೊಂಡು ಅವರು ಹೊರಗೆ ಹೋದರು. ಸ್ತ್ರೀಯರು ಇಷ್ಟು ಪರಿಹಾಸ್ಯ ಕುಶಲರೆಂಬುದರ ಅರಿವು ಈ ದಿನ ಅವರಿಗಾಯಿತು.

ರಾತ್ರಿ ಮಲಗಿಕೊಳ್ಳುವಾಗ ಡಾಕ್ಟರ್‌ಸಾಹೇಬರು ಸುಧೆಯನ್ನು ಕೇಳಿ ದರು—ನಿರ್ಮಲೆಯ ತಂಗಿಯೊಬ್ಬಳಿರುವಳಲ್ಲವೇ ?

ಸುಧಾ—ಹೌದು; ಈ ದಿನ ಅವಳ ಮಾತನ್ನೇ ಆಡುತ್ತಿದ್ದಳು. ಈಗಿ ನಿಂದ ಅವಳ ಯೋಚನೆಯನ್ನೇ ಮಾಡುತ್ತಿರುವಳು. ತನ್ನ ಅದೃಷ್ಟವಂತೂ ಹೀಗಾಯಿತು. ಇನ್ನವಳ ಅದೃಷ್ಟದಲ್ಲೇನು ಬರೆದಿದೆಯೋ ? ಎಂದು ಚಿಂತಿ ಸುವಳು. ತಾಯಿಯ ಬಳಿ ಹಣಕಾಸೇನೂ ಉಳಿದಿಲ್ಲ. ಆದ್ದರಿಂದ ವಿವಶಳಾಗಿ ಅವಳನ್ನೂ ಹೀಗೆಯೇ ಒಬ್ಬ ವೃದ್ಧನಿಗೆ ಕಟ್ಟಬೇಕಾಗುವುದು !

ಸಿಂಹ—ನಿರ್ಮಲೆಯು ಈಗ ತನ್ನ ಮಾತೆಗೆ ಸಹಾಯ ಮಾಡಬಹು ದಲ್ಲವೇ ?

ಸುಧೆಯು ಕ್ಷೀಣ ಸ್ವರದಿಂದ ನುಡಿದಳು—ನೀವೂ ಒಮ್ಮೊಮ್ಮೆ ಆಧಾರ ವಿಲ್ಲದ ಮಾತನ್ನಾಡುವಿರಿ ? ಬಹಳವೆಂದರೆ ನಿರ್ಮಲೆಯು ಇನ್ನೂರು ಮುನ್ನೂರು ರೂಪಾಯಿಗಳನ್ನು ಕೊಡಬಹುದು. ಮತ್ತೇನು ಮಾಡಬಲ್ಲಳು ? ವಕೀಲಸಾಹೇಬರ ಸ್ಥಿತಿ ಈಗಲೇ ಹೀಗಾಗುತ್ತಿದೆ; ಇವಳಿನ್ನೂ ಅನೇಕ ವರ್ಷ ಗಳನ್ನು ಕಳೆಯಬೇಕು ! ಅಲ್ಲದೆ, ಅವಳ ಮನೆಯ ಒಳಗುಟ್ಟನ್ನಾರು ಬಲ್ಲರು? ಈಗ ಆರು ತಿಂಗಳಿಂದಲೂ ವಕೀಲಸಾಹೇಬರು ಮನೆಯಲ್ಲೇ ಕುಳಿತಿರುವರು. ರೂಪಾಯಿಗಳೇನು ಆಕಾಶದಿಂದ ಉದುರುವವೇ ? ಹತ್ತಿಪ್ಪತ್ತು ಸಾವಿರ ರೂಪಾಯಿಗಳಿದ್ದರೂ ಬ್ಯಾಂಕಿನಲ್ಲಿರುವುದು; ನಿರ್ಮಲೆಯ ಬಳಿ ಇರುವುದೇ ? ನಮ್ಮ ಮನೆಯ ಖರ್ಚು ತಿಂಗಳಿಗೆ ೨೦೦ ರೂಪಾಯಿಗಳಾದರೆ, ಅವರದು ೪೦೦ ರೂಪಾಯಿಗಳಾದರೂ ಆಗದಿರುವುದೇ ?

ಸುಧೆಗೆ ನಿದ್ದೆ ಬಂದಿತು; ಆದರೆ ಡಾಕ್ಟರ್‌ಸಾಹೇಬರು ಬಹಳ ಹೊತ್ತಿನ ವರೆಗೆ ಅತ್ತಿಂದಿತ್ತ, ಇತ್ತಿಂದತ್ತ ಹೊರಳಾಡುತ್ತಿದ್ದರು. ನಂತರ ಏನೋ ಯೋಚಿಸಿ ಎದ್ದರು. ಮೇಜಿನ ಮುಂದೆ ಕುಳಿತು ಒಂದು ಪತ್ರ ಬರೆಯ ತೊಡಗಿದರು.

## ಹದಿನಾಲ್ಕನೆಯ ಪರಿಚ್ಛೇದ

ಮೂರು ಘಟನೆಗಳು ಒಟ್ಟಿಗೆ ನಡೆದವು—ನಿರ್ಮಲೆಗೆ ಕನ್ಯಾಜನನ ವಾಯಿತು. ಕೃಷ್ಣಳ ಮದುವೆ ನಿಶ್ಚಿತವಾಯಿತು; ಮತ್ತು ಮುನ್ಷಿ ತೋತಾ ರಾಮರ ಮನೆ ಹರಾಜಾಯಿತು ! ಕನ್ಯಾಜನನವು ನಿರ್ಮಲೆಯ ದೃಷ್ಟಿಯಲ್ಲಿ ಅವಳ ಜೀವನದ ಮಹತ್ವವಾದ ಘಟನೆಯೆಂದು ತೋರಿದರೂ, ಸಾಮಾನ್ಯ ವಿಷಯವಾಗಿತ್ತು. ಆದರೆ, ಇನ್ನೆರಡು ಪ್ರಶ್ನೆಗಳು ಅಸಾಧಾರಣವಾಗಿದ್ದವು. ಕೃಷ್ಣಳ ಮದುವೆಯು ಇಂತಹ ಸಂಪನ್ನ ಮನೆತನದಲ್ಲಿ ಹೇಗೆ ನಿಶ್ಚಿತ ವಾಯಿತು ? ವರದಕ್ಷಿಣೆ ಕೊಡಲು ಒಂದು ಕಾಸೂ ಅವಳ ಮಾತೆಯ ಬಳಿ ಇರಲಿಲ್ಲ. ಇತ್ತ ಭಾಲಚಂದ್ರಸಿಂಹರು ಪೆನ್‌ಷನ್ ಪಡೆದು ಮನೆಯಲ್ಲಿ

ಕುಳಿತಿದ್ದರು. ಮಹಾ ಲೋಭಿ ಎಂದು ಪ್ರಸಿದ್ಧಿ ಪಡೆದ ಅವರು ತಮ್ಮ ಪುತ್ರನಿಗೆ ಒಂದು ದರಿದ್ರ ಮನೆತನದ ಹೆಣ್ಣನ್ನು ತಂದುಕೊಳ್ಳಲು ಹೇಗೆ ಒಪ್ಪಿದರು ? ಈ ವಿಷಯವಂತೂ ನಂಬುವಂತೆಯೇ ಇರಲಿಲ್ಲ. ಎಲ್ಲಕ್ಕೂ ಹೆಚ್ಚಿನ ಆಶ್ಚರ್ಯದ ವಿಷಯವೆಂದರೆ ಮುನ್ಷಿಯವರ ಮನೆ ಹರಾಜಾದದ್ದು ! ಮುನ್ಷಿಯವರು ಲಕ್ಷಾಧಿಪತಿ ಅಲ್ಲದಿದ್ದರೂ ಧನವಂತರೆಂದು ಗಣಿಸಲ್ಪಡುತ್ತಿದ್ದರು. ಅವರ ಮನೆ ಹೇಗೆ ಹರಾಜಾಯಿತು ? ಮುನ್ಷಿಯವರು ಒಮ್ಮೆ ಒಬ್ಬ ಸಾಹುಕಾರನ ಬಳಿ ಕೆಲವು ರೂಪಾಯಿಗಳನ್ನು ಸಾಲ ತೆಗೆದುಕೊಂಡು ಒಂದು ಗ್ರಾಮವನ್ನು ಅಡಮಾನವಿಟ್ಟಿದ್ದರು. ಆರು ತಿಂಗಳು ಅಥವಾ ಒಂದು ವರ್ಷದಲ್ಲಿ ಆ ಸಾಲ ತೀರಿಸಿಬಿಡಬಹುದೆಂದು ಅವರು ನಂಬಿದ್ದರು. ಮತ್ತು ನಾಲ್ಕೈದು ವರ್ಷಗಳಲ್ಲಿ ಗ್ರಾಮವನ್ನೂ ಬಿಡಿಸಿಕೊಳ್ಳಬಹುದೆಂದು ಆಶಿಸಿದ್ದರು. ಮುನ್ಷಿಯವರು ಯೋಚಿಸಿದಂತೆ ಯಾವ ಕೆಲಸವೂ ನೆರವೇರಲಿಲ್ಲ; ಮುನ್ಷಿಯವರು ಸಾಲ ತೀರಿಸಲಾಗಲಿಲ್ಲ. ಮನಸಿಗೆ ಎಷ್ಟು ಸಮಾಧಾನ ತಂದುಕೊಂಡರೂ ಕಛೇರಿಗೆ ಹೋಗಲಾಗಲಿಲ್ಲ. ಪುತ್ರಶೋಕದಿಂದ ಅವರಿಗೆ ಯಾವ ಕೆಲಸ ಮಾಡಲೂ ಶಕ್ತಿ ಇಲ್ಲದಾಗಿತ್ತು. ಪುತ್ರನ ಮೃತ್ಯುವಿಗೆ ತಾನೇ ಕಾರಣನಾಗಿ, ಶಾಂತಚಿತ್ತದಿಂದಿರುವಂತಹ ಹೃದಯಶೂನ್ಯ ಪಿತನು ಯಾವನಿರುವನು ?

ಮುನ್ಷಿಯವರು ಸಾಹುಕಾರರ ಹಣದ ಬಡ್ಡಿಯನ್ನು ಕೊಡಲಿಲ್ಲ; ಮತ್ತು ಅನೇಕ ಸಲ ಹೇಳಿಕಳುಹಿಸಿದರೂ ಹೋಗಲಿಲ್ಲ. ಅಲ್ಲದೆ 'ನೀವು ಹೇಳಿಕಳುಹಿಸಿದಾಗಲೆಲ್ಲ ಬರಲು ನಾವೇನು ನಿಮ್ಮ ಗುಲಾಮರಲ್ಲ' ಎಂದು ಒಮ್ಮೆ ಹೇಳಿಬಿಟ್ಟಿದ್ದರು. ಈ ಮಾತಿಗಾಗಿ ಸಾಹುಕಾರರಿಗೆ ಕೋಪ ಬಂತು. ಅವರು ದಾವಾ ಹಾಕಿದರು. ಮುನ್ಷಿಯವರು ಕೋರ್ಟಿಗೆ ಸಹ ಹೋಗಲಿಲ್ಲ. ಡಿಕ್ರಿಯಾಗಿ ಹೋಯಿತು. ಮುನ್ಷಿಯವರ ಬಳಿ ಸಾಲ ತೀರಿಸುವಷ್ಟು ಹಣವೂ ಇರಲಿಲ್ಲ. ಅಲ್ಲದೆ, ಸಂಪಾದಿಸುವಷ್ಟು ಚೈತನ್ಯವೂ ಇರಲಿಲ್ಲ. ಕಡೆಗೆ ಮನೆಯನ್ನು ಹರಾಜು ಹಾಕಲಾಯಿತು. ನಿರ್ಮಲೆಯು ಸೂತಿಕಾಗೃಹದಲ್ಲಿದ್ದಳು. ಈ ಸುದ್ದಿಯನ್ನು ಕೇಳಿದೊಡನೆಯೇ ಅವಳಿಗೆ ಬಹಳ ವ್ಯಸನವಾಯಿತು. ಜೀವನದಲ್ಲಿ ಅವಳಿಗೆ ಮತ್ತಾವ ಸುಖವಿಲ್ಲದಿದ್ದರೂ ಧನಾಭಾವದ ಚಿಂತೆ ಇದುವರೆಗೆ ಇರಲಿಲ್ಲ. ಧನವು ಮಾನವ ಜೀವನದಲ್ಲಿ ಸರ್ವಪ್ರಧಾನ ವಸ್ತು

ಅಲ್ಲದಿದ್ದರೂ ನಿಕಟ ಸಂಬಂಧದ ವಸ್ತುವಾಗಿದೆ. ಇತರ ಅಭಾವಗಳ ಸಂಗಡ ಈ ಚಿಂತೆಯೂ ಈಗ ಅವಳಿಗುಂಟಾಯಿತು. ತನ್ನ ಒಡವೆಗಳನ್ನು ಮಾರಿ ಮನೆಯನ್ನುಳಿಸಿಕೊಳ್ಳಿರೆಂದು ಮುನ್ಷಿಯವರಿಗೆ ದಾಸಿಯ ಮೂಲಕ ಹೇಳಿ ಕಳುಹಿದಳು. ಆದರೆ ಅವರು ಈ ಪ್ರಸ್ತಾಪವನ್ನು ಒಪ್ಪಲಿಲ್ಲ.

ಅಂದಿನಿಂದ ಮುನ್ಷಿಯವರು ಮತ್ತಷ್ಟು ಚಿಂತಾಗ್ರಸ್ತರಾದರು. ಯಾವ ಧನದ ಸುಖವನ್ನು ಭೋಗಿಸಲು ವಿವಾಹ ಮಾಡಿಕೊಂಡರೋ, ಆ ಧನವು ಈಗ ಅತೀತದ ಸ್ಮೃತಿಮಾತ್ರವಾಯಿತು! ನಿರ್ಮಲೆಗೆ ಮುಖ ತೋರಿಸಲು ಸಹ ಅವರಿಗೆ ನಾಚಿಕೆ ಎನಿಸುತ್ತಿತ್ತು. ನಿರ್ಮಲೆಯ ಸಂಗಡ ತಾವು ಮಾಡಿದ ಅನ್ಯಾಯದ ಅರಿವು ಈಗ ಅವರಿಗಾಯಿತು. ಮತ್ತು ಕನ್ಯಾಜನನವು ಅವರ ಮನಸಿಗೆ ಮತ್ತಷ್ಟು ಯೋಚನೆಯನ್ನುಂಟುಮಾಡಿತು!

ಹನ್ನೊಂದನೆಯ ದಿನ ನಿರ್ಮಲೆಯು ಸೂತಿಕಾಗೃಹದಿಂದ ಹೊರಟಳು. ನವಜಾತ ಶಿಶುವನ್ನು ಉಡಿಯಲ್ಲೆತ್ತಿಕೊಂಡು ಪತಿಯ ಬಳಿ ಹೋದಳು. ಇಂತಹ ಅಭಾವದಲ್ಲೂ ಅವಳು ಯಾವ ಚಿಂತೆಯೂ ಇಲ್ಲದವಳಂತೆ ಪ್ರಸನ್ನಳಾಗಿದ್ದಳು. ಬಾಲಿಕೆಯನ್ನು ಹೃದಯಕ್ಕಪ್ಪಿಕೊಂಡು ತನ್ನ ಸಕಲ ಚಿಂತೆಗಳನ್ನೂ ಮರೆಯುತ್ತಿದ್ದಳು. ಶಿಶುವಿನ ವಿಕಸಿತ ಮತ್ತು ಹರ್ಷ ಪ್ರದೀಪ್ತ ನೇತ್ರಗಳನ್ನು ನೋಡಿ ಅವಳ ಹೃದಯ ಪ್ರಫುಲ್ಲಿತವಾಗುತ್ತಿತ್ತು. ಮಾತೃತ್ವದ ಈ ಉದ್ಗಾರದಲ್ಲಿ ಅವಳ ಸಮಸ್ತ ಕ್ಲೇಶಗಳೂ ವಿಲೀನವಾಗಿದ್ದವು! ಶಿಶುವನ್ನು ಪತಿಯ ಉಡಿಯಲ್ಲಿಟ್ಟು ಸಂತೋಷಪಡಬೇಕೆಂದು ಅವಳು ಆಶಿಸಿದಳು. ಆದರೆ, ಮುನ್ಷಿಯವರು ಮಗುವನ್ನು ಉಡಿಯಲ್ಲೆತ್ತಿಕೊಳ್ಳಲಿಲ್ಲ. ಒಮ್ಮೆ ಅದರ ಕಡೆಗೆ ಕರುಣ ನೇತ್ರಗಳಿಂದ ನೋಡಿ ತಲೆ ತಗ್ಗಿಸಿಕೊಂಡರು. ಮಗು ಎಲ್ಲಾ ರೀತಿಯಿಂದಲೂ ಮಾನಸರಾಮನನ್ನೇ ಹೋಲುತ್ತಿತ್ತು.

ನಿರ್ಮಲೆಯು ಮುನ್ಷಿಯವರ ಮನೋಭಾವವನ್ನು ಅರಿಯಲಿಲ್ಲ. ಶತಗುಣ ಸ್ನೇಹದಿಂದ ಅವಳು ಮಗುವನ್ನು ಎದೆಗಪ್ಪಿಕೊಂಡಳು. 'ಈ ಮಗು ನಿಮ್ಮ ಮನಸಿಗೆ ಭಾರವಾಗಿ ತೋರಿತೇ? ಹಾಗಿದ್ದರೆ ನಿಮ್ಮ ನೆರಳನ್ನು ಸಹ ಅದರ ಮೇಲೆ ಬೀಳಗೊಡಲಾರೆ! ಇಷ್ಟು ತಪಸ್ಯೆಯ ನಂತರ ನಾನು ಪಡೆದ ಈ ರತ್ನವನ್ನು ನಿರಾದರಿಸಲು ನಿಮಗೆ ಹೇಗೆ ಮನಸುಂಟಾಯಿತು?' ಎನ್ನುವಳೋ ಎಂಬಂತೆ ತೋರಿತು. ಆ ಕ್ಷಣವೇ ಅವಳು ಮಗುವನ್ನು ಉಡಿಯಲ್ಲಿ

ಎತ್ತಿಕೊಂಡು ತನ್ನ ಕೊಠಡಿಗೆ ಹಿಂದಿರುಗಿದಳು. ಮತ್ತು ಬಹಳ ಹೊತ್ತಿನ ವರೆಗೆ ಅಳುತ್ತಿದ್ದಳು. ಪತಿಯ ಉದಾಸೀನತೆಯನ್ನು ಅರ್ಥ ಮಾಡಿಕೊಳ್ಳಲು ಅವಳು ಯತ್ನಿಸಲಿಲ್ಲ. ಇಲ್ಲದಿದ್ದರೆ ಆವಳು ಅವರನ್ನು ಇಷ್ಟು ಕಠೋರರೆಂದು ಭಾವಿಸುತ್ತಿರಲಿಲ್ಲ!

ಮುನ್ಷಿಯವರಿಗೆ ಒಂದು ಕ್ಷಣದಲ್ಲೇ ತಮ್ಮ ತಪ್ಪು ತಿಳಿಯಿತು. ಮಾತೆಯ ಹೃದಯವು ಪ್ರೀತಿಯಲ್ಲಿ ಅನುರಕ್ತವಾಗುವುದು. ಅವಳಿಗೆ ಭವಿಷ್ಯದ ಚಿಂತೆ ಮತ್ತು ಬಾಧೆಗಳ ಭಯಭೀತಿ ಸಹ ಇರುವುದಿಲ್ಲ. ಕಷ್ಟ ಚಿಂತೆಗಳನ್ನು ಸೋಲಿಸುವಂತಹ ಒಂದು ಅಲೌಕಿಕ ಶಕ್ತಿಯ ಅನುಭವವು ಅವಳ ಅಂತಃಕರಣದಲ್ಲಾಗುವುದು! ಮುನ್ಷಿಯವರು ನಿರ್ಮಲೆಯ ಕೊಠಡಿಗೆ ಓಡಿಹೋದರು; ಮತ್ತು ಮಗುವನ್ನು ಉಡಿಯಲ್ಲೆತ್ತಿಕೊಂಡು ಹೇಳಿದರು—ಮಾನಸರಾಮನೂ ಹೀಗೆಯೇ ಇದ್ದನು; ತದ್ವತ್ ಹೀಗೆಯೇ! ನಿನಗೆ ನೆನಪಿದೆಯೇ?

ನಿರ್ಮಲೆ—ಅಕ್ಕನವರೂ ಹೀಗೆಯೇ ಹೇಳುವರು!

ಮುನ್ಷಿ—ಅದೇ ದೊಡ್ಡ ದೊಡ್ಡ ಕಣ್ಣುಗಳು, ಅದೇ ಕೆಂಪಾದ ತುಟಿಗಳು! ಭಗವಂತನು ನನಗೆ ನನ್ನ ಮಾನಸರಾಮನನ್ನು ಈ ರೂಪದಲ್ಲಿ ಕೊಟ್ಟನು. ಅದೇ ಹಣೆ, ಅದೇ ಮುಖ, ಅದೇ ಕೈಕಾಲುಗಳು. ಪರಮಾತ್ಮ, ನಿನ್ನ ಲೀಲೆ ಅಪಾರವಾದುದು!

ಆಕಸ್ಮಾತ್ ರುಕ್ಮಿಣಿಯು ಅಲ್ಲಿಗೆ ಬಂದಳು. ಮುನ್ಷಿಯವರನ್ನು ಕಂಡೊಡನೆಯೇ ಹೇಳಿದಳು—ನೋಡಿದೆಯಾ ತೋತಾ! ಮಾನಸರಾಮನೇ ಹೌದೋ, ಅಲ್ಲವೋ? ಅವನೇ ಬಂದುಬಿಟ್ಟನೇ? ಎಲ್ಲಾ ಹೋಲಿಕೆಯೂ ಅವನಂತೆಯೇ! ಈಗಾಗಲೇ ಒಂದು ವರ್ಷ ಸಮೀಪಿಸುತ್ತ ಬಂತಲ್ಲವೆ?

ಮುನ್ಷಿ—ಅಕ್ಕ, ಒಂದೊಂದು ಅಂಗವೂ ಅವನನ್ನೇ ಹೋಲುತ್ತಿದೆ! ಭಗವಂತನು ನನ್ನ ಮಾನಸರಾಮನನ್ನು ನನಗೆ ಕೊಟ್ಟನು. (ಶಿಶುವನ್ನು ಕುರಿತು)ನೀನು ಮಾನಸರಾಮನೇ ಅಲ್ಲವೇ? ಇನ್ನು ನನ್ನನ್ನು ಬಿಟ್ಟು ಹೋಗಲು ಯತ್ನಿಸಬೇಡ! ಹೋದೆಯಾದರೆ ಪುನಃ ಎಳೆದು ತರುವೆನು! ಎಷ್ಟು ನಿಷ್ಠುರನಾಗಿ ಓಡಿಹೋಗಿದ್ದೆ? ಕಡೆಗೂ ನಿನ್ನನ್ನು ಹಿಡಿದು ತಂದೆನೋ ಇಲ್ಲವೋ? ಈಗಲೇ ಹೇಳಿರುವೆನು; ಇನ್ನು ನನ್ನನ್ನು ಬಿಟ್ಟು ಹೋಗುವ

ಮಾತನ್ನೂ ಸಹ ಎತ್ತಬೇಡ ! ನೋಡಿದೆಯಾ, ಅಕ್ಕಾ ! ಹೇಗೆ ದುರುಗುಟ್ಟುತ್ತ ನನ್ನನ್ನೇ ನೋಡುತ್ತಿದೆ ?

ಪ್ರತಿಕ್ಷಣವೇ ಮುನ್ಷಿಯವರು ಅಭಿಲಾಷೆಗಳ ಕೋಟೆಯನ್ನು ಕಟ್ಟಲಾರಂಭಿಸಿದರು ! ಮೋಹವು ಅವರನ್ನು ಪುನಃ ಪ್ರಪಂಚದೆಡೆಗೆಳೆಯಿತು. ಎಲೆ ಮಾನವ ಜೀವನವೇ ! ನೀನೆಷ್ಟು ಕ್ಷಣಭಂಗುರ ? ಆದರೆ, ನಿನ್ನ ಕಲ್ಪನೆಗಳು ಮಾತ್ರ ಎಷ್ಟು ದೀರ್ಘಾಯು ? ಪ್ರಪಂಚದಿಂದ ವಿರಕ್ತರಾಗಿ ಹಗಲಿರುಳೂ ಮೃತ್ಯುವನ್ನು ಆಹ್ವಾನಿಸುತ್ತಿದ್ದ ತೋತಾರಾಮರು ಇಂದು ತಮ್ಮ ಶಕ್ತಿಯನ್ನೆಲ್ಲಾ ಶೇಖರಿಸಿ, ತೃಣದಾಶ್ರಯದಿಂದಾದರೂ ದಡವನ್ನು ಮುಟ್ಟಬೇಕೆಂದು ಯತ್ನಿಸುತ್ತಿರುವರು !

ಆದರೆ, ತೃಣದಾಶ್ರಯದಿಂದ ದಡವನ್ನು ಸೇರಲು ಸಾಧ್ಯವೇ ?

## ಹದಿನೈದನೆಯ ಪರಿಚ್ಛೇದ

ನಿರ್ಮಲೆಗೆ ತನ್ನ ಮನೆಯ ಜಂಜಾಟಗಳೇ ಸಾಕಷ್ಟಿದ್ದವು. ಆದರೆ, ಕೃಷ್ಣಳ ವಿವಾಹದ ಸುದ್ದಿ ತಲುಪಿದಕೂಡಲೇ ಹೊರಡಲು ಆತುರಳಾದಳು. ಅವಳ ತಾಯಿಯು ಬಹಳ ಬಲಾತ್ಕಾರ ಮಾಡಿ ಹೇಳಿಕಳುಹಿಸಿದ್ದಳು. ಹಿಂದೆ ನಿರ್ಮಲೆಯ ಮದುವೆ ಯಾರ ಮನೆಗೆ ಗೊತ್ತಾಗಿತ್ತೋ ಅದೇ ಮನೆಗೆ ಈಗ ಕೃಷ್ಣಳ ವಿವಾಹವಾಗುವುದು—ಎಂಬುದೇ ಎಲ್ಲಕ್ಕೂ ಹೆಚ್ಚಿನ ಆಕರ್ಷಣೆಯಾಗಿತ್ತು. ಈ ಸಲ ಅವರು ವರದಕ್ಷಿಣೆ ಇಲ್ಲದೆ ಹೇಗೆ ವಿವಾಹ ಮಾಡಿಕೊಳ್ಳಲು ಒಪ್ಪಿದರೆಂಬುದು ಅಚ್ಚರಿಯೆ ! ನಿರ್ಮಲೆಯು ಕೃಷ್ಣಳ ವಿಷಯವಾಗಿ ಬಹಳ ಚಿಂತಿಸುತ್ತಿದ್ದಳು. ಅವಳನ್ನೂ ತನ್ನಂತೆಯೇ ಒಬ್ಬ ವೃದ್ಧನ ತಲೆಗೆ ಕಟ್ಟುವರೆಂದು ಕೊರಗುತ್ತಿದ್ದಳು. ಕೃಷ್ಣಳಿಗೆ ಯೋಗ್ಯ ವರನು ಸಿಗುವಂತೆ ತಾಯಿಗೇನಾದರೂ ಸಹಾಯ ಮಾಡಬೇಕೆಂದು ಅವಳ ಆಸೆ ಇತ್ತು. ಆದರೆ, ಇತ್ತ ವಕೀಲಸಾಹೇಬರು ಕೆಲವು ತಿಂಗಳಿಂದ ಸಂಪಾದನೆ ಇಲ್ಲದೆ ಮನೆಯಲ್ಲೇ ಕುಳಿತು, ಮನೆಯೂ ಹರಾಜಾಗಿ ಹೋದದ್ದರಿಂದ ಅವಳ ಕೈ ಕಟ್ಟಿದಂತಾಯಿತು. ಇಂತಹ ಸ್ಥಿತಿಯಲ್ಲಿ ಈ ಸಂತೋಷದ ಸುದ್ದಿಯನ್ನು ಕೇಳಿ ಅವಳಿಗೆ ಶಾಂತಿ ದೊರಕಿತು. ಹೊರಡಲು ಸಿದ್ಧತೆ ಮಾಡಿಕೊಂಡಳು.

ವಕೀಲಸಾಹೇಬರು ಅವಳನ್ನು ಸ್ಟೇಷನ್ನಿಗೆ ತಲುಪಿಸಲು ಬಂದಿದ್ದರು. ಮಗು ವನ್ನು ಕಂಡರೆ ಅವರಿಗೆ ಬಹಳ ಪ್ರೇಮ. ಒಂದು ಘಳಿಗೆಯೂ ಬಿಟ್ಟಿರುತ್ತಿರ ಲಿಲ್ಲ. ನಿರ್ಮಲೆಯ ಸಂಗಡ ತಾವೂ ಹೊರಡಲು ಸಿದ್ಧರಾಗಿದ್ದರು. ಆದರೆ, ವಿವಾಹಕ್ಕೆ ಒಂದು ತಿಂಗಳು ಮುನ್ನವೇ ಅವರು ಅತ್ತೆಯ ಮನೆಯಲ್ಲಿ ಬಂದು ಕುಳಿತುಕೊಳ್ಳುವುದು ನಿರ್ಮಲೆಗೆ ಉಚಿತ ತೋರಲಿಲ್ಲ.

ನಿರ್ಮಲೆಯು ತನ್ನ ವಿಪತ್ತಿಯ ಕಥೆಯನ್ನು ಇದುವರೆಗೆಂದೂ ಮಾತೆಯ ಸಂಗಡ ಹೇಳಿರಲಿಲ್ಲ. ಆಗಿಹೋದ ಕೆಲಸಕ್ಕಾಗಿ ಅತ್ತು, ತಾಯಿಗೂ ದುಃಖ ಕೊಡುವುದರಿಂದ ಪ್ರಯೋಜನವೇನು ? ಇತ್ತ ಮಾತೆಯು ನಿರ್ಮಲೆ ಬಹಳ ಆನಂದದಿಂದಿರುವಳೆಂದು ತಿಳಿದಿದ್ದಳು. ಆದರೆ, ನಿರ್ಮಲೆಯ ಮುಖ ವನ್ನು ನೋಡಿದೊಡನೆಯೇ ಅವಳ ಎದೆ ಧಗ್ಗೆಂದಿತು. ಹುಡುಗಿಯರು ಸಾಮಾನ್ಯವಾಗಿ ಅತ್ತೆಯ ಮನೆಗೆ ಹೋಗಿ ಚೆಂದಾಗಿ ಬರುವರು. ಬಿದಿಗೆಯ ಚಂದ್ರನಂತಿದ್ದವರು ಪೂರ್ಣಿಮಾ ಚಂದ್ರನಂತಾಗಿ ಬರುವರು. ಇಂತಿರುವಲ್ಲಿ ಸಕಲ ಸುಖಸೌಕರ್ಯವನ್ನೂ ಪಡೆದಿದ್ದ ನಿರ್ಮಲೆ ಏಕೆ ಹೀಗಾದಳು ? ಅರ್ಧಕ್ಕರ್ಧ ಸಹ ಇಲ್ಲ ! ಯೌವನದ ಚಂಚಲತೆ ಇಲ್ಲ; ಹೃದಯವನ್ನು ಮೋಹಗೊಳಿಸುವ ವಿಕಸಿತ ಕಾಂತಿ ಇಲ್ಲ; ವಿಲಾಸಮಯ ಜೀವನದಿಂದುಂಟಾ ಗುವ ಆ ಕಮನೀಯತೆ–ಸುಕುಮಾರತೆಯ ಹೆಸರು ಸಹ ಇಲ್ಲ ! ಮುಖ ಬಿಳಿಚಿಕೊಂಡಿತ್ತು. ಅಂಗಗಳು ಶಿಥಿಲವಾಗಿದ್ದವು. ಹತ್ತೊಂಭತ್ತನೆಯ ವರ್ಷಕ್ಕೆ ಮುದುಕಿಯಂತಾಗಿದ್ದಳು. ತಾಯಿ–ಮಕ್ಕಳಿಬ್ಬರೂ ತುಸು ಹೊತ್ತು ಅತ್ತು, ಶಾಂತರಾದರು. ನಂತರ ಮಾತೆ ಕೇಳಿದಳು—ಇದೇಕೆ, ನಿರ್ಮಲಾ ? ನಿನಗೆ ಅಲ್ಲಿ ತಿನ್ನಲು ಉಣ್ಣಲು ಕಡಿಮೆಯೇ ? ಇಲ್ಲಿದ್ದಾಗಲೇ ಎಷ್ಟೋ ಚೆನ್ನಾ ಗಿದ್ದೆ ! ಅಲ್ಲಿ ನಿನಗಾವ ಕಷ್ಟ ?

ಕೃಷ್ಣಳು ನಕ್ಕು ನುಡಿದಳು —ಎಷ್ಟೇ ಆಗಲಿ, ಮನೆ ಯಜಮಾನಿ ಅಲ್ಲವೇ ? ಮನೆ ಚಿಂತೆಯಲ್ಲಾ ಅವಳದೇ ? ಅಂದಬಳಿಕ ಊಟಮಾಡಲು ವಿರಾಮವೆಲ್ಲಿ ?•

ನಿರ್ಮಲೆ—ಇಲ್ಲ ಅಮ್ಮಾ ! ಅಲ್ಲಿನ ನೀರು ನನಗೆ ಒಗ್ಗಲಿಲ್ಲ. ದೇಹ ಸ್ಥಿತಿಯೇ ಸರಿಯಾಗಿರುವುದಿಲ್ಲ.

ಮಾತೆ—ವಕೀಲ ಸಾಹೇಬರು ಮದುವೆಗೆ ಬರುವರಲ್ಲಾ ? ಆಗ ಕೇಳುವೆನು ! ಹೂವಿನಂತಹ ಹುಡುಗಿಯನ್ನು ಕರೆದುಕೊಂಡು ಹೋಗಿ ಈ ಗತಿ ಮಾಡಿದಿರಿ—ಎನ್ನುವೆನು. ಅದಿರಲಿ, ನೀನು ಇಲ್ಲಿಗೆ ಹಣವನ್ನೇಕೆ ಕಳುಹಿಸಿದೆ, ಹೇಳು ? ನಾನು ನಿನ್ನನ್ನೆಂದೂ ಕೇಳಿರಲಿಲ್ಲ. ಎಷ್ಟೇ ದಾರಿದ್ರ್ಯದಲ್ಲಿದ್ದರೂ, ಮಗಳ ಮನೆಯ ಹಣ ತಿನ್ನುವುದು ಧರ್ಮವಲ್ಲ !

ನಿರ್ಮಲೆಯು ಚಕಿತಳಾಗಿ ಕೇಳಿದಳು—ಹಣ ಯಾರು ಕಳುಹಿಸಿದರು, ಅಮ್ಮಾ ! ನಾನು ಕಳುಹಿಸಲಿಲ್ಲ.

ಮಾತೆ—ಸುಳ್ಳು ಹೇಳಬೇಡ ! ನೀನು ೫೦೦ ರೂಪಾಯಿಗಳನ್ನು ಕಳುಹಿಸಲಿಲ್ಲವೇ ?

ಕೃಷ್ಣ—ಕಳುಹಿಸದಿದ್ದರೆ ಹಣ ಆಕಾಶದಿಂದುದುರಿತೆ ? ನಿನ್ನ ಹೆಸರು ಸ್ಪಷ್ಟವಾಗಿ ಬರೆದಿತ್ತು ! ಮುದ್ರೆ ಕೂಡ ನಿಮ್ಮೂರಿನದೇ ಬಿದ್ದಿತ್ತು !

ನಿರ್ಮಲೆ—ನಿನ್ನ ಪಾದಗಳನ್ನು ಮುಟ್ಟಿ ಹೇಳುವೆನು, ಅಮ್ಮಾ! ನಾನು ಹಣ ಕಳುಹಿಸಲಿಲ್ಲ. ಇದೆಷ್ಟು ದಿನದ ಮಾತು ?

ಮಾತೆ—ಎರಡು-ಮೂರು ತಿಂಗಳಾಗಿರಬಹುದು. ನೀನು ಕಳುಹಿಸಲಿಲ್ಲವೆನ್ನುವೆ ? ಮತ್ತೆಲ್ಲಿಂದ ಬಂತು ?

ನಿರ್ಮಲೆ—ಆ ವಿಷಯ ನನಗೇನು ಗೊತ್ತು ? ನಾನಂತೂ ಕಳುಹಿಸಲಿಲ್ಲ. ಪ್ರಾಯದ ಪುತ್ರನು ತೀರಿದಂದಿನಿಂದ ಇವರೂ ಕೆಲಸಕ್ಕೆ ಹೋಗುತ್ತಿಲ್ಲ. ನನ್ನ ಕೈಗಳೇ ಕಟ್ಟಿದಂತಾಗಿತ್ತು; ನಾನೆಲ್ಲಿಂದ ಹಣ ಕಳುಹಿಸಲಿ ?

ಮಾತೆ—ಇದು ಅಚ್ಚರಿಯ ಮಾತೇ ಸರಿ ! ಅಲ್ಲಿ ನಿನ್ನ ನೆಂಟರಿಷ್ಟರಾರಾದರೂ ಇರುವರೇ ? ವಕೀಲ ಸಾಹೇಬರು ನಿನಗೆ ತಿಳಿಸದೆ ಕಳಿಸಿರಲಿಕ್ಕಿಲ್ಲವಷ್ಟೆ ?

ನಿರ್ಮಲೆ—ಇಲ್ಲ, ಅಮ್ಮಾ! ನನಗೆ ನಂಬಿಕೆ ಇಲ್ಲ.

ಮಾತೆ—ಇದರ ಪತ್ತೆ ಹಚ್ಚಬೇಕು. ನಾನು ಹಣವನ್ನೆಲ್ಲಾ ಕೃಷ್ಣಳ ಒಡವೆವಸ್ತ್ರಗಳಿಗಾಗಿ ಖರ್ಚು ಮಾಡಿಬಿಟ್ಟೆ. ಈಗ ಬಹಳ ಕಷ್ಟಕ್ಕಿಟ್ಟುಕೊಂಡಿತು !

ಕೃಷ್ಣಳು ಏನೋ ಕೆಲಸಕ್ಕಾಗಿ ಒಳಗೆ ಹೋದಳು. ಆಗ ನಿರ್ಮಲೆಯು

ಮಾತೆಯನ್ನು ಕೇಳಿದಳು—ಈ ವಿವಾಹದ ಮಾತನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ಇದು ಹೇಗಾಯಿತಮ್ಮಾ?

ಮಾತೆ—ಕೇಳಿದವರೆಲ್ಲರೂ ಆಶ್ಚರ್ಯಪಡುವರು. ನಿಶ್ಚಯ ಮಾಡಿಕೊಂಡಿದ್ದ ಮದುವೆಯನ್ನು ಕೇವಲ ಧನದಾಸೆಗಾಗಿ ನಿಲ್ಲಿಸಿದವರು ಈಗ ಒಂದು ಕಾಸೂ ತೆಗೆದುಕೊಳ್ಳದೆ ಹೇಗೆ ಮದುವೆ ಮಾಡಿಕೊಳ್ಳುವರೆಂಬುದೇ ಅರ್ಥವಾಗುವುದಿಲ್ಲ! ಅವರೇ ಪತ್ರ ಕಳುಹಿಸಿದರು. ನನ್ನ ಬಳಿ ಕೊಡಲು ತರಲು ಹಣ ಕಾಸೇನೂ ಇಲ್ಲವೆಂದು ಸ್ಪಷ್ಟವಾಗಿ ತಿಳಿಸಿಬಿಟ್ಟೆ.

ನಿರ್ಮಲೆ—ಅದಕ್ಕೆ ಏನೂ ಉತ್ತರ ಕೊಡಲಿಲ್ಲವೇ?

ಮಾತೆ—ಪಂಡಿತಜೀಯವರು ಪತ್ರ ತೆಗೆದುಕೊಂಡು ಹೋಗಿದ್ದರು. 'ಭಾಲಚಂದ್ರಬಾಬುಗಳು ಹಣಕಾಸೇನೂ ತೆಗೆದುಕೊಳ್ಳಲು ಇಚ್ಛಿಪಡುವದಿಲ್ಲ. ಹಿಂದೆ ಆಡಿದ ಮಾತಿಗೆ ತಪ್ಪಿದುದಕ್ಕಾಗಿ ಬಹಳ ಲಜ್ಜಿತರಾಗಿರುವರು.'—ಎಂದು ತಿಳಿಸಿದರು. ಅವರಿಂದ ಅಷ್ಟು ಉದಾರತೆಯ ಆಸೆಯಿಲ್ಲದಿದ್ದರೂ, ಅವರ ಹಿರಿಯ ಪುತ್ರರು ಅತ್ಯಂತ ಸಜ್ಜನರೆಂದು ತೋರುವುದು. ಅವರೇ ತಿಳಿಯ ಹೇಳಿ ತಂದೆಯನ್ನು ಒಪ್ಪಿಸಿರುವರು.

ನಿರ್ಮಲೆ—ಮೊದಲು ಆ ಮಹಾಶಯರೂ ಹಣದಾಸೆಯಲ್ಲಿರಲಿಲ್ಲವೇ?

ಮಾತೆ—ಹೌದು, ಈಗ ವರದಕ್ಷಿಣೆಯ ಹೆಸರನ್ನು ಕೇಳಿದರೂ ಸಿಡುಗುಟ್ಟುವರೆಂದು ಪಂಡಿತಜೀ ತಿಳಿಸಿದರು. ಮತ್ತು ಇಲ್ಲಿ ಮದುವೆ ಮಾಡಿಕೊಳ್ಳದಿದ್ದುದಕ್ಕಾಗಿ ಪಶ್ಚಾತ್ತಾಪಪಡುವರೆಂದೂ ತಿಳಿಯಬಂತು. ಹಣದಾಸೆಗಾಗಿ ಇಲ್ಲಿನ ಸಂಬಂಧವನ್ನು ಬಿಟ್ಟರು. ಹಣವೇನೊ ಸಾಕಷ್ಟು ಸಿಕ್ಕಿತು; ಆದರೆ, ಪತ್ನಿಯು ಮನಸಿಗೊಪ್ಪಿಗೆಯಿಲ್ಲ.

ತನ್ನ ಅವಹೇಳನ ಮಾಡಿ ತನ್ನ ತಂಗಿಯನ್ನು ಉದ್ಧಾರಮಾಡಬಯಸುವ ಆ ಮಹಾಪುರುಷನನ್ನು ನೋಡಬೇಕೆಂಬ ಪ್ರಬಲ ಇಚ್ಛೆ ನಿರ್ಮಲೆಯ ಮನದಲ್ಲುಂಟಾಯಿತು. ಇದು ನಿಜವಾಗಿಯೂ ಪ್ರಾಯಶ್ಚಿತ್ತವೇ ಹೌದು! ಆದರೆ, ಈ ರೀತಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಸಿದ್ಧರಾಗಿರುವವರು ಬಹಳ ಕಡಿಮೆ! ಅವರೊಡನೆ ಮಾತನಾಡಲು, ನಮ್ರ ಶಬ್ದಗಳಿಂದ ಅವರನ್ನು ತಿರಸ್ಕರಿಸಲು, ಹಾಗೂ ತನ್ನ ಅನುಪಮ ಸೌಂದರ್ಯವನ್ನು ತೋರಿ. ಅವರ ಹೃದಯವನ್ನು ಮತ್ತಷ್ಟು ದಹಿಸಲು ನಿರ್ಮಲೆಯ ಮನಸು ಆತುರಗೊಂಡಿತು.

ರಾತ್ರಿ ಅಕ್ಕತಂಗಿಯರಿಬ್ಬರೂ ಒಂದೇ ಕೊಠಡಿಯಲ್ಲಿ ಮಲಗಿದರು. ತಮ್ಮ ಸ್ನೇಹಿತರಲ್ಲಿ ಯಾರ ಯಾರ ವಿವಾಹವಾಯಿತು? ಯಾರು ಅತ್ತೆಯ ಮನೆಗೆ ಹೋದರು? ಯಾರ ಮದುವೆ ಸಂಭ್ರಮದಿಂದ ನಡೆಯಿತು? ಯಾರಾರಿಗೆ ಒಪ್ಪಿಗೆಯ ಪತಿ ದೊರೆತರು? ಯಾರು ಹೆಚ್ಚಿನ ಒಡವೆಗಳನ್ನು ಇಟ್ಟರು? ಮುಂತಾದ ವಿಷಯಗಳನ್ನು ಬಹಳ ಹೊತ್ತಿನ ವರೆಗೆ ಮಾತನಾಡುತ್ತಿದ್ದರು. ಅಕ್ಕನ ಮನೆಯ ಪರಿಸ್ಥಿತಿಯನ್ನು ಕೇಳಬೇಕೆಂದು ಕೃಷ್ಣಳು ಎಷ್ಟೋ ಪ್ರಯತ್ನಿಸಿದಳು. ಆದರೆ ನಿರ್ಮಲೆಯು ಅದಕ್ಕೆಡೆಗೊಡಲಿಲ್ಲ. ಕಡೆಗೂ ಕೃಷ್ಣಳು ಕೇಳಿದಳು—ಭಾವನವರೂ ಬರುವರಲ್ಲವೇ?

ನಿರ್ಮಲೆ—ಬರುವೆನೆಂದು ಹೇಳಿದ್ದರು.

ಕೃಷ್ಣಾ—ಈಗ ನಿನ್ನೊಡನೆ ಪ್ರಸನ್ನರಾಗಿರುವರೇ? ಅಥವಾ ಹಿಂದಿನಂತೆಯೇ ಇರುವರೇ? ಎರಡನೆಯ ಮದುವೆ ಮಾಡಿಕೊಂಡವರು ತಮ್ಮ ಪತ್ನಿಯನ್ನು ಪ್ರಾಣಕ್ಕಿಂತ ಪ್ರಿಯವಾಗಿ ಕಾಣುವರೆಂದು ನಾನು ಕೇಳಿರುವೆನು ಆದರೆ ಇವರ ವಿಷಯ ತದ್ವಿರುದ್ಧ! ಅದಾವ ಮಾತಿಗಾಗಿ ಯಾವಾಗಲೂ ಸಿಡಿಗುಟುತ್ತಿರುವರು?

ನಿರ್ಮಲೆ—ಮತ್ತೊಬ್ಬರ ಮನಸನ್ನು ನಾನೇನು ಬಲ್ಲೆ?

ಕೃಷ್ಣಾ—ನಿನ್ನದೇ ತಪ್ಪಿರಬಹುದು. ಇಲ್ಲಿಂದ ಹೋಗುವಾಗಲೇ ನೀನು ಇಷ್ಟವಿಲ್ಲದೆ ಹೋದೆ. ಅಲ್ಲಿ ಹೋದನಂತರ ಅವರನ್ನೇನೋ ಅಂದಿರಬೇಕು!

ನಿರ್ಮಲೆ—ಇಲ್ಲ, ಕೃಷ್ಣಾ! ಭಾಷೆ ಇಟ್ಟು ಹೇಳುವೆನು; ಅವರ ವಿಷಯವಾಗಿ ನನ್ನ ಮನಸಿನಲ್ಲಾವ ಮೈಲಿಗೆಯೂ ಇಲ್ಲ. ನನ್ನಿಂದಾದಷ್ಟು ಅವರ ಸೇವೆ ಮಾಡುವೆನು. ಅವರ ಸ್ಥಾನದಲ್ಲಿ ಒಬ್ಬ ದೇವತೆ ಇದ್ದರೂ ಇದಕ್ಕಿಂತ ಹೆಚ್ಚು ಸೇವೆ ಮಾಡುತ್ತಿರಲಿಲ್ಲ! ಅವರಿಗೂ ನನ್ನಲ್ಲಿ ಸಾಕಷ್ಟು ಪ್ರೇಮವಿದೆ. ಆದರೆ, ನಮ್ಮಿರ್ವರ ವಶದಲ್ಲೂ ಇಲ್ಲದ ವಿಷಯಕ್ಕಾಗಿ ಏನು ಮಾಡಲಾಗುವುದು? ಅವರು ಯುವಕರಾಗಲಾರರು, ನಾನು ವೃದ್ಧಳಾಗಲಾರೆ! ಯುವಕರಾಗಬೇಕೆಂದು ಅವರು ಬೇಕಾದ ಭಸ್ಮ ಲೇಹ್ಯಗಳನ್ನು ತಿನ್ನುವರು. ವೃದ್ಧಳಾಗಬೇಕೆಂದು ನಾನು ಹಾಲುತುಪ್ಪವನ್ನೆಲ್ಲ ತ್ಯಜಿಸಿರುವೆನು. ಆದರೆ, ಪೌಷ್ಠಿಕ ಪದಾರ್ಥಗಳಿಂದ ಅವರಿಗಾಗಲೀ, ಉಪವಾಸದಿಂದ ನನಗಾಗಲೀ ಯಾವ

ಲಾಭವೂ ಆಗಲಿಲ್ಲ. ಮಾನಸರಾಮನ ದೇಹಾಂತವಾದಂದಿನಿಂದಲೂ ಅವರ ಸ್ಥಿತಿ ಮತ್ತಷ್ಟು ಕೆಟ್ಟಾಗಿದೆ.

ಕೃಷ್ಣಾ—ಮಾನಸರಾಮನನ್ನು ನೀನು ಕೂಡ ಬಹಳ ಪ್ರೀತಿಸುತ್ತಿದ್ದೆ ಯಲ್ಲವೇ ?

ನಿರ್ಮಲೆ—ನೋಡಿದವರೆಲ್ಲರೂ ಪ್ರೀತಿಸುವಂತಹ ಹುಡುಗನವನು. ಅಂತಹ ವಿಶಾಲ ತೇಜೋಮಯ ನೇತ್ರಗಳನ್ನು ನಾನು ಮತ್ತಾರಲ್ಲಿಯೂ ನೋಡಿಲ್ಲ ! ಮುಖವು ಕಮಲದಂತೆ ಸದಾ ಅರಳಿರುತ್ತಿತ್ತು. ಒಳ್ಳೆಯ ಸಾಹಸಿ ಹುಡುಗ ! ಕೃಷ್ಣಾ, ನಿಜವಾಗಿಯೂ ಹೇಳುವೆನು. ಅವನು ನನ್ನ ಬಳಿ ಬಂದು ಕುಳಿತನೆಂದರೆ ನಾನು ನನ್ನನ್ನೇ ಮರೆತುಬಿಡುತ್ತಿದ್ದೆ. ಅವನು ಸದಾ ನನ್ನ ಬಳಿ ಕುಳಿತಿರಲಿ, ನಾನು ನೋಡುತ್ತಿರುವೆನು ! ಎಂದೆನಿಸುತ್ತಿತ್ತು. ನನ್ನ ಮನಸಿನಲ್ಲಿ ಪಾಪದ ಲೇಶಮಾತ್ರವೂ ಇರಲಿಲ್ಲ. ಒಂದು ಕ್ಷಣವಾದರೂ ನಾನವ ನನ್ನು ಅನ್ಯ ಭಾವನೆಯಿಂದ ಕಂಡಿದ್ದರೆ ನನ್ನ ಕಣ್ಣುಗಳು ಇಂಗಿಹೋಗಲಿ ! ಆದರೆ ಅವನು ನನ್ನ ಬಳಿ ಇದ್ದಾಗಲೆಲ್ಲ ನನ್ನ ಹೃದಯಕ್ಕೊಂದು ಬಗೆಯ ಸಂತೋಷ–ಸಮಾಧಾನವುಂಟಾಗುತ್ತಿತ್ತು. ಇದಕ್ಕಾಗಿಯೇ ನಾನು ಅವನ ಬಳಿ ಪಾಠ ಕಲಿಯುವ ನೆಪವನ್ನು ಮಾಡಿದೆ. ಇಲ್ಲದಿದ್ದರೆ ಅವನು ಮನೆ ಯೊಳಗೇ ಬರುತ್ತಿರಲಿಲ್ಲ. ಅವನ ಮನಸಿನಲ್ಲಿ ನಿಜವಾಗಿಯೂ ಪಾಪವಿದ್ದಿದ್ದರೆ ಅವನಿಗೋಸ್ಕರ ನಾನು ಏನು ಬೇಕಾದರೂ ಮಾಡಲು ಸಿದ್ಧಳಾಗುತ್ತಿದ್ದೆ.

ಕೃಷ್ಣಾ—ಇಂತಹ ಮಾತುಗಳನ್ನು ಏಕಾಡುವೆ ಅಕ್ಕಾ ! ಸುಮ್ಮನಿರು.

ನಿರ್ಮಲೆ—ಹೌದು, ಕೃಷ್ಣಾ ! ನಾನಾಡುವ ಮಾತು ಕೆಟ್ಟದ್ದಾಗಿ ತೋರುವುದು. ಆದರೆ ಮನುಷ್ಯನ ಪ್ರಕೃತಿಯನ್ನು ಬದಲಾಯಿಸಲು ಯಾರಿಂದ ಸಾಧ್ಯ ? ನೀನೇ ಹೇಳು, ಐವತ್ತು ವರ್ಷದ ಒಬ್ಬ ವೃದ್ಧನೊಡನೆ ನಿನ್ನ ವಿವಾಹವಾದರೆ ಏನು ಮಾಡುವೆ ?

ಕೃಷ್ಣಾ—ವಿಷ ತೆಗೆದುಕೊಂಡಾದರೂ ಪ್ರಾಣ ಬಿಡುವೆನು. ಅಂಥವನ ಮುಖ ನೋಡಲಾರೆ, ಅಕ್ಕ !

ನಿರ್ಮಲೆ - ನನ್ನ ವಿಷಯವೂ ಹಾಗೆಯೇ ಎಂದು ತಿಳಿ. ಆ ಹುಡುಗನು ನನ್ನ ಕಡೆ ಕಣ್ಣೆತ್ತಿ ಸಹ ನೋಡಲಿಲ್ಲ; ಆದರೆ, ವೃದ್ಧರು ಸಾಮಾನ್ಯವಾಗಿ ಸಂಶಯ ಸ್ವಭಾವದವರು. ಅಂತೆಯೇ ನಿಮ್ಮ ಭಾವನವರು ಆ ಹುಡುಗನ

ಶತ್ರುವಾದರು; ಕಡೆಗೂ ಅವನ ಪ್ರಾಣವನ್ನು ತೆಗೆದುಕೊಂಡೇ ಬಿಟ್ಟರು! ತಂದೆಯವರ ಮನಸಿನಲ್ಲಿ ನನ್ನ ವಿಷಯವಾಗಿ ಸಂದೇಹವುಂಟಾಯಿತೆಂದು ಅರಿತಂದಿನಿಂದಲೇ ಅವನಿಗೆ ಜ್ವರವೇರಿ ಬಂತು; ಕಡೆಗೂ ಈ ಲೋಕವನ್ನು ಬಿಟ್ಟು ತೆರಳಿದನು! ಹಾ! ಆ ಅಂತಿಮ ದೃಶ್ಯವು ನನ್ನ ಕಣ್ಣೆದುರಿಗೆ ಕಟ್ಟಿದಂತೆಯೇ ಇದೆ! ನಾನು ಆಸ್ಪತ್ರೆಗೆ ಹೋಗಿದ್ದೆ; ಜ್ವರದ ತಾಪದಿಂದ ಪ್ರಜ್ಞೆ ತಪ್ಪಿ ಬಿದ್ದಿದ್ದನು. ಎದ್ದು ಕುಳಿತುಕೊಳ್ಳುವ ಶಕ್ತಿ ಸಹ ಇರಲಿಲ್ಲ; ನನ್ನ ಧ್ವನಿಯನ್ನು ಕೇಳಿದೊಡನೆಯೇ ಬೆಚ್ಚಿ ಎದ್ದು ಕುಳಿತನು; ಮತ್ತು 'ಅಮ್ಮಾ! ಅಮ್ಮಾ!' ಎಂದು ನನ್ನ ಕಾಲುಗಳ ಮೇಲೆ ಬಿದ್ದನು. (ಅಳುತ್ತ) ಕೃಷ್ಣಾ, ಆ ಸಮಯದಲ್ಲಿ ನನ್ನ ಪ್ರಾಣವನ್ನಾದರೂ ತೆಗೆದು ಅವನಿಗೆ ಕೊಟ್ಟುಬಿಡಲೇ ಎಂದೆನಿಸಿತು. ನನ್ನ ಕಾಲುಗಳ ಮೇಲೆಯೇ ಮೂರ್ಛಿತನಾದನು. ಪುನಃ ಕಣ್ಣು ತೆಗೆಯಲಿಲ್ಲ. ತಾಜಾ ರಕ್ತವನ್ನು ಅವನ ದೇಹಕ್ಕೆ ಸೇರಿಸುವುದರಿಂದ ಬದುಕಬಹುದೆಂದು ಡಾಕ್ಟರು ಹೇಳಿದ್ದರು. ಅದಕ್ಕಾಗಿಯೇ ನಾನು ನನ್ನ ರಕ್ತವನ್ನು ಕೊಡಲು ಅಲ್ಲಿಗೆ ಓಡಿಹೋಗಿದ್ದೆ. ಆದರೆ, ಡಾಕ್ಟರು ನನ್ನ ರಕ್ತವನ್ನು ತೆಗೆದುಕೊಳ್ಳುವಷ್ಟರಲ್ಲೇ ಅವನ ಪ್ರಾಣಪಕ್ಷಿ ಹಾರಿಹೋಯಿತು!

ಕೃಷ್ಣಾ—ತಾಜಾ ರಕ್ತವನ್ನು ಸೇರಿಸುವುದರಿಂದ ಅವನು ಬದುಕುತ್ತಿದ್ದನೇ?

ನಿರ್ಮಲೆ—ಯಾರು ಬಲ್ಲರು? ಆದರೆ ನಾನೇನೋ ನನ್ನ ರಕ್ತದ ಅಂತಿಮ ಬಿಂದುವನ್ನು ಸಹ ಕೊಡಲು ಸಿದ್ಧಳಾಗಿದ್ದೆ. ಅಂತಹ ಸ್ಥಿತಿಯಲ್ಲೂ ಅವನ ಮುಖಮಂಡಲವು ದೀಪದಂತೆ ಪ್ರಜ್ವಲಿಸುತ್ತಿತ್ತು! ಅವನು ನನ್ನನ್ನು ನೋಡಿದೊಡನೆಯೇ ನನ್ನ ಕಾಲುಗಳ ಮೇಲೆ ಬೀಳದೇ ಇದ್ದು, ಮುಂಚಿತವಾಗಿಯೇ ಅವನ ದೇಹಕ್ಕೆ ಸ್ವಲ್ಪ ರಕ್ತವನ್ನು ಸೇರಿಸಿದ್ದರೆ, ಒಂದು ವೇಳೆ ಬದುಕುತ್ತಿದ್ದನೋ ಏನೋ?

ಕೃಷ್ಣಾ—ಹಾಗಿದ್ದರೆ ಆಗಲೇ ನೀನು ಅವನನ್ನು ತಡೆಯಲಿಲ್ಲವೇಕೆ?

ನಿರ್ಮಲೆ—ಹುಚ್ಚು ಹುಡುಗಿ! ನಿನಗೆ ಮಾತಿನ ಅರ್ಥವೇ ಗೊತ್ತಾಗಲಿಲ್ಲ! ಅವನು ನನ್ನ ಪಾದಗಳ ಮೇಲೆ ಬಿದ್ದು, ಮಾತಾ-ಪುತ್ರರ ಸಂಬಂಧವನ್ನು ತೋರಿಸಿ, ತನ್ನ ತಂದೆಯ ಹೃದಯದಲ್ಲಿದ್ದ ಸಂಶಯವನ್ನು ದೂರಮಾಡಲೆಳಸಿದನು. ಕೇವಲ ಇದಕ್ಕಾಗಿಯೇ ಅವನು ಕೈಲಾಗದಿದ್ದರೂ ಎದ್ದು

ನಿಂತನು. ನನ್ನ ಕ್ಲೇಶವನ್ನು ಅಳಿಸುವುದಕ್ಕಾಗಿ ಅವನು ತನ್ನ ಪ್ರಾಣ ತೆತ್ತನು. ಅವನ ಮನೋಭಿಷ್ಟವು ಸಿದ್ಧಿಸಿತು! ಅಂದಿನಿಂದ ನಿಮ್ಮ ಭಾವನವರ ಮನಸು ನಿಷ್ಕಲ್ಮಷವಾಯಿತು! ಈಗ ಅವರ ಸ್ಥಿತಿಯನ್ನು ನೋಡಿ ನನಗೇ ಕನಿಕರ ಉಂಟಾಗುತ್ತದೆ. ಪುತ್ರಶೋಕವು ಅವರ ಪ್ರಾಣವನ್ನು ಕೊಂಡೇ ಬಿಡುವುದು. ನನ್ನಲ್ಲಿ ಸಂದೇಹಗೊಂಡು ನನಗೆ ಅನ್ಯಾಯ ಮಾಡಿದುದಕ್ಕಾಗಿ ಈಗ ಪ್ರತಿ ಶೋಧಿಸುತ್ತಿರುವರು. ಅವರನ್ನು ಈಗ ನೀನು ನೋಡಿದೆಯಾದರೆ ನಿಜ ವಾಗಿಯೂ ಹೆದರಿಹೋಗುವೆ! ವೃದ್ಧರಾಗಿ ಹೋಗಿರುವರು, ಸೊಂಟವೂ ಸ್ವಲ್ಪ ಬಗ್ಗಿ ಹೋಗಿದೆ!

ಕೃಷ್ಣಾ—ವೃದ್ಧರು ಇಷ್ಟು ಸಂಶಯ ಸ್ವಭಾವದವರೇಕೆ, ಅಕ್ಕಾ?

ನಿರ್ಮಲೆ—ಈ ವಿಷಯ ವೃದ್ಧರನ್ನೇ ಹೋಗಿ ಕೇಳು!

ಕೃಷ್ಣಾ—ಬಹುಶಃ ಅವರ ಹೃದಯದಲ್ಲಿ ಒಬ್ಬ ಕಳ್ಳನು ಯಾವಾಗಲೂ ಕುಳಿತಿರಬಹುದು. ಈ ಯುವತಿಯನ್ನು ಪ್ರಸನ್ನಳಾಗಿರಿಸಲಾರೆ!–ಎಂದು ಅವನು ಹೇಳುತ್ತಿರುವನೋ? ಅದಕ್ಕಾಗಿಯೇ ಸಣ್ಣಸಣ್ಣ ವಿಷಯಕ್ಕೂ ಸಂದೇಹಗೊಳ್ಳುವರು.

ನಿರ್ಮಲೆ—ತಿಳಿದೂ ತಿಳಿದೂ ನನ್ನನ್ನೇಕೆ ಕೇಳುವೆ?

ಕೃಷ್ಣಾ—ಇದಕ್ಕೋಸ್ಕರವೇ ಹೆಂಡತಿಗೆ ಹೆದರುವಂತೆಯೂ ನಟಿ ಸುವರು ನೋಡಿದವರು ಪತ್ನಿಯನ್ನು ಬಹಳ ಪ್ರೀತಿಸುವರೆಂದು ತಿಳಿಯ ಬೇಕು ಪಾಪ!

ನಿರ್ಮಲೆ—ನೀನು ಇಷ್ಟು ದಿನಗಳಲ್ಲೇ ಇಷ್ಟೊಂದು ವಿಷಯಗಳನ್ನು ಎಲ್ಲಿಂದ ಕಲಿತೆ? ಅದಿರಲಿ, ನಿನ್ನ ವರನು ನಿನ್ನ ಮನಸಿಗೊಪ್ಪಿಗೆಯೇ? ಅವರ ಭಾವಚಿತ್ರವನ್ನು ನೋಡಿದೆಯಾ?

ಕೃಷ್ಣಾ—ಹೌದು, ಭಾವಚಿತ್ರವನ್ನು ಕಳುಹಿಸಿದ್ದರು. ತರುವೆನು, ನೋಡುವೆಯಾ?

ಒಂದು ಕ್ಷಣದಲ್ಲಿ ಕೃಷ್ಣಳು ಭಾವಚಿತ್ರವನ್ನು ತಂದು ನಿರ್ಮಲೆಯ ಕೈಗೆ ಕೊಟ್ಟಳು. ನಿರ್ಮಲೆಯು ನಸುನಕ್ಕು—'ನೀನು ಬಹಳ ಭಾಗ್ಯಶಾಲಿ!' ಎಂದಳು.

ಕೃಷ್ಣಾ—ಅಮ್ಮನೂ ವರನನ್ನು ಬಹಳ ಒಪ್ಪಿದರು.

ನಿರ್ಮಲೆ—ಮತ್ತೊಬ್ಬರ ಮಾತು ಹಾಗಿರಲಿ! ನಿನಗೆ ಒಪ್ಪಿಗೆಯೋ ಇಲ್ಲವೋ ಹೇಳು?

ಕೃಷ್ಣಾ—(ನಾಚಿಕೆಯಿಂದ) ರೂಪವೇನೋ ಚೆನ್ನಾಗಿದೆ. ಆದರೆ, ಗುಣದ ವಿಷಯ ಭಗವಂತನೇ ಬಲ್ಲ! ಇಂತಹ ಸುಶೀಲ, ಸುಚರಿತ್ರ ಯುವಕರು ಸಿಗುವುದು ಅಪರೂಪವೆಂದು ಪಂಡಿತಜೀ ಹೇಳಿದರು.

ನಿರ್ಮಲೆ—ಇಲ್ಲಿಂದ ನಿನ್ನ ಭಾವಚಿತ್ರವೂ ಹೋಗಿತ್ತೇ?

ಕೃಷ್ಣಾ—ಹೌದು, ಪಂಡಿತಜೀಯವರೇ ತೆಗೆದುಕೊಂಡು ಹೋಗಿದ್ದರು.

ನಿರ್ಮಲೆ—ಅವರಿಗೆ ಒಪ್ಪಿಗೆಯಾಯಿತೇ?

ಕೃಷ್ಣಾ—ಇತರರ ಮನಸನ್ನು ನಾನೇನು ಬಲ್ಲೆ, ಅಕ್ಕಾ! ಭಾವಚಿತ್ರವನ್ನು ನೋಡಿ ಬಹಳ ಮೆಚ್ಚಿದರೆಂದು ಪಂಡಿತಜೀ ತಿಳಿಸಿದರು.

ನಿರ್ಮಲೆ—ಸರಿಯೆ! ನಿನಗೆ ಮದುವೆಯಲ್ಲಿ ಏನು ಉಪಹಾರ ಕೊಡಲಿ, ಹೇಳು? ಈಗಲೇ ಹೇಳಿದೆಯಾದರೆ ಮಾಡಿಸಿಡಲು ಅನುಕೂಲವಾಗುವುದು.

ಕೃಷ್ಣಾ—ನಿನ್ನ ಮನಸಿಗೆ ಏನಿಷ್ಟವೋ ಅದನ್ನೇ ಕೊಡು. ಅವರಿಗೆ ಪುಸ್ತಕಗಳೆಂದರೆ ಬಹಳ ಪ್ರೇಮ. ಆದ್ದರಿಂದ ಒಳ್ಳೊಳ್ಳೆಯ ಪುಸ್ತಕಗಳನ್ನು ತರಿಸಿಕೊಡು.

ನಿರ್ಮಲೆ—ನಾನು ಅವರಿಗೋಸ್ಕರ ಕೇಳಲಿಲ್ಲ; ನಿನಗೋಸ್ಕರ ಕೇಳಿದೆನು.

ಕೃಷ್ಣಾ—ನನಗೋಸ್ಕರವೇ ಹೇಳುತ್ತಿರುವೆನು.

ನಿರ್ಮಲೆ—(ಭಾವಚಿತ್ರವನ್ನು ನೋಡುತ್ತ) ಬಟ್ಟೆಯೆಲ್ಲವೂ ಖಾದಿಯಂತೆ ಕಂಡುಬರುತ್ತಿದೆ.

ಕೃಷ್ಣಾ—ಹೌದು, ಅತ್ಯಂತ ಖಾದೀ ಪ್ರೇಮಿಗಳು! ಖಾದಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಹಳ್ಳಿಗಳಲ್ಲಿ ಮಾರಲು ಹೋಗುವರೆಂದು ತಿಳಿಯಬಂತು. ವ್ಯಾಖ್ಯಾನ ಕೊಡುವುದರಲ್ಲೂ ಬಹಳ ಚತುರರಂತೆ.

ನಿರ್ಮಲೆ—ಹಾಗಿದ್ದರೆ ನೀನೂ ಖಾದಿಯನ್ನೇ ಧರಿಸಬೇಕಾಗುವುದು. ನಿನಗೆ ದಪ್ಪ ಬಟ್ಟೆಗಳೆಂದರೆ ಬಹಳ ಬೇಸರವಲ್ಲವೇ?

ಕೃಷ್ಣಾ—ಅವರಿಗೆ ದಪ್ಪ ಬಟ್ಟೆಗಳು ಇಷ್ಟವಾದ ಬಳಿಕ, ನನಗೆ ಬೇಸರವೆಂದರೆ ಹೇಗೆ? ನಾನಾಗಲೇ ಚರಕಾ ನೂಲುವುದನ್ನೂ ಸ್ವಲ್ಪ ಕಲಿತಿರುವೆನು.

ನಿರ್ಮಲೆ—ನಿಜವಾಗಿಯೂ ದಾರ ತೆಗೆಯುವಿಯಾ ?

ಕೃಷ್ಣಾ—ಹೌದು, ಅಕ್ಕಾ ! ಸ್ವಲ್ಪಸ್ವಲ್ಪ ತೆಗೆಯುವೆನು. ಅವರು ಅಷ್ಟು ಖಾದಿ ಪ್ರೇಮಿಗಳಾದ ಬಳಿಕ, ಚರಕಾ ನೂಲುವ ಅಭ್ಯಾಸವೂ ಇದ್ದೇ ಇರ ಬಹುದು. ಆದ್ದರಿಂದ ನೂಲುವುದು ನನಗೂ ಗೊತ್ತಿಲ್ಲದಿದ್ದರೆ ಲಜ್ಜಿತಳಾಗ ಬೇಕಾಗುವುದಲ್ಲವೇ ?

ಹೀಗೆಯೇ ಮಾತುಗಳನ್ನಾಡುತ್ತ ಅಕ್ಕತಂಗಿಯರಿಬ್ಬರೂ ಮಲಗಿ ಕೊಂಡರು. ರಾತ್ರಿ ಎರಡು ಘಂಟೆಯ ಸಮಯದಲ್ಲಿ ಮಗು ಅತ್ತಿತು. ನಿರ್ಮ ಲೆಯು ಎಚ್ಚರಗೊಂಡಳು. ನೋಡಲಾಗಿ ಕೃಷ್ಣಳ ಮಂಚ ಖಾಲಿ ಇತ್ತು. ಇಷ್ಟು ರಾತ್ರಿಯಲ್ಲಿ ಕೃಷ್ಣಳೆಲ್ಲಿಗೆ ಹೋದಳೆಂದು ನಿರ್ಮಲೆಗೆ ಅಚ್ಚರಿ ಯಾಯಿತು. ಬಹುಶಃ ನೀರು ಕುಡಿಯಲು ಹೋಗಿರಬಹುದು ಆದರೆ, ನೀರನ್ನೂ ತಲೆದಿಂಬಿನ ಬಳಿಯೇ ಇಟ್ಟಿರುವಳು. ಮತ್ತೆಲ್ಲಿಗೆ ಹೋದಳು ?– ಎಂದುಕೊಂಡು, ಒಂದೆರಡು ಬಾರಿ ಅವಳ ಹೆಸರನ್ನು ಹಿಡಿದು ಕೂಗಿದಳು. ಆದರೆ, ಕೃಷ್ಣಳು ಅಲ್ಲೆಲ್ಲಿ? ನಿರ್ಮಲೆಯು ಗಾಬರಿಗೊಂಡಳು. ಅವಳ ಮನಸಿ ನಲ್ಲಿ ವಿಧವಿಧವಾದ ಯೋಚನೆಗಳುಂಟಾದವು. ಕೊನೆಗೆ ತನ್ನ ಕೊಠಡಿಗೆ ಹೋಗಿರಬಹುದೆಂದು ಯೋಚಿಸಿದಳು. ಮಗು ಮಲಗಿಕೊಂಡ ನಂತರ ಅವಳು ಕೃಷ್ಣಳ ಕೊಠಡಿಗೆ ಬಂದಳು. ಅವಳು ಯೋಚಿಸಿದಂತೆಯೇ ಕೃಷ್ಣಳು ತನ್ನ ಕೊಠಡಿಯಲ್ಲಿದ್ದಳು. ಎಲ್ಲರೂ ಮಲಗಿದ್ದರು. ಕೃಷ್ಣಳು ಮಾತ್ರ ಕುಳಿತು ಚರಕಾ ನೂಲುತ್ತಿದ್ದಳು. ಈ ತನ್ಮಯತೆಯನ್ನು ಕಂಡು ನಿರ್ಮಲೆಗೆ ಆಶ್ಚರ್ಯವಾಯಿತು. ಕೃಷ್ಣಳ ಬಳಿ ಹೋಗಿ ಹೇಳಿದಳು—ಕೃಷ್ಣಾ, ಇದೇನು ಮಾಡುತ್ತಿರುವೆ ? ಚರಕಾ ನೂಲುವ ಸಮಯವೇ ಇದು ?

ಕೃಷ್ಣಳು ಬೆಚ್ಚಿ ಎದ್ದಳು. ಮತ್ತು ಸಂಕೋಚದಿಂದ ತಲೆ ತಗ್ಗಿಸಿ ನುಡಿದಳು—ನಿನಗೆ ಹೇಗೆ ಎಚ್ಚರವಾಯಿತು, ಅಕ್ಕಾ ? ನೀರನ್ನೂ ಸಹ ಅಲ್ಲೇ ಇಟ್ಟಿದ್ದೆ.

ನಿರ್ಮಲೆ—ಮಧ್ಯಾಹ್ನದ ಹೊತ್ತಿನಲ್ಲಿ ಪುರಸತ್ತಿಲ್ಲವೇ, ಕೃಷ್ಣಾ ? ಈ ಅರ್ಧ ರಾತ್ರಿಯಲ್ಲೇಕೆ ಚರಕಾ ಇಟ್ಟುಕೊಂಡು ಕುಳಿತೆ ?

ಕೃಷ್ಣಾ—ಮಧ್ಯಾಹ್ನದಲ್ಲಿ ಪುರಸತ್ತು ಸಿಗುವುದಿಲ್ಲ, ಅಕ್ಕಾ .

ನಿರ್ಮಲೆ—(ದಾರವನ್ನು ನೋಡಿ) ಎಷ್ಟು ಸಣ್ಣಾಗಿ ತೆಗೆದಿರುವೆ? ಬಹಳ ಚೆನ್ನಾಗಿದೆ!

ಕೃಷ್ಣಾ—ಎಲ್ಲಕ್ಕ? ದಾರ ದಪ್ಪವೇ ಆಯಿತು. ಇನ್ನೂ ಸಣ್ಣನಾದ ದಾರ ತೆಗೆದು, ಅವರಿಗೊಂದು ಶಲ್ಯ ತಯಾರಿಸಿ ಕೊಡಬೇಕೆಂದು ಯೋಚಿಸಿರುವೆನು. ಇದೇ ನನ್ನ ಉಪಹಾರ!

ನಿರ್ಮಲೆ—ಇದು ಒಳ್ಳೆಯ ಯೋಚನೆಯೇ ಹೌದು! ಇದಕ್ಕಿಂತ ಅಮೂಲ್ಯ ವಸ್ತುವು ಅವರ ದೃಷ್ಟಿಯಲ್ಲಿ ಇನ್ನಾವುದು? ಈಗ ನೂತಿದ್ದು ಸಾಕು, ಏಳು! ನಾಳೆ ನೂಲುವೆಯಂತೆ. ಹೀಗೆಲ್ಲಾ ಮಾಡಿ ಖಾಯಿಲೆ ಬಿದ್ದೆಯಾದರೆ ಬಹಳ ತೊಂದರೆಯಾಗುವುದು.

ಕೃಷ್ಣಾ—ಇಲ್ಲ, ಅಕ್ಕ! ನೀನು ಹೋಗಿ ಮಲಗಿಕೊ; ಈಗಲೇ ಬರುವೆನು.

ನಿರ್ಮಲೆಯು ಬಲಾತ್ಕಾರ ಮಾಡಲಿಲ್ಲ; ಮಲಗಲು ಹೋದಳು. ಆದರೆ ಅವಳಿಗೆ ನಿದ್ದೆ ಮಾತ್ರ ಬರಲಿಲ್ಲ.

ಕೃಷ್ಣಳ ಈ ಉತ್ಸುಕತೆಯನ್ನು ಕಂಡು ಅವಳ ಹೃದಯವು ಯಾವುದೋ ಅಲಕ್ಷಿತ ಆಕಾಂಕ್ಷೆಯಿಂದ ಆಂದೋಲಿತವಾಯಿತು. ಅಹಾ! ಈಗ ಇವಳ ಹೃದಯ ಎಷ್ಟು ಪ್ರಫುಲ್ಲಿತವಾಗಿದೆ? ಅನುರಾಗದಿಂದ ಎಷ್ಟು ಉನ್ಮತ್ತಳಾಗಿರುವಳು? ಎಂದುಕೊಂಡಳು. ಆಗ ನಿರ್ಮಲೆಗೆ ತನ್ನ ವಿವಾಹದ ನೆನಪಾಯಿತು. ನಿಶ್ಚಿತಾರ್ಥವಾದ ದಿನದಿಂದಲೇ ಅವಳ ಚಂಚಲತೆ, ಸಜೀವತೆ ಎಲ್ಲವೂ ಮಾಯವಾಯಿತು. ತನ್ನ ಕೊಠಡಿಯಲ್ಲಿ ಕುಳಿತು ತನ್ನ ಅದೃಷ್ಟಕ್ಕಾಗಿ ಅಳುತ್ತಿದ್ದಳು. ಮತ್ತು ಪ್ರಾಣವಾದರೂ ಹೋಗಬಾರದೇ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದಳು. ಅಪರಾಧಿಯು ದಂಡನೆಯನ್ನು ಎದುರು ನೋಡುತ್ತಿರುವಂತೆ ಅವಳು ವಿವಾಹವನ್ನೇ ನಿರೀಕ್ಷಿಸುತ್ತಿದ್ದಳು. ವಿವಾಹ! ತನ್ನ ಅಭಿಲಾಷೆಗಳನ್ನೆಲ್ಲಾ ವಿಲೀನ ಮಾಡುವ ವಿವಾಹ! ಹವನ ಕುಂಡದಲ್ಲಿ ತನ್ನ ಆಸೆಗಳನ್ನೆಲ್ಲಾ ಭಸ್ಮ ಮಾಡುವ ವಿವಾಹ!!

## ಹದಿನಾರನೆಯ ಪರಿಚ್ಛೇದ

ಒಂದು ತಿಂಗಳು ಕ್ಷಿಪ್ರದಲ್ಲೇ ಕಳೆದುಹೋಯಿತು. ವಿವಾಹದ ಶುಭ ಮುಹೂರ್ತವು ಸಮೀಪಿಸಿತು. ನೆಂಟರಿಷ್ಟರಿಂದ ಮನೆ ತುಂಬಿಹೋಯಿತು.

ಮುನ್ಷಿ ತೋತಾರಾಮರು ವಿವಾಹಕ್ಕೆ ಒಂದು ದಿನ ಮುನ್ನವೇ ಬಂದರು. ಮತ್ತು ಅವರ ಸಂಗಡ ನಿರ್ಮಲೆಯ ಸ್ನೇಹಿತೆಯೂ ಬಂದಳು. ನಿರ್ಮಲೆ ಅವಳನ್ನು ಅಷ್ಟೇನೂ ಬಲಾತ್ಕಾರ ಮಾಡಿರಲಿಲ್ಲ; ಆದರೂ ಅವಳೇ ಬರಲು ಉತ್ಸುಕಳಾಗಿದ್ದಳು. ವರನ ಅಣ್ಣನನ್ನು ನೋಡುವೆನು ಮತ್ತು ಸಾಧ್ಯವಾದರೆ ಅವರ ಸುಬುದ್ಧಿಗಾಗಿ ಅವರನ್ನು ವಂದಿಸುವೆನು—ಎಂಬುದೇ ನಿರ್ಮಲೆಗೆ ಎಲ್ಲಕ್ಕೂ ಮಿಗಿಲಾದ ಉತ್ಕಂಠತೆಯಾಗಿತ್ತು.

ಸುಧೆಯು ನಕ್ಕು ನುಡಿದಳು—ನೀನು ಅವರೊಡನೆ ಮಾತನಾಡು ಬಲ್ಲೆಯಾ ?

ನಿರ್ಮಲೆ—ಏಕೆ ? ಮಾತನಾಡುವುದರಲ್ಲೇನು ಹಾನಿ ? ಈಗಿನ ಸಂಬಂಧವೇ ಬೇರೆಯಾಯಿತಲ್ಲ ? ಒಂದು ವೇಳೆ ನಾನು ಮಾತನಾಡದಿದ್ದರೂ ನೀನಿರುವೆಯಲ್ಲಾ ?

ಸುಧಾ—ಇಲ್ಲಮ್ಮ! ಅದು ನನ್ನಿಂದ ಸಾಧ್ಯವಿಲ್ಲ. ಪರಪುರುಷನೊಡನೆ ನಾನು ಮಾತನಾಡಲಾರೆ ! ಎಂತಹ ಮನುಷ್ಯನೋ, ಏನೋ ?

ನಿರ್ಮಲೆ—ಮನುಷ್ಯನೇನೂ ಅಂತಹ ಕೆಟ್ಟವರಲ್ಲ. ಅದಿರಲಿ, ನೀನೇನು ಅವರನ್ನು ಮದುವೆ ಮಾಡಿಕೊಳ್ಳಬೇಕಾಗಿದೆಯೇ ? ಒಂದೆರಡು ಮಾತನಾಡುವುದರಲ್ಲಿ ಏನು ಹಾನಿ ? ಡಾಕ್ಟರ್‌ಸಾಹೇಬರು ಇಲ್ಲಿದ್ದಿದ್ದರೆ, ಅವರ ಅನುಮತಿ ದೊರಕಿಸಿ ಕೊಡುತ್ತಿದ್ದೆ !

ಸುಧಾ -ಮನಸು ಉದಾರವಾದ ಮಾತ್ರಕ್ಕೆ ಸ್ವಭಾವವೂ ಒಳ್ಳೆಯ ದೆಂದು ಹೇಗೆ ಹೇಳಲಾಗುವುದು ? ಪರಸ್ತ್ರೀಯನ್ನು ದುರುಗುಟ್ಟುತ್ತ ನೋಡುವುದೆಂದರೆ ಪುರುಷನಿಗೆ ಸಂಕೋಚವೇ ಇಲ್ಲ !

ನಿರ್ಮಲೆ—ಹಾಗಿದ್ದರೆ ಬೇಡ, ಮಾತನಾಡಬೇಡ ! ನಾನೇ ಮಾತ ನಾಡುವೆನು. ಬೇಕಾದಷ್ಟು ದುರಗುಟ್ಟಿ ನೋಡಲಿ ! ಅವರಿಂದ ನೋಡಲು ಸಾಧ್ಯವಾದಷ್ಟೂ ನೋಡಲಿ. ಸರಿಯೇ ?

ಅಷ್ಟರಲ್ಲಿ ಕೃಷ್ಣಳೂ ಅಲ್ಲಿಗೆ ಬಂದು ಕುಳಿತಳು. ನಿರ್ಮಲೆಯು ನಸು-ನಕ್ಕು ಕೇಳಿದಳು—ನಿಜವಾಗಿಯೂ ಹೇಳು ಕೃಷ್ಣಾ, ಈ ದಿನ ನೀನೇಕೆ ಒಂದು ಮಾದರಿ ಆಗಿರುವೆ ?

ಕೃಷ್ಣಾ – ಭಾವನವರು ಕರೆಯುತ್ತಿರುವರು; ಮೊದಲು ಹೋಗಿ ಕೇಳು. ನಂತರ ಹರಟೆಹೊಡಯುವೆಯಂತೆ! ಬಹಳ ಕೋಪಮಾಡುತ್ತಿರುವರು.

ನಿರ್ಮಲೆ ಏಕೆ? ನೀನೇನಾದರೂ ಕೇಳಿದೆಯಾ?

ಕೃಷ್ಣಾ—ಮೈ ಹುಷಾರಿಲ್ಲವೆಂದು ತೋರುವುದು; ಎಷ್ಟು ಇಳಿದು ಹೋಗಿರುವರು, ಅಕ್ಕ!

ನಿರ್ಮಲೆ—ನೀನೇ ಸ್ವಲ್ಪ ಹೊತ್ತು ಅವರ ಬಳಿ ಕುಳಿತು ಮಾತನಾಡುತ್ತಿರಲು ಏನಾಗಿತ್ತು? ಅಷ್ಟರಲ್ಲಿ ಇಲ್ಲಿಗೇಕೆ ಓಡಿಬಂದೆ? ಭಗವಂತನ ಕೃಪೆ ಇತ್ತು! ಇಲ್ಲದಿದ್ದರೆ ನಿನಗೂ ಇಂಥವನೇ ಒಬ್ಬ ಪತಿಯು ದೊರಕಿದ್ದರೆ ಆಗೇನು ಮಾಡುತ್ತಿದ್ದೆ? ಹೋಗು, ಸ್ವಲ್ಪ ಮಾತನಾಡುತ್ತಿರು. ವೃದ್ಧರು ಬಹಳ ಸ್ವಾರಸ್ಯವಾಗಿ ಮಾತನಾಡುವರು.

ಕೃಷ್ಣಾ—ಇಲ್ಲ ಅಕ್ಕ, ನೀನೇ ಹೋಗು! ನನ್ನಿಂದ ಅಲ್ಲಿ ಕುಳಿತುಕೊಳ್ಳಲಾಗುವುದಿಲ್ಲ.

ನಿರ್ಮಲೆಯು ಹೊರಟುಹೋದಳು. ಆಗ ಸುಧೆಯು ಕೃಷ್ಣಳನ್ನು ಕೇಳಿದಳು – ಇನ್ನೇನು ಬೀಗರು ಬರುತ್ತಿರಬಹುದಲ್ಲವೇ? ದ್ವಾರಪೂಜೆ ಏಕಾಗಲಿಲ್ಲ?

ಕೃಷ್ಣಾ—ನಾನೇನು ಬಲ್ಲೆ? ಪಂಡಿತಜೀಯವರು ಸಾಮಾನೆಲ್ಲಾ ಸಿದ್ಧಪಡಿಸಿಕೊಳ್ಳುತ್ತಿರುವರು.

ಸುಧಾ—ವರನ ಅತ್ತಿಗೆಯು ಬಹಳ ಕಠೋರ ಸ್ವಭಾವದವಳೆಂದು ಹೇಳುವರು ಹೌದೇ?

ಕೃಷ್ಣಾ—ನನಗೇನು ಗೊತ್ತು?

ಸುಧಾ—ಹೀಗೆಂದು ನನಗೆ ತಿಳಿಯಬಂತು. ಆದ್ದರಿಂದಲೇ ಈಗಿನಿಂದ ನಿನ್ನನ್ನು ಚೇತರಿಸುತ್ತಿರುವೆನು. ಜಗಳಕ್ಕೆ ಆರಂಭಿಸಿದಳೆಂದರೆ ಇತರರು ಬಾಯಿ ಮುಚ್ಚಿಕೊಳ್ಳಬೇಕಾಗುವುದು.

ಕೃಷ್ಣಾ—ನನ್ನದು ಜಗಳವಾಡುವ ಸ್ವಭಾವವೇ ಅಲ್ಲ. ನಾನಾವ ಮಾತಿಗೂ ಹೋಗದಿದ್ದರೆ ನಿಷ್ಕಾರಣವಾಗಿ ಜಗಳವಾಡುವರೇಕೆ?

ಸುಧಾ—ನನಗೆ ಹಾಗೆಂದೇ ತಿಳಿಯಬಂತು. ಸುಳ್ಳುಸುಳ್ಳೇ ಜಗಳವಾಡುವರಂತೆ.

ಕೃಷ್ಣಾ—ನಾನು ನೂರು ಮಾತಿಗೆ ಒಂದು ಮಾತನ್ನಾಡುವೆನು. ನಮ್ರತೆಯು ಕಲ್ಲನ್ನಾದರೂ ಕರಗಿಸುವುದು !

ವಾದ್ಯದ ಶಬ್ದ ಕೇಳಿಸಿತು. ಬೀಗರು ಬರುತ್ತಿರುವರು--ಎಂದುಕೊಂಡು ಇಬ್ಬರೂ ಕಿಟಕಿಯ ಬಳಿ ನಿಂತರು ಒಂದು ಕ್ಷಣದಲ್ಲಿ ನಿರ್ಮಲೆಯೂ ಅಲ್ಲಿಗೆ ಬಂದಳು.

ವರನ ಅಣ್ಣನನ್ನು ನೋಡಬೇಕೆಂದು ನಿರ್ಮಲೆಯು ಬಹಳ ಉತ್ಸುಕಳಾಗಿದ್ದಳು.

ಸುಧೆಯು ಕೇಳಿದಳು—ವರನ ಅಣ್ಣನಾರೆಂದು ಹೇಗೆ ಗೊತ್ತಾಗುವುದು ?

ನಿರ್ಮಲೆ—ಪಂಡಿತಜೀ (ಪುರೋಹಿತರು) ಯನ್ನು ಕೇಳಿದರೆ ಗೊತ್ತಾಗಿ ಹೋಗುವುದು. ಆನೆಯ ಮೇಲೆ ಕುಳಿತಿರುವವರು ಕೃಷ್ಣಳ ಮಾವಂದಿರು. ಅದಿರಲಿ, ಡಾಕ್ಟರ್‌ಸಾಹೇಬರು ಇಲ್ಲೆಲ್ಲಿ ಬಂದರು ? ಅದೋ ಕುದುರೆಯ ಮೇಲೆ ಕುಳಿತಿರುವರು, ಕಾಣುವುದಿಲ್ಲವೇ ?

ಸುಧಾ—ಹೌದು, ಅವರೇನೋ ಹೌದು !

ನಿರ್ಮಲೆ—ಬಹುಶಃ ಅವರ ಮಿತ್ರರಿರಬಹುದು ಏನೂ ಸಂಬಂಧವಿರಲಿಕ್ಕಿಲ್ಲ !

ಸುಧಾ—ಈಗ ಭೇಟಿಯಾಗುವುದಲ್ಲಾ ? ಕೇಳುವೆನು. ನನಗೇನೂ ಗೊತ್ತಿಲ್ಲ.

ನಿರ್ಮಲೆ—ಪಲ್ಲಕ್ಕಿಯಲ್ಲಿ ಕುಳಿತಿರುವ ಮಹಾಶಯರು ವರನ ಅಣ್ಣನೆಂದು ತೋರುತ್ತಿಲ್ಲ.

ಸುಧಾ—ಅಲ್ಲ, ಅಲ್ಲ, ಖಂಡಿತವಾಗಿಯೂ ಅಲ್ಲ ! ಶರೀರಕ್ಕೆಲ್ಲಾ ಹೊಟ್ಟೆಯೇ ಎದ್ದು ಕಾಣುತ್ತಿರುವುದು.

ನಿರ್ಮಲೆ—ಮತ್ತೊಂದು ಆನೆಯ ಮೇಲೆ ಕುಳಿತಿರುವವರು ಯಾರೋ ತಿಳಿಯಲಿಲ್ಲ !

ಸುಧಾ—ಯಾರಾದರೂ ಆಗಲಿ, ವರನ ಅಣ್ಣನಲ್ಲವೆಂದು ತೋರುವುದು. ಅವರ ವಯಸ್ಸನ್ನು ನೋಡು, ನಲವತ್ತಕ್ಕೆ ಮೀರಿದಂತಿದೆ.

ನಿರ್ಮಲೆ—ಪಂಡಿತಜೀಯವರು ಈಗ ದ್ವಾರಪೂಜೆಯ* ಕಾರ್ಯದಲ್ಲಿ ತೊಡಗಿರುವರು. ಇಲ್ಲದಿದ್ದರೆ ಅವರನ್ನೇ ಕೇಳುತ್ತಿದ್ದೆ.

ಸಂಯೋಗವಶಾತ್ ನಾಯೀ† ಅಲ್ಲಿಗೆ ಬಂದನು. ಪೆಟ್ಟಿಗೆಯ ಬೀಗದ ಕೈ ನಿರ್ಮಲೆಯ ಬಳಿ ಇತ್ತು. ಸ್ವಲ್ಪ ರೂಪಾಯಿ ಬೇಕಾದ್ದರಿಂದ ತಾಯಿಯು ಹೇಳಿಕಳುಹಿಸಿದ್ದಳು. ಈ ನಾಯಿಯಂದನೂ ಪಂಡಿತ ಮೋಟೆರಾಮರ ಸಂಗಡ ನಿಶ್ಚಿತಾರ್ಥದ ದಿವಸ ಹೋಗಿದ್ದನು.

ನಿರ್ಮಲೆಯು ಕೇಳಿದಳು—ರೂಪಾಯಿ ಈಗಲೇ ಬೇಕೇ ?

ನಾಯೀ—ಹೌದು, ಈಗಲೇ ಬೇಕು ! ಸ್ವಲ್ಪ ಜಾಗ್ರತೆ ತೆಗೆದು ಕೊಡಿ !

ನಿರ್ಮಲೆ—ಆಗಲಿ, ತೆಗೆದುಕೊಡುವೆನು. ಈ ಮೆರವಣಿಗೆಯಲ್ಲಿ ವರನ ಅಣ್ಣನಾರೆಂದು ನೀನು ಗುರ್ತಿಸಬಲ್ಲೆಯಾ ?

ನಾಯೀ—ಗುರ್ತಿಸಲಾರೆನೇಕೆ ? ಅದೋ, ಮುಂದೆಯೇ ಬರುತ್ತಿರುವರು !

ನಿರ್ಮಲೆ - ಎಲ್ಲಿ ? ನನಗೆ ಕಾಣುವುದೇ ಇಲ್ಲ.

ನಾಯೀ—ಅದೋ, ಕುದುರೆಯ ಮೇಲೆ ಬರುತ್ತಿಲ್ಲವೇ ? ಅವರೇ !

ನಿರ್ಮಲೆಯು ಚಕಿತಳಾಗಿ ಕೇಳಿದಳು—ಏನು ಹೇಳುತ್ತಿರುವೆ ? ಕುದುರೆಯ ಮೇಲೆ ಬರುತ್ತಿರುವವರೇ, ವರನ ಅಣ್ಣ ? ಗುರ್ತಿಸಿ ಹೇಳಿದೆಯಾ? ಅಥವಾ ಸುಮ್ಮನೆ ಹೇಳುತ್ತಿರುವೆಯಾ ?

ನಾಯೀ—ಇಲ್ಲ, ಖಂಡಿತವಾಗಿಯೂ ಅವರೇ ! ಇಷ್ಟು ಬೇಗನೆ ಮರೆತುಬಿಡುವೆನೇ ?

---

* ದ್ವಾರಪೂಜೆ = ವರನನ್ನು ಎದುರುಗೊಂಡು ಬಾಗಿಲಲ್ಲಿ ಆರತಿ ಮಾಡಿ ನಂತರ ಮಾಡುವ ಪೂಜೆ.

† ನಾಯೀ = ನಾವಲಿಗ, ಕ್ಷೌರಕರ್ಮ ಮಾಡುವವ. ಉತ್ತರ ಭಾರತದಲ್ಲಿ ವರ ಮತ್ತು ಕನ್ಯೆಯ ಶೋಧ ಮಾಡಿ ವರನ ಹಾಗೂ ಕನ್ಯೆಯ ಪಕ್ಷದವರಿಗೆ ವರ ಮತ್ತು ಕನ್ಯೆಯ ಮನೆತನದ ಪರಿಚಯ ಮಾಡಿಕೊಟ್ಟು ಮದುವೆಯ ಮಾತನ್ನು ಪ್ರಾರಂಭಿಸಲು ಸಂಧಿಯನ್ನು ಕಲ್ಪಿಸಿಕೊಡುವ ಕಾರ್ಯ ನಾವಲಿಗನದು. ಇದು ಉತ್ತರಭಾರತದಲ್ಲಿ ಇರತಕ್ಕ ರೂಢಿ.

ನಿರ್ಮಲೆ—ಅರೆ, ಅವರು ಡಾಕ್ಟರ್‌ಸಾಹೇಬರು! ನಮ್ಮ ಮನೆಯ ಪಕ್ಕದಲ್ಲಿರುವವರು!

ನಾಯೀ—ಹೌದು, ಹೌದು, ಅವರೇ ಡಾಕ್ಟರ್‌ಸಾಹೇಬರು!

ನಿರ್ಮಲೆಯು ಸುಧೆಯ ಕಡೆ ನೋಡಿ—ಕೇಳಿದೆಯಾ ಸುಧಾ, ಇವನ ಮಾತನ್ನು?

ಸುಧೆಯು ನಗುವನ್ನು ತಡೆಯುತ್ತಾ ಹೇಳಿದಳು—ಸುಳ್ಳು ಹೇಳುವನು!

ನಾಯೀ—ಹಾಗೆಯೇ ಆಗಲಿ, ಸುಳ್ಳೆಂದೇ ತಿಳಿದುಕೊಳ್ಳಿ! ನೀವೆಲ್ಲಾ ದೊಡ್ಡವರು. ನಿಮಗೆ ನಾನೇನು ಹೇಳಲಿ? ಇಷ್ಟರಲ್ಲೇ ಪಂಡಿತಜೀಯವರಿಂದ ಹೇಳಿಸುವೆನು. ಆಗ ಒಪ್ಪುವಿರಷ್ಟೆ?

ನಾಯೀ ಬರುವುದು ತಡವಾದುದನ್ನು ಕಂಡು ಮೋಟೂರಾಮರು ತಾವೇ ಒಳಕ್ಕೆ ಬಂದು, ಕೂಗಾಡತೊಡಗಿದರು—ಈ ಮನೆಯ ಮರ್ಯಾದೆಯನ್ನು ಭಗವಂತನೇ ಕಾಪಾಡಬೇಕು! ನಾಯೀಯನ್ನು ಕಳುಹಿಸಿ ಒಂದು ಘಂಟೆಯಾಗುತ್ತಾ ಬಂತು. ಇನ್ನೂ ರೂಪಾಯಿಗಳನ್ನು ತರಲಿಲ್ಲ?

ನಿರ್ಮಲೆ—ಸ್ವಲ್ಪ ಇಲ್ಲಿ ಬನ್ನಿ, ಪಂಡಿತಜೀ! ಎಷ್ಟು ರೂಪಾಯಿಗಳು ಬೇಕು? ತೆಗೆದುಕೊಡುವೆನು.

ಪಂಡಿತಜೀಯವರು ಗೊಣಗುಟ್ಟುತ್ತ, ಮೇಲುಸಿರು ಬಿಡುತ್ತ ನಿರ್ಮಲೆ ಇದ್ದಲ್ಲಿಗೆ ಬಂದರು. 'ಏಕೆ? ಈಗ ಮಾತನಾಡಲು ಸಮಯವಲ್ಲ; ಬೇಗನೇ ರೂಪಾಯಿಗಳನ್ನು ತೆಗೆದುಕೊಡು!' ಎಂದರು.

ನಿರ್ಮಲೆ—ತೆಗೆದು ಕೊಡುತ್ತಿರುವೆನಲ್ಲಾ? ಇನ್ನೆಷ್ಟು ಬೇಗ ತೆಗೆಯಲಿ? ಇದರಲ್ಲಿ ವರನ ಅಣ್ಣನಾರೆಂಬುದನ್ನು ನನಗೆ ತಿಳಿಸಿಬಿಡಿ!

ಪಂಡಿತಜೀ—ರಾಮ–ರಾಮ! ಈ ಮಾತಿಗೋಸ್ಕರ ನನ್ನನ್ನಿಲ್ಲಗೆ ಕರೆದೆಯಾ? ನಾಯೀಗೆ ಗೊತ್ತಿರಲಿಲ್ಲವೇ?

ನಿರ್ಮಲೆ—ಕುದುರೆಯ ಮೇಲೆ ಕುಳಿತಿರುವವರೇ ಅವರೆಂದು ಅವನು ಹೇಳಿದನು.

ಪಂಡಿತಜೀ—ಅವರಲ್ಲದೆ ಮತ್ತಾರು? ಅವರೇ!

ನಾಯೀ—ಅಷ್ಟು ಹೊತ್ತಿನಿಂದ ಹೇಳಿದರೂ ಒಪ್ಪುವುದೇ ಇಲ್ಲ!

ನಿರ್ಮಲೆಯು ಸುಧೆಯ ಕಡೆಗೆ ಸ್ನೇಹ, ಮಮತೆ, ವಿನೋದ ಮತ್ತು ಕೃತ್ರಿಮ ತಿರಸ್ಕಾರದ ದೃಷ್ಟಿಯಿಂದ ನೋಡಿ ನುಡಿದಳು—ಸರಿ, ಹಾಗಿದ್ದರೆ

ಇದುವರೆಗೆ ನೀನೇ ನನ್ನ ಸಂಗಡ ಈ ಬೂಟಾಟಿಕೆಗಳನ್ನೆಲ್ಲಾ ಆಡು ತ್ತಿದ್ದೆಯಾ? ನನಗೆ ಗೊತ್ತಿದ್ದಿದ್ದರೆ ನಿನ್ನನ್ನು ಇಲ್ಲಿಗೆ ಕರೆಸುತ್ತಲೇ ಇರಲಿಲ್ಲ. ಓಹೋಹೋ! ಎಷ್ಟು ಆಳವಾದ ಹೊಟ್ಟೆ ನಿನ್ನದು? ಈಗ ಎಷ್ಟೋ ತಿಂಗಳಿಂದಲೂ ಇದೇ ಬೂಟಾಟಿಕೆಯನ್ನು ನನ್ನ ಹತ್ತಿರ ನಡೆಸಿಕೊಂಡು ಬಂದಿರುವೆ! ಮರೆತು ಸಹ ಈ ವಿಷಯದ ಒಂದು ಮಾತನ್ನೂ ಹೊರಗೆಡವ ಲಿಲ್ಲ. ನಾನಾಗಿದ್ದರೆ ನಾಲ್ಕಾರು ದಿನಗಳಲ್ಲೇ ಎಲ್ಲವನ್ನೂ ಹೇಳಿಬಿಡುತ್ತಿದ್ದೆ!

ಸುಧಾ—ನಿನಗೆ ಈ ವಿಷಯ ಗೊತ್ತಾಗಿಬಿಟ್ಟಿದ್ದರೆ ನೀನು ನಮ್ಮ ಮನೆಗೆ ಏಕೆ ಬರುತ್ತಿದ್ದೆ?

ನಿರ್ಮಲೆ—ಎಂತಹ ಕೆಲಸವಾಯಿತು? ನಾನು ಡಾಕ್ಟರ್‌ಸಾಹೇಬರ ಸಂಗಡ ಎಷ್ಟೋ ಬಾರಿ ಮಾತನಾಡಿಬಿಟ್ಟಿರುವೆನು! ಇದರ ಪಾಪವೆಲ್ಲವೂ ನಿನಗೇ ಸೇರಿದುದು. ನೋಡಿದೆಯಾ, ಕೃಷ್ಣಾ! ನಿನ್ನ ಓರಗಿತ್ತಿಯ ಶರಾ ರತ್ತನ್ನು? ಇವಳು ಬಹಳ ಮಾಯಾವಿನಿ! ಇವಳಿಗೆ ಬಹಳ ಹೆದರಿಕೊಂಡಿರ ಬೇಕು, ತಿಳಿಯಿತೋ?

ಕೃಷ್ಣಾ—ಇಂತಹ ದೇವಿಯ ಚರಣ ತೀರ್ಥವನ್ನು ಕಣ್ಣಿಗೊತ್ತಿ ಕೊಳ್ಳುವೆನು, ಅಕ್ಕ! ಇವರ ದರ್ಶನವನ್ನು ಪಡೆದ ನಾನೇ ಧನ್ಯಳು!

ನಿರ್ಮಲೆ—ಈಗ ಗೊತ್ತಾಯಿತು. ರೂಪಾಯಿಗಳನ್ನೂ ನೀನೇ ಕಳುಹಿ ಸಿರುವೆ. ಅದಕ್ಕೂ ಇಲ್ಲವೆಂದು ತಲೆಯಲ್ಲಾಡಿಸಿದೆಯಾದರೆ, ನಿಜವಾಗಿ ಎರ ಡೇಟು ಕೊಟ್ಟುಬಿಡುವೆನು!

ಸುಧಾ—ತನ್ನ ಮನೆಗೆ ಕರೆದ ಅತಿಥಿಯನ್ನು ಅಪಮಾನ ಮಾಡ ಲಾಗುವುದೇ?

ನಿರ್ಮಲೆ—ಇನ್ನೂ ಏನೇನು ಮಾಡುವೆನೆಂದು ನೋಡುತ್ತಿರು! ನಾನು ಕೇವಲ ಒಂದೆರಡು ಮಾತು ಬರೆದ ಮಾತ್ರಕ್ಕೆ ನೀನು ಅವರ ಸಂಗಡ ಬಂದೇಬಿಟ್ಟೆ. ಭಲಾ! ಅಲ್ಲಿನವರು ಏನೆಂದುಕೊಳ್ಳುವರು?

ಸುಧಾ—ಎಲ್ಲರಿಗೂ ಹೇಳಿಯೇ ಬಂದಿರುವೆನು.

ನಿರ್ಮಲೆ—ಇನ್ನು ನಿಮ್ಮ ಮನೆಗೆ ಎಂದೂ ಬರುವುದಿಲ್ಲ! ಡಾಕ್ಟರ್ ಸಾಹೇಬರ ಸಂಗಡ ಘರದೆ ಇಟ್ಟುಕೊಳ್ಳೆಂದು ಮೊದಲೇ ತಿಳಿಸಿದ್ದರೆ ನಿನ ಗೇನಾಗುತ್ತಿತ್ತು?

ಸುಧಾ—ಅವರು ನೋಡಿದ್ದರಿಂದ ಈಗೇನು ಕೆಡಕಾಯಿತು? ನೋಡ

ದಿದ್ದರೆ ತಮ್ಮ ಅದೃಷ್ಟಕ್ಕಾಗಿ ಅಳುತ್ತಿದ್ದರೆಂತು? ಲೋಭವಶರಾಗಿ ಎಂತಹ ರತ್ನವನ್ನು ಕಳೆದುಕೊಂಡೆನೆಂದು ಹೇಗೆ ತಿಳಿಯುತ್ತಿದ್ದರು? ಈಗ ನಿನ್ನನ್ನು ನೋಡಿ ಕೈ ಕೈ ಹಿಸಿಕಿಕೊಳ್ಳುವರು. ಬಾಯಿಂದೇನೂ ಮಾತನಾಡುವುದಿಲ್ಲ; ಆದರೆ, ಮನಸಿನಲ್ಲೇ ತಮ್ಮ ತಪ್ಪಿಗಾಗಿ ಪಶ್ಚಾತ್ತಾಪಪಡುವರು.

ನಿರ್ಮಲೆ—ಇನ್ನೆಂದೂ ನಿಮ್ಮ ಮನೆಗೆ ಬರುವುದಿಲ್ಲ.

ಸುಧಾ– ಬರದಿದ್ದರೆ ಬಿಡುವವರಾರು? ನಿಮ್ಮ ಮನೆಯ ದಾರಿ ನನ ಗೇನು ಗೊತ್ತಿಲ್ಲವೇ?

ದ್ವಾರಪೂಜೆಯು ಸಮಾಪ್ತವಾಯಿತು. ಅತಿಥಿಗಳು ಜಲಪಾನ ಮಾಡುತ್ತ ಕುಳಿತಿದ್ದರು. ಮುನ್ಷಿಯವರ ಪಕ್ಕಕ್ಕೇ ಡಾಕ್ಟರ್ ಸಿಂಹರೂ ಕುಳಿತಿದ್ದರು. ನಿರ್ಮಲೆಯು ಕೊಠಡಿಯಲ್ಲಿ ನಿಂತು ಪರದೆಯೊಳಗಿನಿಂದ ಅವರನ್ನು ನೋಡು ತ್ತಿದ್ದಳು. ಮತ್ತು ಸ್ತಂಭಿತಳಾದಳು. ಒಬ್ಬರು ಆರೋಗ್ಯ, ಯೌವನ ಮತ್ತು ಪ್ರತಿಭೆಯ ದೇವತೆ! ಮತ್ತೊಬ್ಬರು........? ಈ ವಿಷಯ ಏನೂ ಹೇಳದಿರುವುದೇ ಉಚಿತ.

ನಿರ್ಮಲೆಯು ಡಾಕ್ಟರ್ ಸಾಹೇಬರನ್ನು ನೂರಾರು ಸಲ ನೋಡಿದಳು. ಆದರೆ, ಈ ದಿನ ಅವಳ ಮನಸಿನಲ್ಲಿದ್ದಂತಹ ವಿಚಾರಗಳು ಹಿಂದೆಂದೂ ಎದ್ದಿರಲಿಲ್ಲ. ಅವರನ್ನು ಕರೆಸಿ ಚೆನ್ನಾಗಿ ತಿರಸ್ಕರಿಸಬೇಕು. ಎಂದೆಂದೂ ಮರೆಯಬಾರದಂತೆ ಅಂದು ಅಂದು ಅಳಿಸಬೇಕು–ಎಂದುಕೊಂಡಳು. ಪುನಃ ಸುಮ್ಮನಾದಳು. ಬೀಗರ ಊಟಕ್ಕೆ ಸಿದ್ಧತೆ ನಡೆಯುತ್ತಿತ್ತು. ನಿರ್ಮಲೆಯು ತಟ್ಟೆಗಳನ್ನು ಹಾಕುವ ಕೆಲಸದಲ್ಲಿ ತೊಡಗಿದ್ದಳು ಅಕಸ್ಮಾತ್ ಕೆಲಸದವಳು ಅಲ್ಲಿಗೆ ಬಂದು ಹೇಳಿದಳು—ಸುಧಾದೇವಿಯವರು ನಿಮ್ಮನ್ನು ಕರೆಯುತ್ತಿರು ವರು. ನಿಮ್ಮ ಕೊಠಡಿಯಲ್ಲಿ ಕುಳಿತಿರುವರು.

ನಿರ್ಮಲೆಯು ತಟ್ಟೆಗಳನ್ನು ಅಲ್ಲೇ ಇರಿಸಿ, ಗಾಬರಿಯಿಂದ ಸುಧೆಯ ಬಳಿಗೆ ಓಡಿಹೋದಳು. ಕೊಠಡಿಯೊಳಗೆ ಕಾಲಿಟ್ಟಕೂಡಲೇ ಬೆಚ್ಚಿ ನಿಂತಳು. ಡಾಕ್ಟರ್ ಸಿಂಹರೂ ಎದುರಿಗೆ ನಿಂತಿದ್ದರು.

ಸುಧೆಯು ನಸುನಕ್ಕು ನುಡಿದಳು—ಇದೋ ಕರೆಸಿರುವೆನು, ನಿರ್ಮಲಾ! ಈಗ ಎಷ್ಟು ಬೇಕಾದರೂ ಅನ್ನು! ನಾನು ಬಾಗಿಲಿಗಡ್ಡವಾಗಿ ನಿಂತಿರುವೆನು; ಓಡಿಹೋಗಲಾರರು!

ಡಾಕ್ಟರ್‌ಸಾಹೇಬರು ಗಂಭೀರ ಭಾವದಿಂದ ನುಡಿದರು—ಓಡಿಹೋಗುವವರಾರು ? ಇಲ್ಲೇ ತಲೆ ತಗ್ಗಿಸಿ ನಿಂತಿರುವೆನಲ್ಲಾ !

ನಿರ್ಮಲೆಯು ಕೈಜೋಡಿಸಿ ನುಡಿದಳು—ಇದೇ ರೀತಿ ಕೃಪಾದೃಷ್ಟಿ ಇಟ್ಟಿರಬೇಕು; ಮರೆಯಬಾರದೆಂಬುದೇ ನನ್ನ ಪ್ರಾರ್ಥನೆ !

## ಹದಿನೇಳನೆಯ ಪರಿಚ್ಛೇದ

ಕೃಷ್ಣಳ ವಿವಾಹವಾದ ನಂತರ ಸುಧೆಯು ಹೊರಟುಹೋದಳು; ಆದರೆ ನಿರ್ಮಲೆ ತವರುಮನೆಯಲ್ಲೇ ಉಳಿದಳು. ವಕೀಲಸಾಹೇಬರು ಎಷ್ಟೋ ಪತ್ರ ಬರೆದರು; ಆದರೆ, ಅವಳು ಹೋಗಲಿಲ್ಲ ಅಲ್ಲಿಗೆ ಹೋಗಲು ಅವಳಿಗಿಷ್ಟವೇ ಇರಲಿಲ್ಲ ! ಅವಳನ್ನು ಆಕರ್ಷಿಸುವಂತಹ ಯಾವ ವಸ್ತುವೂ ಅಲ್ಲಿರಲಿಲ್ಲ. ಮಾತೆಯ ಸೇವೆ ಮತ್ತು ತಮ್ಮಂದಿರ ಆಟಪಾಟ ಮುಂತಾದವುಗಳಿಂದ ಅವಳ ದಿನಗಳು ಆನಂದದಿಂದ ಕಳೆಯುತ್ತಿದ್ದವು. ವಕೀಲಸಾಹೇಬರು ತಾವೇ ಬಂದು ಕರೆದುಕೊಂಡು ಹೋಗಿದ್ದರೆ ಬಹುಶಃ ಹೋಗುತ್ತಿದ್ದಳು. ಆದರೆ, ಈ ವಿವಾಹದಲ್ಲಿ ಮೊಹಲ್ಲೆಯ ಅನೇಕ ಸ್ತ್ರೀಯರು ಅವರನ್ನು ಪರಿಹಾಸ್ಯ ಮಾಡಿದ್ದರಿಂದ ಅವರಿಗೆ ಬರಲು ಇಷ್ಟವಿರಲಿಲ್ಲ. ಸುಧೆಯೂ ಎಷ್ಟೋ ಸಲ ಪತ್ರ ಬರೆದಳು; ಆದರೆ ನಿರ್ಮಲೆ ಅವಳಿಗೂ ಏನೇನೋ ನೆಪ ತಿಳಿಸಿದಳು. ಕಡೆಗೊಂದು ದಿನ ಸುಧೆಯು ನೌಕರನನ್ನು ಸಂಗಡ ಕರೆದುಕೊಂಡು ತಾನೇ ಬಂದಳು !

ಸ್ನೇಹಿತೆಯರಿಬ್ಬರೂ ಪರಸ್ಪರ ಆಲಿಂಗಿಸಿಕೊಂಡರು. ನಂತರ ಸುಧೆ ಕೇಳಿದಳು—ಏಕೆ, ನಿರ್ಮಲಾ ! ನಿನಗಲ್ಲಿಗೆ ಬರಲು ಹೆದರಿಕೆಯಾಗುವುದೇ ?

ನಿರ್ಮಲೆ—ಹೌದು, ಸುಧಾ ! ಹೆದರಿಕೆಯಾಗುವುದು. ಮದುವೆಯಾಗಿ ಹೋದ ಮೂರು ವರ್ಷಕ್ಕೆ ಈಗ ಬಂದಿರುವೆನು. ಇನ್ನು ಹೋದೆನಾದರೆ, ಅಲ್ಲೇ ಆಯುಸ್ಸು ಮುಗಿದುಹೋಗುವುದು ! ನಂತರ ಕರೆಯುವವರಾರು ? ಬರುವವರಾರು ?

ಸುಧಾ—ಬರುವುದಕ್ಕೇನು ? ಮನಸು ಬಂದಾಗ ಬಂದುಹೋಗುತ್ತಿರು ! ಅಲ್ಲಿ ವಕೀಲಸಾಹೇಬರು ಬಹಳ ಚಿಂತಿತರಾಗಿರುವರು.

ನಿರ್ಮಲೆ—ಬಹಳ ಚಿಂತಿತರಾಗಿರುವರೇ ? ಬಹುಶಃ ರಾತ್ರಿಯೆಲ್ಲಾ ನಿದ್ದೆ ಮಾಡುತ್ತಿರಲಿಕ್ಕಿಲ್ಲ !

ಸುಧಾ—ನಿರ್ಮಲಾ ! ನಿಜವಾಗಿಯೂ ನಿನ್ನದು ಪಾಷಾಣಹೃದಯ ! ಅವರ ಸ್ಥಿತಿಯನ್ನು ನೋಡಿದರೆ ಕನಿಕರವುಂಟಾಗುವುದು. ಮನೆಯಲ್ಲಿ ಹೇಳಿ ಕೇಳುವವರಾರೂ ಇಲ್ಲ; ಮನಸಿಗೆ ಸಂತೋಷ ಉಂಟುಮಾಡುವ ಮಕ್ಕಳೂ ಇಲ್ಲ—ಎನ್ನುತ್ತಿದ್ದರು. ಬೇರೆ ಮನೆಗೆ ಹೋದಾಗಿನಿಂದ ಬಹಳ ದುಃಖಿತರಾಗಿರುವರು.

ನಿರ್ಮಲೆ—ಭಗವಂತನು ಕೊಟ್ಟಂತೆ ಇಬ್ಬರು ಹುಡುಗರಿರುವರಲ್ಲಾ ?

ಸುಧಾ—ಈಗ ಅವರಿಬ್ಬರೂ ಬಹಳ ದುಷ್ಟರಾಗಿರುವರೆಂದು ಹೇಳುತ್ತಿದ್ದರು. ಜಯರಾಮನಂತೂ ಅವರ ಮಾತನ್ನೇ ಕೇಳುವುದಿಲ್ಲ; ಮನಸಿಗೆ ಬಂದ ಉತ್ತರವನ್ನೇ ಕೊಡುವನು ! ಶ್ರೀರಾಮನಿನ್ನೂ ಚಿಕ್ಕವನು; ಅವನೂ ಅಣ್ಣ ಹೇಳಿದಂತೆಯೇ ಕೇಳುವನು. ಪಾಪ ! ದೊಡ್ಡ ಹುಡುಗನನ್ನು ನೆನೆನೆನೆಸಿಕೊಂಡು ಅಳುವರು !

ನಿರ್ಮಲೆ—ಜಯರಾಮನು ದುಷ್ಟನಾಗಿರಲಿಲ್ಲ; ಈಗೆಲ್ಲಿ ದುಷ್ಟತನ ಕಲಿತ ? ನನ್ನ ಮಾತಿಗೆಂದೂ ಮೀರಿ ನಡೆದವನಲ್ಲ !

ಸುಧಾ—ಅದೇನೋ ಗೊತ್ತಿಲ್ಲ ! ಈಗಂತೂ ತಂದೆಯವರನ್ನೇ ಅನ್ನುವನಂತೆ. 'ಅಣ್ಣನನ್ನು ನೀವೇ ವಿಷಕೊಟ್ಟು ಕೊಂದಿರಿ ! ಕೊಲೆಪಾತಕಿಗಳು'—ಎನ್ನುವನು. ನಿನ್ನನ್ನು ಮದುವೆ ಮಾಡಿಕೊಂಡುದಕ್ಕಾಗಿಯೂ ಎಷ್ಟೋ ಬಾರಿ ಬೈಯುವನು. ಇನ್ನೂ ಏನೇನೋ ಮಾತುಗಳನ್ನಾಡುವನು. ವಕೀಲಸಾಹೇಬರು ಕಣ್ಣೀರು ಹಾಕಿಕೊಳ್ಳುವರು ! ಇಷ್ಟೇ ಏಕೆ ? ಒಂದು ದಿನ ಅವರನ್ನು ಕಲ್ಲಿನಿಂದ ಹೊಡೆಯಹೋಗಿದ್ದ !

ನಿರ್ಮಲೆಯು ಗಂಭೀರ ಚಿಂತೆಯಿಂದ ನುಡಿದಳು—ಈ ಹುಡುಗನು ಹೀಗೇಕಾದ ? ಅವನ ಅಣ್ಣನಿಗೆ ತಂದೆಯವರು ವಿಷ ಕೊಟ್ಟರೆಂದು ಅವನಿಗಾರು ಹೇಳಿದರು ?

ಸುಧಾ—ನೀನಿದ್ದರೆ ಅವನು ಸರಿಹೋಗುವನು !

ನಿರ್ಮಲೆಗೆ ಇದೊಂದು ಹೊಸ ಚಿಂತೆಯುಂಟಾಯಿತು. 'ತಂದೆಯವರ ಸಂಗಡಲೇ ಜಗಳವಾಡುವವನು ನನಗೆ ಹೆದರುವನೇ ?'—ಎಂದುಕೊಂಡು ರಾತ್ರಿಯೆಲ್ಲಾ ಚಿಂತಿಸತೊಡಗಿದಳು. ಈ ದಿನ ಅವಳಿಗೆ ಬಹಳವಾಗಿ ಮಾನಸರಾಮನ ಜ್ಞಾಪಕ ಬಂತು. 'ತಂದೆ ಇರುವಾಗಲೇ ಹುಡುಗರು ಈ

ಗತಿಯಾದರೆ ಅವರ ನಂತರ ಇವರನ್ನು ಹೇಗೆ ನಿರ್ವಹಿಸುವುದು? ಮ
ಯಂತೂ ಕೈಬಿಟ್ಟು ಹೋಯಿತು. ಸಾಲಗಳೂ ಸ್ವಲ್ಪ ಇರಬಹುದು. ವ
ಮಾನ ನೋಡಿದರೆ ಈ ರೀತಿ ಇದೆ. ಭಗವಂತನೇ ಪಾರುಗಾಣಿಸಬೇಕು'-
ಎಂದುಕೊಂಡಳು. ಇಂದು ಮೊದಲನೆಯ ಬಾರಿ ಅವಳಿಗೆ ತನ್ನ ಹೆಣ್ಣು
ಕೂಸಿನ ಚಿಂತೆಯುಂಟಾಯಿತು 'ಇವಳ ಗತಿ ಮುಂದೇನಾಗುವುದೋ'
ಭಗವಂತನು ನನಗೀ ಕಷ್ಟ ತಂದೊಡ್ಡಿದ! ನನ್ನ ಹೊಟ್ಟೆಯಲ್ಲಿ ಹುಟ್ಟು
ಬದಲು ಬೇರೆ ಭಾಗ್ಯವಂತರ ಮನೆಯಲ್ಲಿ ಜನ್ಮ ತಾಳಿದ್ದರೆ?'—ಎಂದ
ಕೊಳ್ಳುತ್ತ ಹತ್ತಿರ ಮಲಗಿದ್ದ ಮಗುವನ್ನು ಎದೆಗಪ್ಪಿಕೊಂಡಳು.

ನಿರ್ಮಲೆಯ ಮಂಚದ ಪಕ್ಕಕ್ಕೇ ಸುಧೆಯ ಮಂಚವೂ ಇತ್ತು
ನಿರ್ಮಲೆಯು ಚಿಂತಾಸಾಗರದಲ್ಲಿ ಮುಳುಗಿ ತೇಲುತ್ತಿದ್ದಳು. ಸುಧೆಯು ಸು
ನಿದ್ರೆಯ ಆನಂದವನ್ನು ಸವಿಯುತ್ತಿದ್ದಳು ಬಾಲಕನ ಯೋಚನೆ ಅವಳನ್ನು
ಬಾಧಿಸುತ್ತಿತ್ತೇ? ಇಲ್ಲ! ಸುಧೆಯು ಯಾವ ಚಿಂತೆಯನ್ನೂ ಇಟ್ಟುಕೊಳ್ಳು
ಸ್ವಭಾವದವಳಲ್ಲ; ಭವಿಷ್ಯದ ಯೋಚನೆಯಿಂದ ಅವಳು ಕೊರಗುತ್ತಿರಲಿಲ್ಲ

ಅಕಸ್ಮಾತ್ ಸುಧೆಗೆ ಎಚ್ಚರಿಕೆಯಾಯಿತು. ನಿರ್ಮಲೆ ಇನ್ನೂ ಎಚ್ಚೆ
ತ್ತಿರುವುದನ್ನು ಕಂಡು ಕೇಳಿದಳು—ಏಕೆ, ನಿರ್ಮಲಾ! ಇನ್ನೂ ನಿದ್ದೆ ಮಾಡ
ಲಿಲ್ಲವೇ?

ನಿರ್ಮಲೆ—ನಿದ್ದೆಯೇ ಬರುವುದಿಲ್ಲ.

ಸುಧಾ—ಕಣ್ಣು ಮುಚ್ಚಿಕೊಂಡರೆ ತಾನಾಗಿಯೇ ನಿದ್ದೆ ಬರುವುದು
ನನಗಂತೂ ಮಂಚದ ಮೇಲೆ ಮಲಗಿದ ತಕ್ಷಣವೇ ನಿದ್ದೆ ಬರುವುದು. ಅವರ
ಎಚ್ಚರಿಸಿದರೂ ಗೊತ್ತಾಗುವುದಿಲ್ಲ. ನನಗೇಕೆ ಇಷ್ಟು ನಿದ್ದೆಯೋ ಕಾಣೆ
ಬಹುಶಃ ಯಾವುದೋ ರೋಗವಿರಬಹುದು!

ನಿರ್ಮಲೆ—ಹೌದು, ಭಾರಿಯ ರೋಗ! ಇದನ್ನು ರಾಜರೋಗವೆಂದು
ಹೇಳುವರು. ಡಾಕ್ಟರ್ ಸಾಹೇಬರಿಗೆ ಹೇಳು. ಔಷಧಿ ಕೊಡುವರು!

ಸುಧಾ—ಸರಿಯೆ! ಎಚ್ಚರದಿಂದಿದ್ದಾದರೂ ಏನು ಯೋಚಿಸಲಿ?
ಒಮ್ಮೊಮ್ಮೆ ತವರುಮನೆಯ ನೆನಪುಂಟಾಗುವುದು. ಅಂದು ಮಾತ್ರ ಸ್ವಲ್ಪ
ಹೊತ್ತಿನ ಮೇಲೆ ನಿದ್ದೆ ಬರುವುದು.

ನಿರ್ಮಲೆ—ಡಾಕ್ಟರ್‌ಸಾಹೇಬರ ಜ್ಞಾಪಕ ಬರುವುದಿಲ್ಲವೇ?

ಸುಧಾ—ಇಲ್ಲ, ಇಲ್ಲ. ಅವರ ನೆನಪೇಕೆ ಬರುವುದು? ಟೆನ್ನಿಸ್ ಆಡಿ ಕೊಂಡು ಬಂದು, ಊಟಮಾಡಿ, ಆರಾಮದಿಂದ ಮಲಗಿರುವರೆಂದು ನನಗೆ ಗೊತ್ತು!

ನಿರ್ಮಲೆ—ಅದೋ, ಸೋಹನನು ಎದ್ದುಬಿಟ್ಟನು. ಭಲಾ! ನೀನು ಎದ್ದ ಬಳಿಕ ಅವನು ಏಕೆ ಮಲಗಿರುವನು?

ಸುಧಾ—ಹೌದು, ನಿರ್ಮಲಾ! ಬಹಳ ವಿಚಿತ್ರ ಸ್ವಭಾವ ಇವನದು. ನನ್ನ ಸಂಗಡ ಮಲಗುವನು; ನನ್ನ ಸಂಗಡಲೇ ಎಚ್ಚರಗೊಳ್ಳುವನು. ಹಿಂದಿನ ಜನ್ಮದಲ್ಲಿ ಬಹುಶಃ ಒಬ್ಬ ತಪಸ್ವಿಯಾಗಿದ್ದಿರಬಹುದು! ಇವನ ಹಣೆಯ ಮೇಲೆ ನೋಡು, ತಿಲಕದ ಗುರ್ತು ಹೇಗಿದೆ? ತೋಳುಗಳ ಮೇಲೂ ಇದೇ ರೀತಿಯ ಗುರ್ತಿದೆ. ಖಂಡಿತ ತಪಸ್ವಿಯೇ ಇದ್ದಿರಬೇಕು!

ನಿರ್ಮಲೆ—ತಪಸ್ವಿಗಳು ಚಂದನ ತಿಲಕವನ್ನು ಹಚ್ಚಿಕೊಳ್ಳುವುದಿಲ್ಲ. ಹಿಂದಿನ ಜನ್ಮದಲ್ಲಿ ಇವನು ಒಬ್ಬ ಧೂರ್ತ ಪೂಜಾರಿಯಾಗಿದ್ದಿರಬೇಕು! ಅಲ್ಲವೇನೋ, ನೀನೆಲ್ಲಿ ಪೂಜಾರಿಯಾಗಿದ್ದೆ ಹೇಳು?

ಸುಧಾ—ನಿನ್ನ ಮಗಳನ್ನು ಇವನಿಗೆ ಮದುವೆ ಮಾಡಿಕೊಳ್ಳುವೆನು.

ನಿರ್ಮಲೆ—ಸುಮ್ಮನಿರು ಸುಧಾ! ತಮಾಷೆ ಮಾಡಬೇಡ. ಇದೆಲ್ಲಾದರೂ ಸಾಧ್ಯವೇ?

ಸುಧಾ—ಯಾರೇನಂದರೂ ಚಿಂತೆಯಿಲ್ಲ; ನಾನೇನೋ ಮಾಡಿಕೊಳ್ಳುವೆನು! ಇಷ್ಟು ಸುಂದರ ಸೊಸೆ ನನಗೆ ಮತ್ತೆಲ್ಲಿ ಸಿಗುವಳು? ಇವನ ಮೈ ಬೆಚ್ಚಗಿದೆಯೋ ಸ್ವಲ್ಪ ನೋಡು, ನಿರ್ಮಲಾ! ಅಥವಾ ನನ್ನ ಕೈಗೇ ಬಿಸಿಯಾಗಿ ತೋರುತ್ತಿದೆಯೋ?

ನಿರ್ಮಲೆಯು ಸೋಹನನ ಹಣೆಯನ್ನು ಮುಟ್ಟಿ ನೋಡಿ 'ಹೌದು, ಹೌದು! ಮೈ ಬಿಸಿಯಾಗಿದೆ. ಈ ಜ್ವರ ಇವನಿಗೆ ಯಾವಾಗ ಬಂತು? ಹಾಲು ಕುಡಿಯುವನಷ್ಟೇ?

ಸುಧಾ—ಮಲಗಿಕೊಂಡಾಗ ಮೈ ತಣ್ಣಗೇ ಇತ್ತು. ಬಹುಶಃ ಶೀತವಾಗಿರಬಹುದು! ಬೆಚ್ಚಗೆ ಹೊದ್ದಿಸಿ ಮಲಗಿಸುವೆನು; ಬೆಳಗಿನ ಹೊತ್ತಿಗೆ ಹುಷಾರಾಗುವನು!

ಬೆಳಗಾಯಿತು. ಸೋಹನನ ಜ್ವರ ಇಳಿಯಲಿಲ್ಲ; ಮತ್ತಷ್ಟು

ಹೆಚ್ಚಾಯಿತು! ಮೂಗಿನಲ್ಲಿ ಹರಿಯತೊಡಗಿತು. ಕಣ್ಣುಗಳು ನೆಟ್ಟಂತಾದವು. ಕುತ್ತಿಗೆ ಕೆಳಗೆ ಬಿತ್ತು. ಕೈಕಾಲುಗಳನ್ನು ಅಲ್ಲಾಡಿಸುತ್ತಿರಲಿಲ್ಲ, ನಕ್ಕು ನೋಡುತ್ತಿರಲಿಲ್ಲ; ಸುಮ್ಮನೆ ಬಿದ್ದಿದ್ದನು. ಈ ಹೊತ್ತಿನಲ್ಲಿ ಅವನಿಗೆ ಯಾರು ಮಾತನಾಡಿದರೂ ಬೇಡವೆಂದೆನಿಸಿತ್ತು. ಸ್ವಲ್ಪ ಸ್ವಲ್ಪ ಕೆಮ್ಮಲೂ ಇತ್ತು. ಸುಧೆಯು ಗಾಬರಿಗೊಂಡಳು. ಡಾಕ್ಟರ್‌ಸಾಹೇಬರನ್ನು ಕರೆಸಿಬಿಡುವುದೇ ಉತ್ತಮವೆಂದು ನಿರ್ಮಲೆಯೂ ಅಭಿಪ್ರಾಯಪಟ್ಟಳು. ಆದರೆ ನಿರ್ಮಲೆಯ ತಾಯಿ ಹೇಳಿದಳು—ಇಷ್ಟಕ್ಕೆಲ್ಲಾ ಡಾಕ್ಟರು-ಹಕೀಮರೇಕೆ? ಇದೋ, ಸ್ಪಷ್ಟವಾಗಿ ಕಾಣುತ್ತಿದೆಯಲ್ಲಾ? ಮಗುವಿಗೆ ದೃಷ್ಟಿಯಾಗಿದೆ!

ಸುಧಾ—ಅಮ್ಮಾ, ಇಲ್ಲಿ ದೃಷ್ಟಿ ಹಾಕುವವರಾರು? ಮಗುವನ್ನು ಹೊರಗೆ ಸಹ ಕರೆದುಕೊಂಡು ಹೋಗಿಲ್ಲ!

ಮಾತೆ—ಹೊರಗೆ ಕರೆದುಕೊಂಡು ಹೋದ ಮಾತ್ರಕ್ಕೇ ದೃಷ್ಟಿಯಾಗುವುದಿಲ್ಲ! ಕೆಲಕೆಲವರ ದೃಷ್ಟಿಯೇ ಕೆಟ್ಟದ್ದು! ಅದು ಒಮ್ಮೊಮ್ಮೆ ತಾಕುವುದು, ಒಂದೊಂದು ಸಲ ತಾಯಿತಂದೆಗಳ ದೃಷ್ಟಿಯೇ ತಗಲುವುದು. ಬಂದಾಗಿನಿಂದ ಒಂದು ಸಲವೂ ಅಳಲಿಲ್ಲ. ಚೊಚ್ಚಲು ಮಕ್ಕಳಿಗೆ ಸಾಮಾನ್ಯವಾಗಿ ಹೀಗೆಯೇ ಆಗುವುದು. ಕಣ್ಣುಗಳು ಹೇಗೆ ನೆಟ್ಟಂತಿವೆ ನೋಡು? ದೃಷ್ಟಿಯಾಗಿದೆ ಎಂಬುದಕ್ಕೆ ಇದೇ ಗುರ್ತು!

ಮನೆಗೆಲಸದ ಮುದುಕಿಯೂ ಪಕ್ಕದ ಮನೆಯವರೂ ಇದೇ ಅಭಿಪ್ರಾಯಪಟ್ಟರು. ಮಂತ್ರವಾದಿಯುನ್ನು ಕರೆಸಲಾಯಿತು. ಅವನು ಒಮ್ಮೆ ದೃಷ್ಟಿ ತೆಗೆದು ಹಾಕಿ ಮತ್ತೆ ಸಾಯಂಕಾಲ ಬರುವೆನೆಂದು ಹೇಳಿ ಹೊರಟು ಹೋದನು. ಮಧ್ಯಾಹ್ನದ ಹೊತ್ತಿಗೆ ಮಗುವಿನ ಸ್ಥಿತಿ ಮತ್ತಷ್ಟು ಕೆಟ್ಟಿತು. ಕೆಮ್ಮಲು ಬಹಳ ಜೋರಾಯಿತು. ಸಾಯಂಕಾಲ ಮಂತ್ರವಾದಿಯು ಬಂದು ಮತ್ತೊಮ್ಮೆ ದೃಷ್ಟಿ ತೆಗೆದುಹಾಕಿದನು. ಆದರೆ ಏನೂ ಪ್ರಯೋಜನವಾಗಲಿಲ್ಲ. ಸೋಹನನು ರಾತ್ರಿಯೆಲ್ಲಾ ನಿದ್ದೆ ಮಾಡಲಿಲ್ಲ. ಕೆಮ್ಮುತ್ತಲೇ ಇದ್ದನು. ಎಷ್ಟೋ ಸಲ ಉಸಿರು ಸಿಕ್ಕಿಕೊಂಡಂತಾಗುತ್ತಿತ್ತು. ಸುಧೆಯೂ ನಿರ್ಮಲೆಯೂ ರಾತ್ರಿಯೆಲ್ಲಾ ಕುಳಿತುಕೊಂಡೇ ಇದ್ದರು. ಬೆಳಗಾಯಿತು. ಮಂತ್ರವಾದಿಯು ದೃಷ್ಟಿ ತೆಗೆಯಲಿಲ್ಲ; ಆದ್ದರಿಂದ ಮೌಲವಿಯ ಹತ್ತಿರ ಮಂತ್ರ ಹಾಕಿಸೋಣವೆಂದು ಮಾತೆ ಹೇಳಿದಳು. ಆದ್ದರಿಂದ ಸುಧೆಯು ಈಗಲೂ ತನ್ನ ಪತಿಗೆ

ವಿಷಯವನ್ನು ತಿಳಿಸಲಾಗಲಿಲ್ಲ ಸೋಹನನನ್ನು ಮಸೀದಿಗೆ ಕರೆದುಕೊಂಡು ಹೋಗಿ ಮಂತ್ರ ಹಾಕಿಸಲಾಯಿತು. ಸಂಜೆಗೆ ಮತ್ತೊಮ್ಮೆ ಮಂತ್ರ ಹಾಕಿಸಿದರು. ಆದರೂ ಸೋಹನನಿಗೆ ಗುಣವಾಗಲಿಲ್ಲ! ರಾತ್ರಿಯಾಯಿತು. ಈ ರಾತ್ರಿಯು ಕುಶಲದಿಂದ ಕಳೆದರೆ ಪ್ರಾತಃಕಾಲವೇ ಪತಿಗೆ ಟೆಲಿಗ್ರಾಂ ಕೊಡುವೆನು'– ಎಂದುಕೊಂಡಳು ಸುಧೆ.

ಆದರೆ ರಾತ್ರಿಯು ಕುಶಲದಿಂದ ಕಳೆಯಲಿಲ್ಲ. ಅರ್ಧ ರಾತ್ರಿಯಾಗುತ್ತಿದ್ದಂತೆಯೇ ಮಗುವಿನ ಪ್ರಾಣಪಕ್ಷಿ ಹಾರಿಹೋಯಿತು! ಸುಧೆಯ ಜೀವನ ಸಂಪತ್ತು ಅವಳ ಕೈಯಿಂದ ಕಿತ್ತುಕೊಳ್ಳಲ್ಪಟ್ಟಿತು!

ಮನೆಯ ಮಂದಿ ಎಲ್ಲರೂ ಮಗುವಿನ ಮೃತ್ಯುವಿಗಾಗಿ ಬಹಳ ವ್ಯಸನಪಟ್ಟರು. ಸುಧೆಗೆ ಪ್ರಾಪ್ತವಾದ ಈ ದುಃಖಕ್ಕಾಗಿ ನಿರ್ಮಲೆಯು ಮಾತೆಯು ಬಹಳ ಕೊರಗಿದಳು ಪ್ರತಿಯೊಬ್ಬರೂ ಸುಧೆಗೆ ಸಮಾಧಾನ ಹೇಳುತ್ತಿದ್ದರು. ಆದರೆ, ಅವಳ ಕಣ್ಣೀರು ಕಡಿಮೆಯಾಗಲಿಲ್ಲ! ಪತಿಗೆ ಯಾವ ರೀತಿ ಮುಖ ತೋರಿಸಲಿ? ಸಮಾಚಾರವನ್ನು ಸಹ ತಿಳಿಸಲಿಲ್ಲ! ಎಂಬುದೇ ಅವಳಿಗೆ ಎಲ್ಲಕ್ಕಿಂತ ಮಿಗಿಲಾದ ದುಃಖವಾಗಿತ್ತು.

ರಾತ್ರಿಯೇ ಟೆಲಿಗ್ರಾಂ ಕೊಡಲಾಯಿತು ಮರುದಿನ ಬೆಳಿಗ್ಗೆ ಒಂಭತ್ತು ಘಂಟೆಗೆ ಡಾಕ್ಟರ್‌ಸಾಹೇಬರು ಮೋಟಾರಿನಲ್ಲಿ ಅಲ್ಲಿಗೆ ಬಂದರು ಸುಧೆಗೆ ಅವರು ಬಂದ ಸಮಾಚಾರ ತಿಳಿಯಲಾಗಿ, ಮತ್ತಷ್ಟು ಬಿಕ್ಕಿ--ಬಿಕ್ಕಿ ಅಳತೊಡಗಿದಳು ಬಾಲಕನ ಅಂತ್ಯ–ಕ್ರಿಯೆಗಳು ನಡೆದವು. ಡಾಕ್ಟರ್‌ಸಾಹೇಬರು ಅನೇಕ ಸಲ ಒಳಗಡೆ ಬಂದರು; ಆದರೆ ಸುಧೆ ಅವರ ಬಳಿ ಹೋಗಲಿಲ್ಲ! ಪಾಪ, ಅವರ ಬಳಿ ಹೇಗೆ ಹೋಗುವಳು? ತನ್ನ ಜೀವನರತ್ನವನ್ನು ಕಳೆದುಕೊಂಡು, ಯಾವ ರೀತಿ ಅವರಿಗೆ ಮುಖ ತೋರುವಳು? ಅವರ ಬಳಿ ಹೋಗಲು ಅವಳ ಎದೆಯೊಡೆದು ಚೂರುಚೂರಾಗುತ್ತಿತ್ತು! ತಾಯಿಯ ಉಡಿಯಲ್ಲಿ ಕುಳಿತಿರುತ್ತಿದ್ದ ಸೋಹನನು ತಂದೆಯನ್ನು ಕಂಡೊಡನೆಯೇ ಅವರ ಉಡಿಗೆ ಓಡಿಹೋಗಿ ಅವರನ್ನಪ್ಪಿಕೊಳ್ಳುತ್ತಿದ್ದ. ನಂತರ ತಾಯಿ ಎಷ್ಟು ಮುದ್ದು ಮಾಡಿ ಕರೆದರೂ ತರಿದೆಯ ಉಡಿಯನ್ನು ಬಿಟ್ಟು ಬರುತ್ತಿರಲಿಲ್ಲ. ಹಾ! ಇಂದು ಅವಳು ಯಾರನ್ನು ಉಡಿಯಲ್ಲೆತ್ತಿಕೊಂಡು ಪತಿಯ ಬಳಿ ಹೋಗುವಳು? ಪತಿಯ ಬಳಿ ಈ ಮುಖವನ್ನಿಟ್ಟುಕೊಂಡು ಹೋಗುವುದಕ್ಕಿಂತ, ಸಾಯುವುದೇ

ಸಹಸ್ರ ಪಾಲು ಸುಲಭವೆಂದು ಅವಳಿಗೆನಿಸಿತು. ಅವಳು ನಿರ್ಮಲೆಯನ್ನು ಎಡೆಬಿಡದೆ ಅವಳ ಹಿಂದೆ-ಹಿಂದೆಯೇ ಇರುತ್ತಿದ್ದಳು; ಮತ್ತು ಪತಿಯಿಂದ ತಪ್ಪಿಸಿಕೊಳ್ಳುತ್ತಿದ್ದಳು.

ನಿರ್ಮಲೆಯು ಹೇಳಿದಳು—ಸುಧಾ! ಆದದ್ದು ಆಗಿಹೋಯಿತು! ಅದಕ್ಕಾಗಿ ಅವರಿಂದ ಎಷ್ಟು ಹೊತ್ತು ತಪ್ಪಿಸಿಕೊಂಡಿರುವೆ? ರಾತ್ರಿಗೇ ಊರಿಗೆ ಹಿಂತಿರುಗುವರೆಂದು ಅಮ್ಮ ಹೇಳಿದಳು!

ಸುಧೆಯು ಸಜಲ ನೇತ್ರಗಳಿಂದ ನಿರ್ಮಲೆಯನ್ನು ನೋಡಿ ನುಡಿದಳು—ಯಾವ ಮುಖವನ್ನಿಟ್ಟುಕೊಂಡು ಅವರ ಬಳಿ ಹೋಗಲಿ? ಅವರ ಮುಂದೆ ಹೋದೊಡನೆಯೇ ಕೈಕಾಲುಗಳು ನಡುಗಿ, ಎಲ್ಲಿ ಬಿದ್ದುಬಿಡುವೆನೋ ಎಂದು ಹೆದರಿಕೆಯಾಗುತ್ತಿದೆ!

ನಿರ್ಮಲೆ—ನಡೆ, ನಾನು ನಿನ್ನ ಸಂಗಡ ಬರುವೆನು!

ಸುಧಾ—ನನ್ನನ್ನು ಅಲ್ಲಿ ಬಿಟ್ಟು ಓಡಿ ಹೋಗುವದಿಲ್ಲವಷ್ಟೆ?

ನಿರ್ಮಲೆ—ಇಲ್ಲ, ಇಲ್ಲ; ಓಡಿ ಹೋಗುವುದಿಲ್ಲ.

ಸುಧಾ—ನನಗೆ ಈಗಿನಿಂದಲೇ ದುಃಖ ಉಕ್ಕಿ ಬರುತ್ತಿದೆ! ಇಂತಹ ಘೋರ ವಜ್ರಪಾತವಾದರೂ ನಾನಿನ್ನೂ ಬದುಕಿರುವೆನಲ್ಲಾ? ಹಾ! ಸೋಹನನನ್ನು ಅವರೆಷ್ಟು ಪ್ರೀತಿಸುತ್ತಿದ್ದರು, ನಿರ್ಮಲಾ? ಅವರ ಮನಸಿಗೆಷ್ಟು ದುಃಖವುಂಟಾಗಿರುವುದೋ? ನಾನೇ ಅಳುತ್ತಿದ್ದರೆ, ಅವರಿಗೇನು ಸಮಾಧಾನ ಹೇಳಲಿ? ಅದೇಕೆ, ರಾತ್ರಿಯೇ ಹೊರಟು ಹೋಗುವರಂತೇ?

ನಿರ್ಮಲೆ—ಹೌದು, ಅಮ್ಮ ಹಾಗೆಂದು ಹೇಳುತ್ತಿದ್ದಳು. ರಜಾ ತೆಗೆದು ಕೊಂಡು ಬಂದಿಲ್ಲವಂತೆ!

ಸ್ನೇಹಿತೆಯರಿಬ್ಬರೂ ಗಂಡಸರ ಕೊಠಡಿಯ ಕಡೆ ಹೊರಟರು. ಕೊಠಡಿಯ ಬಾಗಿಲ ಬಳಿ ಬಂದೊಡನೆಯೇ ಸುಧೆಯು ನಿರ್ಮಲೆಯನ್ನು ಕಳುಹಿಸಿಬಿಟ್ಟು ತಾನೊಬ್ಬಳೇ ಕೊಠಡಿಯೊಳಕ್ಕೆ ಹೋದಳು.

ಸುಧೆ ಎಷ್ಟು ಚಿಂತಿಸುತ್ತಿರುವಳೋ, ಎಂತಿರುವಳೋ? ಎಂದು ಡಾಕ್ಟರ್‌ಸಾಹೇಬರು ಗಾಬರಿಗೊಳ್ಳುತ್ತಿದ್ದರು. ವಿಧ-ವಿಧವಾದ ಯೋಚನೆಗಳು ಮನಸಿಗುಂಟಾಗುತ್ತಿದ್ದವು. ಹೊರಡಲು ಸಿದ್ಧರಾಗಿದ್ದರು; ಆದರೆ ಮನಸಾಗುತ್ತಿರಲಿಲ್ಲ. ಮನಸಿನಲ್ಲೇ ಮರುಗುತ್ತಿದ್ದರು—ಹಾ, ಭಗವಂತಾ!

ಇಷ್ಟು ಜಾಗ್ರತೆ ಕಿತ್ತುಕೊಳ್ಳುವುದಕ್ಕಾಗಿ ಈ ಪದಾರ್ಥವನ್ನು ಕೊಟ್ಟೆಯಾ ? ನಾನು ಸಂತಾನಕ್ಕಾಗಿ ನಿನ್ನನ್ನೆಂದೂ ಪ್ರಾರ್ಥಿಸಲಿಲ್ಲ. ಆಜನ್ಮ ನಿಸ್ಸಂತಾನನಾಗಿಯೇ ಇರುತ್ತಿದ್ದೆ. ಆದರೆ ಸಂತಾನವನ್ನು ಹೊಂದಿ, ನಂತರ ವಂಚಿತನಾಗುವುದನ್ನು ಸಹಿಸಲಾರೆ. ಆಹಾ ! ಮಾನವನು ಭಗವಂತನ ಆಟದ ಗೊಂಬೆಯೇ ? ಇದೇ ಮಾನವಜೀವನದ ಮಹತ್ವವೇ ? ಈ ಜೀವನವು ಕೇವಲ ಮಕ್ಕಳು ಕಟ್ಟುವ ಮಣ್ಣು ಮನೆಯಂತೆ ! ಅವರಿಗೂ ಸಹ ತಾವು ಕಟ್ಟಿದ ಮನೆ ಎಂದರೆ, ತಮ್ಮ ಕಾಗದದ ಡೋಣಿ ಎಂದರೆ, ತಮ್ಮ ಆಟದ ಕುದುರೆ ಎಂದರೆ ಎಷ್ಟೋ ಮಮತೆ ! ಒಳ್ಳೆಯ ಆಟದ ಸಾಮಾನುಗಳನ್ನು ಅವರು ಪ್ರಾಣಕ್ಕಿಂತ ಪ್ರೀತಿಯಿಂದ ಕಾಪಾಡುವರು ! ಹೀಗಿರುವಲ್ಲಿ ಭಗವಂತನು ಬಾಲಕನೇ ಆದರೆ, ನಿಜವಾಗಿಯೂ ವಿಚಿತ್ರ ಬಾಲಕನೇ ಹೌದು ! ಕೊಟ್ಟ ಬಾಲಕನನ್ನು ಇದ್ದಕ್ಕಿದ್ದಂತೆ ಕಿತ್ತುಕೊಳ್ಳುವುದೂ ಅವನದೊಂದು ಆಟವೇ ? ಇಂತಹ ಪೈಶಾಚಿಕ ಕೃತ್ಯವನ್ನವನು ಮಾಡಬಹುದೇ ? ಎಂದು ಮುಂತಾಗಿ ಯೋಚಿಸುತ್ತಿದ್ದರು.

ಅಷ್ಟರಲ್ಲಿ ಸುಧೆಯು ಶಬ್ದ ಮಾಡದೆ ಕೊಠಡಿಯನ್ನು ಪ್ರವೇಶಿಸಿದಳು. ಡಾಕ್ಟರ್‌ಸಾಹೇಬರು ಎದ್ದು ನಿಂತು, ಅವಳ ಬಳಿ ಬಂದು ಹೇಳಿದರು—ಇಷ್ಟು ಹೊತ್ತು ಎಲ್ಲಿದ್ದೆ, ಸುಧಾ ? ನಾನು ನಿನ್ನ ಹಾದಿಯನ್ನೇ ಕಾಯುತ್ತಿದ್ದೆ !

ಸುಧೆಯ ಕಣ್ಣಾಲೆಗಳು ನೀರಿನಲ್ಲಿ ತೇಲತೊಡಗಿದವು. ಪತಿಯ ಕುತ್ತಿಗೆಯ ಸುತ್ತ ತನ್ನ ಬಾಹುಗಳನ್ನು ಹಾಕಿ, ಅವರ ಹೃದಯದ ಮೇಲೆ ತಲೆಯನ್ನಿಟ್ಟು ಅಳತೊಡಗಿದಳು ಆದರೆ, ಈ ಅಶ್ರು-ಪ್ರವಾಹದಲ್ಲಿ ಅವಳಿಗೆ ಅಪಾರ ಧೈರ್ಯ ಮತ್ತು ಸಾಂತ್ವನೆಯ ಅನುಭವವಾಗುತ್ತಿತ್ತು. ಪತಿಯ ವಕ್ಷಸ್ಥಲವನ್ನಪ್ಪಿಕೊಂಡಿದ್ದರಿಂದ ಅವಳ ಹೃದಯದಲ್ಲಿ ಒಂದು ವಿಚಿತ್ರ ಸ್ಫೂರ್ತಿ ಮತ್ತು ಬಲದ ಸಂಚಾರವಾಯಿತು !

ಡಾಕ್ಟರ್‌ಸಾಹೇಬರು ಪತ್ನಿಯ ಅಶ್ರುಪೂರ್ಣ ಕಪೋಲಗಳನ್ನು ತಮ್ಮ ಎರಡು ಕೈಗಳಿಂದಲೂ ಹಿಡಿದು ಹೇಳಿದರು—ಸುಧಾ, ಏಕಿಷ್ಟು ಚಿಂತಿಸುವೇ ? ಸೋಹನನು ತನ್ನ ಜೀವನದಲ್ಲಿ ಮಾಡಬೇಕಾದ ಕೆಲಸವನ್ನು ಮಾಡಿ ನಡೆದನು ! ವೃಕ್ಷವು ಜಲ ಮತ್ತು ಪ್ರಕಾಶದಿಂದ ಬೆಳೆದು ದೊಡ್ಡದಾಗುವುದು. ಆದರೆ ಪವನನ ಪ್ರಬಲ ಅಲೆಗಳಿಂದ ಸುದೃಢವಾಗುವಂತೆ ಪ್ರಣಯವೂ

ದುಃಖದ ಆಘಾತದಿಂದಲೇ ವಿಕಸಿತವಾಗುವುದು. ಮನುಷ್ಯನು ಸಂತೋಷ ದಲ್ಲಿರುವಾಗ ಅವನೊಡನೆ ಭಾಗವಹಿಸಲು ಬೇಕಾದಷ್ಟು ಮಂದಿ ಸಿಗುವರು. ಆದರೆ ಅವನ ದುಃಖದಲ್ಲಿ ಭಾಗವಹಿಸುವವನೇ ನಿಜವಾದ ಮಿತ್ರ! ಪ್ರೇಮಿ ಗಳ ವಿಷಯವೂ ಅಂತೆಯೇ! ಸೋಹನನ ಮೃತ್ಯುವು ಇಂದು ನಮ್ಮ ದ್ವೈತ ವನ್ನು ದೂರಮಾಡಿತು. ಇಂದೇ ನಾವು ನಮ್ಮ ನಿಜವಾದ ಸ್ವರೂಪವನ್ನು ಕಂಡೆವು!

ಸುಧೆಯು ಅಳುತ್ತ ಹೇಳಿದಳು—ಮಗುವಿಗೆ ದೃಷ್ಟಿಯಾಗಿತ್ತೆಂದು ತಿಳಿದು, ಮೋಸಹೋದೆವು. ಹಾ! ನೀವು ಅವನ ಮುಖ ಸಹ ನೋಡಲಾಗ ಲಿಲ್ಲ. ಇತ್ತೀಚೆಗೆ ಅದೆಷ್ಟು ಬುದ್ಧಿ ಅವನಿಗೆ? ನಾನು ಅಳುತ್ತಿದ್ದುದನ್ನು ಕಂಡರೆ ತನ್ನ ನೋವನ್ನು ಸಹ ಮರೆತು, ನಗುತ್ತಿದ್ದನು. ಜ್ವರ ಬಂದ ಮೂರ ನೆಯ ದಿನವೇ ಕಣ್ಣು ಮುಚ್ಚಿಕೊಂಡನು. ನಿರ್ಮಲೆಯು ಅವನ ಜ್ವರದಲ್ಲಿ ನನಗೆ ಬಹಳ ಸಹಾಯ ಮಾಡಿದಳು. ನಾನಾದರೂ ಒಮ್ಮೊಮ್ಮೆ ಸ್ವಲ್ಪ ಮಲಗುತ್ತಿದ್ದೆ. ಆದರೆ ಅವಳು ರಾತ್ರಿಯೆಲ್ಲಾ ಕಣ್ಣು ಸಹ ಮುಚ್ಚದೆ ಅವ ನನ್ನು ತೊಡೆಯ ಮೇಲೆ ಇರಿಸಿಕೊಂಡಿರುತ್ತಿದ್ದಳು, ಅಥವಾ ಹೆಗಲಮೇಲೆ ಹಾಕಿಕೊಂಡು ತಿರುಗಾಡುತ್ತಿದ್ದಳು. ಅವಳ ಉಪಕಾರವನ್ನು ನಾನೆಂದೂ ಮರೆಯಲಾರೆ! ಅದೇನು? ನೀವು ಈ ದಿನವೇ ಹೊರಟು ಹೋಗುವಿರಾ?

ಡಾಕ್ಟರ್—ಹೌದು, ರಜಾ ತೆಗೆದುಕೊಂಡು ಬರುವಷ್ಟು ಸಮಯ ವಿರಲಿಲ್ಲ. ಸಿವಿಲ್ ಸರ್ಜನರು ಶಿಕಾರಿಗೆ ಹೊರಟು ಹೋಗಿದ್ದರು.

ಸುಧಾ—ಯಾವಾಗಲೂ ಶಿಕಾರಿಯಾಡುವುದೇ ಕೆಲಸವೇ?

ಡಾಕ್ಟರ್—ರಾಜರ ಕೆಲಸ ಮತ್ತಿನ್ನೇನು?

ಸುಧಾ—ಈದಿನ ನಿಮ್ಮನ್ನು ಹೋಗಗೊಡುವುದಿಲ್ಲ!

ಡಾಕ್ಟರ್—ನನಗೂ ಹೋಗಲು ಮನಸೇ ಇಲ್ಲ!

ಸುಧಾ—ಹಾಗಿದ್ದರೆ ಹೋಗಬೇಡಿ, ಟೆಲಿಗ್ರಾಂ ಕೊಟ್ಟರಾಯಿತು! ನಾನೂ ನಿಮ್ಮ ಸಂಗಡ ಬರುವೆನು. ನಿರ್ಮಲೆಯನ್ನೂ ಸಂಗಡ ಕರೆದು ಕೊಂಡು ಬರುವೆನು.

ಸುಧೆಯು ಅಲ್ಲಿಂದ ಹಿಂದಿರುಗಿದಾಗ ಅವಳ ಹೃದಯದ ಭಾರ ಎಷ್ಟೋ ಕಡಿಮೆಯಾಗಿತ್ತು. ಪತಿಯ ಪ್ರೇಮಪೂರ್ಣ ಕೋಮಲವಾಣಿಯು ಅವಳ ಎಲ್ಲ ದುಃಖ ಸಂತಾಪಗಳನ್ನೂ ದೂರಮಾಡಿದ್ದವು! ಆಹಾ, ಪ್ರೇಮ ದಲ್ಲಿಂತಹ ಶಕ್ತಿ, ಧೈರ್ಯ, ಮತ್ತು ಬಲವಿದೆ?

## ಹದಿನೆಂಟನೆಯ ಪರಿಚ್ಛೇದ

ಮನುಷ್ಯನಿಗೆ ಏನಾದರೂ ವಿಪತ್ತಿಯುಂಟಾದರೆ ಅವನು ಅದರ ದುಃಖ ವನ್ನು ಅನುಭವಿಸುವುದು ಮಾತ್ರವೇ ಅಲ್ಲದೆ, ಜನರ ನಾನಾವಿಧ ನಿಂದೆಗಳನ್ನು ಕೇಳಬೇಕಾಗುವುದು! ಅಂತೆಯೇ, ಮಾನಸರಾಮನ ಮೃತ್ಯುವಿಗಾಗಿ ನಿರ್ಮ ಲೆಯು ದುಃಖಪಡುವುದೇ ಅಲ್ಲದೆ ಜನನಿಂದೆಯನ್ನೂ ಕೇಳ[illegible]ೇಕಾಯಿತು. ಪಾಪ, ಅವಳ ಮನಸನ್ನು ಅರಿತವರಾರು? ಆದರೆ ಜನರ ಬಾಯಲ್ಲಿ ಮಾತ್ರ ಇದೇ ಮಾತುಗಳು ಹೊರಡುತ್ತಿದ್ದುವು—ಇಷ್ಟೆಲ್ಲಾ ಆದುದು ಸವತಿ ತಾಯಿ ಯಿಂದಲೇ! ಭಗವಂತನ ಕೃಪೆಯಿಂದ ಮಕ್ಕಳು ಮಲತಾಯಿಯ ಕೈಗೆ ಸಿಗ ದಂತಾಗಬೇಕು. ತಂದೆಯಾದವನು ನಿಜವಾಗಿಯೂ ತನ್ನ ಮಕ್ಕಳ ಹಿತೈಷಿ ಯಾಗಿದ್ದರೆ ಮತ್ತೊಂದು ಮದುವೆ ಮಾಡಿಕೊಳ್ಳಲೇ ಬಾರದು! ಮಲತಾಯಿ ಯಿಂದ ಹಾಳಾಗದ ಮನೆಯೇ ಇಲ್ಲ. ಮಕ್ಕಳೆಂದರೆ ಪ್ರಾಣಕ್ಕಿಂತ ಪ್ರೀತಿ ಯಾಗಿ ಕಾಣುತ್ತಿದ್ದ ಅದೇ ತಂದೆಯು ಮಲ-ಹೆಂಡತಿ ಬಂದೊಡನೆಯೇ ಮಕ್ಕಳ ಶತ್ರುವಾಗುವನು; ಅವನ ಬುದ್ಧಿಯೇ ಬದಲಾಯಿಸಿ ಹೋಗುವುದು! ಸವತಿ ಮಕ್ಕಳನ್ನು ತನ್ನ ಮಕ್ಕಳಂತೆ ಕಾಣುವ ದೇವಿಯು ಇದುವರೆಗೆ ಜನಿಸಿರ ಲಾರಳು!

ಇಷ್ಟೇ ಅಲ್ಲ. ಮೊಹಲ್ಲೆಯ ಕೆಲವು ಮಹಿಳೆಯರು ಜಯರಾಮ ಮತ್ತು ಶ್ರೀರಾಮನೊಡನೆ ಸ್ನೇಹ ಮಾಡಿಕೊಂಡು ಅವರಲ್ಲಿ ತಮ್ಮ ಸಹಾನುಭೂತಿ ಯನ್ನು ತೋರುತ್ತಿದ್ದರು. ಮತ್ತು ಅವರ ತಾಯಿಯ ಶೀಲ ಸ್ವಭಾವಗಳನ್ನು ಅವರೆದುರಿಗೆ ಬಣ್ಣಿಸಿ ಕಣ್ಣೀರು ಸುರಿಯುವಂತೆ ಮಾಡುತ್ತಿದ್ದರು. 'ಪಾಪ! ತಾನು ಸತ್ತ ಬಳಿಕ ತನ್ನ ಮುದ್ದು ಮಕ್ಕಳಿಗೆ ಇಂತಹ ದುರ್ಗತಿಯುಂಟಾ ಗುವುದೆಂದು ಅವಳೇನು ಅರಿತಿದ್ದಳು? ಈಗ ನಿಮಗೆ ಹಾಲು, ತುಪ್ಪ ಹಾಕು ತ್ತಿರುವರೋ ಇಲ್ಲವೋ?'

ಜಯರಾಮ—ಹಾಕುವುದಿಲ್ಲವೇಕೆ ?

ಮಹಿಳೆ—ಹಾಕುವುದು ನಿಜ, ಮಗು ! ಅದರಲ್ಲೂ ಎಷ್ಟೋ ವಿಧವುಂಟು. ಕುಡಿಯಲಿ, ಕುಡಿಯದಿರಲಿ; ಸುಮ್ಮನೆ ನೀರುಹಾಲನ್ನು ತರಿಸಿಕೊಟ್ಟುಬಿಟ್ಟರಾಯಿತೇ ? ನಿಮ್ಮ ತಾಯಿ ಇದ್ದಾಗ ಆಳನ್ನು ಕಳುಹಿಸಿ, ಹಾಲನ್ನು ಎದುರಿಗೆ ಕರೆಸಿ ತರಿಸುತ್ತಿದ್ದರು ಹಾಲು, ತುಪ್ಪ ತಿಂದಂತಿದೆಯೇ, ನಿಮ್ಮ ಮುಖ ? ಹಿಂದಿದ್ದ ಆ ಕಳೆಯೇ ಇಲ್ಲ !

ಜಯರಾಮನಿಗೆ ತನ್ನ ತಾಯಿಯ ಕಾಲದ ಹಾಲಿನ ರುಚಿಯೂ ನೆನಪಿರಲಿಲ್ಲ. ಆಗಿನ ತನ್ನ ರೂಪೂ ಜ್ಞಾಪಕವಿರಲಿಲ್ಲ. ಆದ್ದರಿಂದ ಈ ಆಕ್ಷೇಪಣೆಗಳಿಗೆ ಯಾವ ಉತ್ತರವನ್ನೂ ಕೊಡದೆ ಸುಮ್ಮನಿರುತ್ತಿದ್ದನು. ಅಷ್ಟಾದರೂ ಅವನಿನ್ನೂ ಬಾಲಕನಾದ್ದರಿಂದ ಈ ಮಾತುಗಳ ಪರಿಣಾಮವು ಅವನ ಮನದ ಮೇಲುಂಟಾಗುವುದು ಸ್ವಾಭಾವಿಕವಾಗಿತ್ತು ! ಮುನ್ಷಿಯವರ ಮನೆ ಹರಾಜಾಗಿ, ಬೇರೆ ಮನೆಗೆ ಬಂದಾಗಿನಿಂದ ಅವರಿಗೆ ಬಾಡಿಗೆಯ ಚಿಂತೆಯುಂಟಾಯಿತು. ವರಮಾನವೇ ಇಲ್ಲದೆ ಖರ್ಚನ್ನು ನಿರ್ವಹಿಸುವುದು ಹೇಗೆ ? ಆದ್ದರಿಂದ ನಿರ್ಮಲೆಯು ತುಪ್ಪವನ್ನು ನಿಲ್ಲಿಸಿ ಬಿಟ್ಟಿದ್ದಳು. ಇಬ್ಬರು ಆಳುಗಳನ್ನು ತೆಗೆದು ಹಾಕಲಾಗಿತ್ತು. ಜಯರಾಮನಿಗೆ ಇದೆಲ್ಲವೂ ಸರಿ ಬೀಳಲಿಲ್ಲ. ನಿರ್ಮಲೆಯು ತವರು ಮನೆಗೆ ಹೋದ ನಂತರ ಮುನ್ಷಿಯವರು ಹಾಲನ್ನೂ ನಿಲ್ಲಿಸಿಬಿಟ್ಟರು. ನವಜಾತ ಕನ್ಯೆಯ ಚಿಂತೆ ಈಗಿನಿಂದಲೇ ಅವರನ್ನು ಬಾಧಿಸುತ್ತಿತ್ತು !

ಜಯರಾಮನು ಕೋಪದಿಂದ ಕೇಳಿದನು—ಹಾಲನ್ನು ನಿಲ್ಲಿಸಿ ಬಹುಶಃ ಮಹಡಿಯ ಮನೆ ಕಟ್ಟುತ್ತಿರಬಹುದು ! ಭೋಜನವನ್ನೂ ನಿಲ್ಲಿಸಿಬಿಡಿ !

ಮುನ್ಷಿ—ಹಾಲು ಕುಡಿಯುವ ಅಪೇಕ್ಷೆ ಇದ್ದರೆ, ಎದುರಿಗೆ ಹೋಗಿ ಕರೆಸಿಕೊಂಡು ಬಾ. ಈ ನೀರಿಗೆ ದುಡ್ಡು ಹಾಕಲು ನನ್ನ ಮನಸೊಪ್ಪುವುದಿಲ್ಲ

ಜಯರಾಮ—ನಾನು ಹಾಲು ಕರೆಸಿಕೊಂಡು ಬರುತ್ತಿರುವುದನ್ನು ಶಾಲೆಯ ಹುಡುಗರು ನೋಡಿದರೆ ?

ಮುನ್ಷಿ—ನೋಡಿದರೆ ಏನು ? ಮನೆಗೆ ಹಾಲು ಕರೆಸಿಕೊಂಡು ಹೋಗುವೆನೆಂದು ಹೇಳು. ಹಾಲನ್ನು ತರುವುದೇನು ಕಳ್ಳತನವೇ ?

ಜಯರಾಮ—ಕಳ್ಳತನವಲ್ಲ; ನೀವೇ ಈಗ ಹಾಲು ತರುತ್ತಿದ್ದಿರೆನ್ನಿ, ಆಗ ಯಾರಾದರೂ ನೋಡಿದರೆ ನಿಮಗೆ ನಾಚಿಕೆಯಾಗುವುದಿಲ್ಲವೇ ?

ಮುನ್ಷಿ - ಖಂಡಿತ ಇಲ್ಲ ನಾನು ಇದೇ ಕೈಗಳಿಂದ ನೀರನ್ನು ಸೇದಿರುವೆನು, ಧಾನ್ಯಗಳ ಮೂಟೆಗಳನ್ನು ಹೊತ್ತಿರುವೆನು. ನನ್ನ ತಂದೆಯವರೇನೂ ಅಂತಹ ಧನಿಕರಾಗಿರಲಿಲ್ಲ.

ಜಯರಾಮ ನನ್ನ ತಂದೆ ಏನೂ ಬಡವರಲ್ಲ. ನಾನೇಕೆ ಹಾಲು ಕರೆಸಿ ತರಲು ಹೋಗಲಿ? ಅದಿರಲಿ, ನೀವು ಆಳುಗಳನ್ನೇಕೆ ಕೆಲಸದಿಂದ ತೆಗೆದು ಹಾಕಿದಿರಿ ?

ಮುನ್ಷಿ—ನಿನಗಿಷ್ಟೂ ತಿಳಿಯುವುದಿಲ್ಲವೇ ? ನನ್ನ ವರಮಾನ ಈಗ ಮೊದಲಿನಂತಿಲ್ಲವೆಂದು ನೀನರಿಯೆಯಾ ?

ಜಯರಾಮ— ನಿಮ್ಮ ವರಮಾನ ಏಕೆ ಕಡಿಮೆಯಾಯಿತು ?

ಮುನ್ಷಿ—ನಿನಗೆ ಸ್ವಲ್ಪವೂ ಬುದ್ಧಿ ಇಲ್ಲ. ನಾನೇನು ತಿಳಿಯಹೇಳಲಿ? ಜೀವನದಲ್ಲೇ ಬೇಸರ ಉಂಟಾಗಿರುವಾಗ ಮೊಕದ್ದಮೆಗಳನ್ನು ತೆಗೆದುಕೊಂಡು ಏನು ಕೆಲಸಮಾಡಲಿ ? ಹಿಂದಿನ ಆ ಅಭಿರುಚಿ-ಆಸಕ್ತಿಗಳೇ ಇಲ್ಲ. ಎಲ್ಲವೂ ಮಾನಸರಾಮನ ಸಂಗಡಲೇ ಹೊರಟುಹೋದವು !

ಜಯರಾಮ—ನೀವು ಕೈಯ್ಯಾರೆ ಮಾಡಿದ ಕೆಲಸ ಅದು !

ಮುನ್ಷಿಯವರು ಚೀರುತ್ತ ನುಡಿದರು—ಅಯ್ಯೋ ಬುದ್ಧಿಗೇಡಿ ! ಯಾರಾದರೂ ಕೈಯಾರೆ ತನ್ನ ಕುತ್ತಿಗೆಯನ್ನು ಕತ್ತರಿಸಿಕೊಳ್ಳುವರೇ ? ಅದು ಭಗವಂತನ ಇಚ್ಛೆ !

ಜಯರಾಮ—ಭಗವಂತನು ನಿಮ್ಮನ್ನು ವಿವಾಹ ಮಾಡಿಕೊಳ್ಳೆಂದು ಹೇಳಿದನೇ ?

ಮುನ್ಷಿಯವರಿಗೆ ಮಿತಿಮೀರಿದ್ದ ಕೋಪವುಂಟಾಯಿತು! ಕ್ರೋಧದ ಕಿಡಿಗಳನ್ನು ಕಾರುತ್ತ ನುಡಿದರು—ಈ ದಿನ ನನ್ನೊಡನೆ ಜಗಳ ಮಾಡಬೇಕೆಂದು ಸಿದ್ಧನಾಗಿ ಬಂದಿರುವೆಯಾ ? ಯಾವ ಹೆಮ್ಮೆಗಾಗಿ ಈ ಮಾತುಗಳನ್ನಾಡುವೆ ? ನನಗೆ ನೀನೇನೂ ಅನ್ನ ಹಾಕಿ ಸಾಕುತ್ತಿಲ್ಲ. ಆ ಯೋಗ್ಯತೆ ನಿನಗುಂಟಾದ ಬಳಿಕ ನನಗೆ ಉಪದೇಶ ಮಾಡು; ಆಗ ನಾನು ಕೇಳುವೆನು ! ಈಗಿನಿಂದಲೇ ನನಗೆ ಉಪದೇಶ ಕೊಡುವ ಅಧಿಕಾರ ನಿನಗಿಲ್ಲ. ವಿನಯ, ಮರ್ಯಾದೆಗಳನ್ನು ಕಲಿತುಕೊ ! ನಾನು ಸಂಪಾದಿಸಿದ ಆಸ್ತಿ; ನನ್ನ ಮನಬಂದಂತೆ ಖರ್ಚು ಮಾಡುವೆನು ! ಕೇಳುವುದಕ್ಕೆ ನಿನಗಾವ ಹಕ್ಕೂ ಇಲ್ಲ. ನೀನು ಪುನಃ ಈ ರೀತಿ

ಅವಿನಯವನ್ನು ತೋರಿದೆಯಾದರೆ ಅದರ ಪರಿಣಾಮ ಒಳ್ಳೆಯದಾಗಲಾರದು! ಮಾನಸರಾಮನಂತಹ ರತ್ನವನ್ನು ಕಳೆದುಕೊಂಡೇ ನನ್ನ ಪ್ರಾಣ ಹೋಗಲಿಲ್ಲ! ಅಂದಬಳಿಕ ನೀನಿಲ್ಲದಿದ್ದರೆ ನಾನು ಸಾಯುವೆನೆಂದು ತಿಳಿದೆಯಾ ?

ಇಷ್ಟು ಬೈದರೂ ಜಯರಾಮನು ಅಲ್ಲಿಂದ ಕದಲಲಿಲ್ಲ. ನಿಶ್ಶಂಕ ಭಾವ ದಿಂದ ನುಡಿದನು—ಹಾಗಿದ್ದರೆ ನಮಗೆಷ್ಟು ಕಷ್ಟವಾದರೂ ಬಾಯಿ ತೆಗೆಯ ಬಾರದೆಂದು ನಿಮ್ಮ ಅಪೇಕ್ಷೆಯೇ ? ಇದು ನನ್ನಿಂದ ಸಾಧ್ಯವಿಲ್ಲ ವಿನಯ ಮರ್ಯಾದೆಗಳಿಗಾಗಿ ಅಣ್ಣನಿಗೆ ದೊರೆತ ಬಹುಮಾನ ನನಗೆ ಬೇಡ ! ವಿಷ ಕುಡಿದು ಪ್ರಾಣ ಬಿಡುವಷ್ಟು ಸಾಹಸ ನನ್ನಲ್ಲಿಲ್ಲ. ಇಂತಹ ವಿನಯಕ್ಕೆ ದೂರ ದಿಂದಲೇ ಪ್ರಣಾಮ !

ಮುನ್ಷಿ—ಇಂತಹ ಮಾತುಗಳನ್ನಾಡಲು ನಿನಗೆ ನಾಚಿಕೆಯಾಗುವು ದಿಲ್ಲವೇ ?

ಜಯರಾಮ—ಹುಡುಗರು ತಮ್ಮ ಹಿರಿಯರ ರೀತಿಯನ್ನೇ ಅನುಸರಿಸು ವರು.

ಮುನ್ಷಿಯವರ ಕ್ರೋಧ ಶಾಂತವಾಯಿತು ! ಜಯರಾಮನ ಮನಸಿನ ಮೇಲೆ ಈ ಮಾತಿನ ಪರಿಣಾಮವಾಗುವುದಿಲ್ಲವೆಂದು ಅವರು ತಿಳಿದರು ಅಲ್ಲಿಂ ದೆದ್ದು ತಿರುಗಾಡಿಕೊಂಡು ಬರಲು ಹೊರಟರು. ಈ ಮನೆಯು ಶೀಘ್ರದಲ್ಲೇ ಸರ್ವನಾಶವಾಗುವುದೆಂಬ ಸೂಚನೆ ಇಂದು ಅವರಿಗೆ ಸಿಕ್ಕಿತು !

ಅಂದಿನಿಂದ ತಂದೆ-ಮಕ್ಕಳಲ್ಲಿ ದಿನವೂ ಒಂದಲ್ಲ ಒಂದು ಮಾತಿಗಾಗಿ ಜಗಳವಾಗುತ್ತಿತ್ತು. ಮುನ್ಷಿಯವರು ಹಾಗೂಹೀಗೂ ಸುಮ್ಮನಿರುತ್ತಿದ್ದರು. ಜಯರಾಮನು ಮತ್ತಷ್ಟೂ ಅವಿನಯವನ್ನು ತೋರುತ್ತ ಬಂದನು. ಒಂದು ದಿನ ಅವನು ರುಕ್ಮಿಣಿಯೊಡನೆ ಹೇಳಿದನು –ತಂದೆಯೆಂಬ ಮರ್ಯಾದೆ ಯಿಂದ ಸುಮ್ಮನಿರುವೆನು. ಇಲ್ಲದಿದ್ದರೆ ನನಗೆ ಎಂತೆಂತಹ ಸಂಗಡಿಗರಿರುವರು ಗೊತ್ತೇ? ಜನ ಭರಿತವಾದ ಬೀದಿಯಲ್ಲಿ ಹಿಡಿದು ನಿಲ್ಲಿಸಿ, ಹೊಡೆಸಿ ಬಿಡುತ್ತಿದ್ದೆ!

ರುಕ್ಮಿಣಿಯು ಈ ಮಾತನ್ನು ಮುನ್ಷಿಯವರಿಗೆ ತಿಳಿಸಿದಳು. ಮುನ್ಷಿ ಯವರು ಅಲಕ್ಷ್ಯ ಮಾಡಿದಂತೆ ನಟಿಸಿದರೂ ಮನಸಿನಲ್ಲಿ ಮಾತ್ರ ಸಂಶಯವು ಬೇರೂರಿತು. ಸಂಜೆಯ ಹೊತ್ತು ತಿರುಗಾಡಲು ಹೋಗುವುದನ್ನು ನಿಲ್ಲಿಸಿ ಬಿಟ್ಟರು. ಇದೊಂದು ಹೊಸ ಚಿಂತೆ ಅವರಿಗುಂಟಾಯಿತು. ನಿರ್ಮಲೆಯನ್ನು

ಕರೆಸಿದರೆ ಅವಳ ಸಂಗಡಲೂ ಇದೇ ರೀತಿ ವ್ಯವಹರಿಸುವನೋ, ಏನೋ ಎಂಬ ಹೆದರಿಕೆಯಿಂದ ಅವಳನ್ನೂ ಕರೆಸಲಿಲ್ಲ. ಒಮ್ಮೆ ಅವರಿಗೆ ಕೇಳಿಸಿಯೂ ಕೇಳಿಸದಂತೆ ಜಯರಾಮನು ಹೇಳಿಯೇ ಇದ್ದನು—ನೋಡುವೆನು! ಇನ್ನು ಈ ಮನೆಗೆ ಅವರು ಹೇಗೆ ಬರುವರು? ದೂರದಿಂದಲೇ ಒದ್ದು ಕಳುಹಿಸದೆ ಹೋದರೆ ನನ್ನ ಹೆಸರು ಜಯರಾಮನಲ್ಲ! ವೃದ್ಧ ತಂದೆಯವರು ಮಾಡುವರಾದರೂ ಏನು?—ಇವನನ್ನು ಯಾವ ರೀತಿಯಿಂದಲೂ ಬಗ್ಗಿಸಲಾಗುವುದಿಲ್ಲವೆಂದು ಮುನ್ಷಿಯವರು ತಿಳಿದುಕೊಂಡರು. ಹೊರಗಿನವರಾರಾದರೂ ಆಗಿದ್ದರೆ ಪೋಲೀಸಿಗೆ ಕೊಟ್ಟು ಬಿಡುತ್ತಿದ್ದರು. ಆದರೆ, ತಮ್ಮ ಮಗ, ಏನು ಮಾಡುವುದು? ತಾವೇ ಸೋಲಬೇಕಾಯಿತು.

ಒಂದು ದಿನ ಡಾಕ್ಟರ್ ಸಿಂಹರು ಜಯರಾಮನನ್ನು ಕರೆಸಿ ಅವನಿಗೆ ಬುದ್ಧಿವಾದ ಹೇಳತೊಡಗಿದರು. ಜಯರಾಮನು ಅವರನ್ನು ಗೌರವಿಸುತ್ತಿದ್ದನು. ಸುಮ್ಮನೆ ಕುಳಿತು ಅವರು ಹೇಳುವುದನ್ನೆಲ್ಲಾ ಕೇಳುತ್ತಿದ್ದನು. ಕಡೆಗೆ ಅವರು ಕೇಳಿದರು—ಜಯರಾಮ, ಹೀಗೆಲ್ಲ ಏಕೆ ಮಾಡುವೆ? ನಿನ್ನ ಮನಸಿನಲ್ಲಿರುವುದಾದರೂ ಏನು ಹೇಳು?

ಜಯರಾಮ—ನನ್ನ ಮನಸಿನಲ್ಲಿರುವುದನ್ನು ಸ್ಪಷ್ಟವಾಗಿ ತಿಳಿಸಿಬಿಡಲೇ? ನೀವೇನೂ ಕೆಟ್ಟದಾಗಿ ಭಾವಿಸುವುದಿಲ್ಲವಷ್ಟೆ?

ಸಿಂಹ—ಇಲ್ಲ; ಹೇಳು!

ಜಯರಾಮ—ಹಾಗಿದ್ದರೆ ಕೇಳಿ! ಅಣ್ಣನು ಸತ್ತಾಗಿನಿಂದ ಅದೇಕೋ ನನಗೆ ತಂದೆಯವರ ಮುಖವನ್ನು ನೋಡಿದರೆ ಕೋಪವುಂಟಾಗುತ್ತದೆ. ಇವರೇ ಅಣ್ಣನ ಹತ್ಯೆ ಮಾಡಿರುವರೆಂದು ನನಗೆನಿಸುತ್ತದೆ. ಅಲ್ಲದೆ, ಸಮಯ ನೋಡಿ ನಮ್ಮಿಬ್ಬರನ್ನೂ ಒಂದು ದಿನ ಹತ್ಯೆ ಮಾಡುವರು! ಹೀಗಲ್ಲದಿದ್ದರೆ ಅವರೇಕೆ ವಿವಾಹ ಮಾಡಿಕೊಳ್ಳುತ್ತಿದ್ದರು?

ಡಾಕ್ಟರ್‌ಸಾಹೇಬರು ಉಕ್ಕಿ ಬರುತ್ತಿದ್ದ ನಗುವನ್ನು ತಡೆದು ನುಡಿದರು—ನಿಮ್ಮ ಹತ್ಯೆ ಮಾಡುವುದಕ್ಕಾಗಿ ಅವರು ಮದುವೆ ಮಾಡಿಕೊಳ್ಳುವ ಅವಶ್ಯಕತೆ ಏನಿತ್ತು? ಹೀಗೆಂದರೇನು? ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ. ಮದುವೆ ಮಾಡಿಕೊಳ್ಳದೆಯೇ ನಿಮ್ಮ ಹತ್ಯೆ ಮಾಡಲಾಗುತ್ತಿರಲಿಲ್ಲವೇ?

ಜಯರಾಮು—ಇಲ್ಲ; ಎಂದಿಗೂ ಇಲ್ಲ! ಆಗ ಅವರ ಮನಸೇ ಬೇರೆಯಾಗಿತ್ತು. ನಮ್ಮನ್ನು ಕಂಡರೆ ಪ್ರಾಣಕ್ಕಿಂತ ಪ್ರಿಯವಾಗಿ ಭಾವಿಸುತ್ತಿದ್ದರು ಈಗ ನಮ್ಮ ಮುಖವನ್ನು ಸಹ ನೋಡಲು ಬೇಕಿಲ್ಲ. ತಮ್ಮಿಬ್ಬರ ಹೊರತು ಇತರರಾರೂ ಮನೆಯಲ್ಲಿರಬಾರದೆಂದು ಅವರ ಇಚ್ಛೆ! ಮುಂದಾಗುವ ಮಕ್ಕಳ ಹಾದಿಯನ್ನು ಸುಗಮ ಮಾಡಿಕೊಳ್ಳುವುದಕ್ಕಾಗಿ ನಮ್ಮನ್ನು ತೊಲಗಿಸಬೇಕೆಂಬುದೇ ಅವರ ಅಪೇಕ್ಷೆ! ಅದಕ್ಕಾಗಿಯೇ ನಮಗೆ ವಿಧವಿಧವಾದ ಕಷ್ಟ ಕೊಡುವರು. ಇತ್ತೀಚೆಗೆ ಮೊಕದ್ದಮೆಗಳನ್ನು ಕೂಡ ತೆಗೆದುಕೊಳ್ಳುವುದಿಲ್ಲ. ನಾವಿಬ್ಬರೂ ಸತ್ತುಹೋದರೆ, ಆಗ ಅವರ ಹುರುಪನ್ನು ನೋಡುವಿರಂತೆ!

ಡಾಕ್ಟರ್—ನಿಮ್ಮನ್ನು ತೊಲಗಿಸಬೇಕೆಂಬ ಅಪೇಕ್ಷೆಯಿದ್ದರೆ, ನಿಮ್ಮ ಮೇಲೆ ಯಾವುದಾದರೂ ದೋಷವನ್ನು ಆರೋಪಿಸಿ ಮನೆಬಿಟ್ಟು ಕಳುಹಿಸಲಾಗುತ್ತಿರಲಿಲ್ಲವೇ ?

ಜಯರಾಮು—ಇದಕ್ಕಾಗಿ ಮುಂಚಿತವಾಗಿಯೇ ಸಿದ್ಧನಾಗಿರುವೆನು.

ಡಾಕ್ಟರ್—ಏನು ಸಿದ್ಧತೆ ಮಾಡಿಕೊಂಡಿರುವೆ, ಹೇಳು ?

ಜಯರಾಮು– ಆ ಸಮಯ ಬಂದಾಗ ನೋಡುವಿರಂತೆ!

ಎಂದು ಹೇಳಿ ಜಯರಾಮನು ಅಲ್ಲಿಂದ ಹೊರಟನು. ಡಾಕ್ಟರ್ ಸಿಂಹರು ಅನೇಕ ಸಲ ಕರೆದರು. ಆದರೆ ಅವನು ಹಿಂತಿರುಗಿ ಸಹ ನೋಡಲಿಲ್ಲ.

ಅನೇಕ ದಿನಗಳ ನಂತರ ಜಯರಾಮನೂ ಡಾಕ್ಟರ್‌ಸಾಹೇಬರೂ ಭೇಟಿಯಾದರು. ಡಾಕ್ಟರ್‌ಸಾಹೇಬರಿಗೆ ಸಿನೆಮಾ ಎಂದರೆ ಬಹಳ ಪ್ರೇಮ; ಜಯರಾಮನಿಗಂತೂ ಅದರಲ್ಲೇ ಪ್ರಾಣ! ಸಿನೆಮಾದಿಂದ ಹಿಂತಿರುಗುವಾಗ ಡಾಕ್ಟರ್‌ಸಾಹೇಬರು ಜಯರಾಮನನ್ನು ಮಾತುಗಳಲ್ಲೇ ಮರೆಸಿ ತಮ್ಮ ಮನೆಗೆ ಕರೆದುಕೊಂಡು ಹೋದರು. ಅಲ್ಲಿನ ಭೋಜನವು ಅವನಿಗೆ ಬಹಳ ಸ್ವಾದಿಷ್ಟವಾಗಿ ತೋರಿತು. 'ಅಡಿಗೆಯವನು ಹೊರಟುಹೋದಂದಿನಿಂದ ನಮ್ಮ ಮನೆಯಲ್ಲಿ ಊಟದ ರುಚಿಯೇ ಇಲ್ಲ! ಅತ್ತೆಯವರು ಪಕ್ಕಾ ವೈಷ್ಣವೀ ಅಡಿಗೆ ಮಾಡುವರು. ನನಗೆ ರುಚಿಸುವುದೇ ಇಲ್ಲ; ಬಲಾತ್ಕಾರವಾಗಿ ಊಟ ಮಾಡುವೆನು. ಯಾರು ತಿಂದರೇನು, ಬಿಟ್ಟರೇನು ತಂದೆಯವರಿಗೆ ಲಕ್ಷ್ಯವೇ ಇಲ್ಲ. ಇದಕ್ಕಾಗಿಯೇ ಅಡಿಗೆಯವನನ್ನೂ ಬಿಡಿಸಿಬಿಟ್ಟರು. ಹಣವಿಲ್ಲದಿದ್ದರೆ ನಿತ್ಯನಿತ್ಯವೂ ಒಡವೆಗಳೆಲ್ಲಿಂದ ಬರುತ್ತಿದ್ದವು ?'

ಡಾಕ್ಟರ್—ಇಲ್ಲ, ಜಯರಾಮ! ಅವರ ಪರಮಾನ ನಿಜವಾಗಿಯೂ ಬಹಳ ಕಡಿಮೆಯಾಗಿಹೋಗಿದೆ. ನೀನು ಅವರ ಮನಸಿಗೆ ಬಹಳ ಬೇಸರವನ್ನುಂಟುಮಾಡುವೆ!

ಜಯರಾಮ –(ನಕ್ಕು) ನಾನು ಅವರನ್ನು ಬೇಸರಪಡಿಸುವೆನೇ? ನಿಜವಾಗಿ ಹೇಳುವೆನು, ನಾನವರ ಸಂಗಡ ಮಾತು ಸಹ ಆಡುವುದಿಲ್ಲ! ಅವರೇ ನಿಷ್ಕಾರಣವಾಗಿ ನನ್ನನ್ನು ಅನ್ನುವರು. ನನ್ನ ಸ್ನೇಹಿತರನ್ನು ಕಂಡರೆ ಸಹ ಅವರಿಗೆ ಆಗುವುದಿಲ್ಲ. ನೀವೇ ಯೋಚಿಸಿ ನೋಡಿ, ಸ್ನೇಹಿತರಿಲ್ಲದೆ ಮನುಷ್ಯನು ಜೀವಿಸಿರಬಲ್ಲನೇ? ಅಲ್ಪರ ಸಹವಾಸ ಮಾಡುವುದಕ್ಕೆ ನನಗೇನು ಬುದ್ಧಿ ಇಲ್ಲವೇ? ಅಷ್ಟಾದರೂ ನನ್ನನ್ನು, ನನ್ನ ಸ್ನೇಹಿತರನ್ನು ಸದಾ ಬೈಯುತ್ತಿರುವರು. ಡಾಕ್ಟರ್ ಸಾಹೇಬರೇ! ಹೀಗೆ ಸದಾಕಾಲವೂ ಬೈಯುತ್ತಿದ್ದರೆ ಯಾರಿಂದ ಸಹಿಸಲು ಸಾಧ್ಯ?

ಡಾಕ್ಟರ್—ಜಯರಾಮ! ಅವರನ್ನು ನೋಡಿದರೆ ನನಗೆ ನಿಜವಾಗಿ ದಯೆಯುಂಟಾಗುವುದು. ಈಗ ಅವರು ವಿಶ್ರಾಂತಿ ತೆಗೆದುಕೊಳ್ಳುವ ಕಾಲ! ವೃದ್ಧಾಪ್ಯ, ಅದರ ಮೇಲೆ ಮಗನು ಮೃತಿಹೊಂದಿದ ಶೋಕ, ಅಲ್ಲದೆ, ಸ್ವಾಸ್ಥ್ಯವೂ ಸರಿಇಲ್ಲ ಹೀಗಿರುವಲ್ಲಿ ಅವರೇನು ಮಾಡುವರು? ಅವರು ಮಾಡುವ ಅಲ್ಪಸ್ವಲ್ಪವೇ ಹೆಚ್ಚೆಂದು ತಿಳಿಯಬೇಕು. ನೀನು ಮತ್ತೇನು ಮಾಡದಿದ್ದರೂ ನಿನ್ನ ವ್ಯವಹಾರದಿಂದ ಅವರನ್ನು ಪ್ರಸನ್ನಗೊಳಿಸಬಹುದು. ವೃದ್ಧರನ್ನು ಸಂತುಷ್ಟರಾಗಿರಿಸುವುದು ಕಠಿಣವಲ್ಲ. ನಿಜವಾಗಿಯೂ ಹೇಳುವೆನು, ನೀನು ನಕ್ಕು ಮಾತನಾಡಿದರೆ ಅವರಿಗೆಷ್ಟೋ ಸಂತೋಷವುಂಟಾಗುವುದು. ಬಾಬೂಜೀ! ನಿಮ್ಮ ದೇಹಸ್ಥಿತಿಯು ಹೇಗಿದೆ?–ಎಂದೆರಡು ಮಾತನ್ನು ಕೇಳಿದರೆ ನಿನ್ನ ಗಂಟೇನು ಹೋಗುವುದು? ನಿನ್ನ ಉದ್ದಂಡನೆಗಾಗಿ ಅವರು ಮನಸಿನಲ್ಲೇ ಕೊರಗುವರು! ಎಷ್ಟೋ ಬಾರಿ ನನ್ನ ಮುಂದೆ ಹೇಳಿಕೊಂಡು ಕಣ್ಣೀರು ಹಾಕಿಕೊಂಡಿರುವರು! ತಾವು ಮದುವೆ ಮಾಡಿಕೊಂಡುದು ತಪ್ಪಾಯಿತೆಂದು ಒಪ್ಪಿಕೊಳ್ಳುವರು. ಆದರೆ ನಿನ್ನ ಕರ್ತವ್ಯವನ್ನು ನೀನು ಮಾಡಬೇಕಲ್ಲವೇ? ಅವರು ನಿನ್ನ ತಂದೆ, ನೀನು ಅವರ ಸೇವೆ ಮಾಡಬೇಕು. ಅವರ ಮನಸಿಗೆ ದುಃಖವುಂಟಾಗುವ ಒಂದು ಮಾತನ್ನೂ ಆಡಬಾರದು. ನಿನಗಿಂತ ನಾನು ಎಷ್ಟು ದೊಡ್ಡವನು? ಜಯರಾಮ! ಆದರೆ,

ಇದುವರೆಗೆ ಒಂದು ದಿನವೂ ನಮ್ಮ ತಂದೆಯ ಮಾತಿಗೆ ಪ್ರತಿಯಾಡಿದವನಲ್ಲ. ಈಗಲೂ ಅವರು ನನ್ನನ್ನು ಗದರಿಸುವರು, ಬುದ್ಧಿ ಹೇಳುವರು. ನಾನೆಲ್ಲ ವನ್ನೂ ತಲೆತಗ್ಗಿಸಿ ಕೇಳುವೆನು. ಅವರು ಹೇಳುವುದೆಲ್ಲಾ ನನ್ನ ಒಳ್ಳೆಯ ದಕ್ಕಾಗಿಯೋ—ಎಂದು ತಿಳಿದಿರುವೆನು. ತಾಯಿತಂದೆಗಳಿಗಿಂತ ಹೆಚ್ಚು ಹಿತೈಷಿಗಳು ನಮಗಿನ್ನಾರು? ಅವರ ಋಣದಿಂದ ಯಾರು ತಾನೆ ಮುಕ್ತ ರಾಗಿರಬಲ್ಲರು!

ಜಯರಾಮನು ಕುಳಿತು ಅಳತೊಡಗಿದನು. ಅವನ ಸದ್ಭಾವಗಳು ಇನ್ನೂ ಸಂಪೂರ್ಣವಾಗಿ ಲೋಪವಾಗಿರಲಿಲ್ಲ. ತನ್ನ ದೌರ್ಜನ್ಯವು ಅವನಿ ಗೀಗ ಸ್ಪಷ್ಟವಾಗಿ ತಿಳಿಯಬಂತು. ತನ್ನ ಬುದ್ಧಿಗೇಡಿತನಕ್ಕಾಗಿ ಅತ್ಯಂತ ತಿರ ಸ್ಕಾರವುಂಟಾಯಿತು. ಅಳುತ್ತ ಡಾಕ್ಟರ್‌ಸಾಹೇಬರೊಡನೆ ಹೇಳಿದನು—ನಾನು ಅತ್ಯಂತ ಲಜ್ಜಿತನಾಗಿರುವೆನು, ಡಾಕ್ಟರ್‌ಸಾಹೇಬರೇ! ಅವರಿವರ ಮಾತನ್ನು ಕೇಳಿ ಬುದ್ಧಿಗೆಟ್ಟಿದ್ದೆ. ಇನ್ನು ಮುಂದೆ ಹೀಗೆಂದೂ ಮಾಡುವು ದಿಲ್ಲ. ನಾನು ನಿಜವಾಗಿಯೂ ಹತಭಾಗಿ, ಅವರನ್ನು ಬಹಳ ಗೋಳಾಡಿಸಿದೆ. ನೀವು ತಂದೆಯವರಿಗೆ ಹೇಳಿ! ನನ್ನ ಅಪರಾಧವನ್ನು ಕ್ಷಮಿಸುವಂತೆ ಮಾಡಿ!

ಡಾಕ್ಟರ್‌ಸಾಹೇಬರು ತಮ್ಮ ಉಪದೇಶ ಕುಶಲತೆಗಾಗಿ ಬಹಳ ಸಂತೋಷಗೊಂಡರು. ಜಯರಾಮನನ್ನು ಬಾಚಿ ತಬ್ಬಿಕೊಂಡು ಮನೆಗೆ ಕಳುಹಿಸಿದರು.

ಜಯರಾಮನು ಮನೆಗೆ ತಲುಪಿದಾಗ ಹನ್ನೊಂದು ಘಂಟೆಯ ಮೇಲಾ ಗಿತ್ತು. ಮುನ್ಶಿಯವರು ಆಗತಾನೇ ಭೋಜನ ಮಾಡಿ ಹೊರಗಡೆ ನಿಂತಿ ದ್ದರು. ಜಯರಾಮನನ್ನು ಕಂಡೊಡನೆಯೇ ಹೇಳಿದರು—ಈಗೆಷ್ಟು ಹೊತ್ತಾ ಗಿದೆ ಗೊತ್ತೇ? ಹನ್ನೆರಡು ಘಂಟೆಯ ಸಮಯ!

ಜಯರಾಮನು ಅತ್ಯಂತ ನಮ್ರತೆಯಿಂದ ನುಡಿದನು—ಡಾಕ್ಟರ್ ಸಿಂಹ ರವರು ಸಿಕ್ಕಿದ್ದರು. ಅವರ ಸಂಗಡಲೇ ಅವರ ಮನೆಯವರೆಗೂ ಹೊರಟು ಹೋದೆ. ಊಟ ಮಾಡೆಂದು ಬಹಳ ಬಲಾತ್ಕರಿಸಿದರು; ವಿವಶನಾಗಿ ಮಾಡ ಬೇಕಾಯಿತು. ಇದರಿಂದ ಹೊತ್ತಾಯಿತು.

ಮುನ್ಶಿ—ಡಾಕ್ಟರ್ ಸಿಂಹರೊಡನೆ ನಿನ್ನ ದುಃಖವನ್ನು ಹೇಳಿಕೊಳ್ಳಲು ಹೋಗಿದ್ದೆಯಾ? ಅಥವಾ ಬೇರೆ ಏನಾದರೂ ಕೆಲಸವಿತ್ತೇ?

ಜಯರಾಮನ ನಮ್ರತೆಯ ಕಾಲುಭಾಗ ಹಾರಿಹೋಯಿತು ಅವ ನೆಂದನು:—ದುಃಖವನ್ನು ಇತರರ ಸಂಗಡ ಹೇಳಿಕೊಳ್ಳುವುದು ನನ್ನ ಸ್ವಭಾ ವವೇ ಅಲ್ಲ !

ಮುನ್ಷಿ—ಹೌದು, ಹೌದು! ನಿನ್ನ ಬಾಯಲ್ಲಿ ನಾಲಿಗೆಯೇ ಇಲ್ಲ ! ಹಾಗಿ ದ್ದರೆ ನನ್ನೊಡನೆ ಬಂದು ಹೇಳುವವರ ಮಾತೆಲ್ಲ ಕಲ್ಪನೆಯೋ ?

ಜಯರಾಮು—ಇದುವರೆಗಿನ ಮಾತನ್ನು ನಾನು ಹೇಳಲಿಲ್ಲ. ಆದರೆ ಈ ದಿನ ನಾನು ಡಾಕ್ಟರ್ ಸಿಂಹರೊಡನೆ ಇಂತಹ ಯಾವ ಮಾತನ್ನೂ ಆಡ ಲಿಲ್ಲ !

ಮುನ್ಷಿ—ಬಹಳ ಸಂತೋಷ ! ಬಹಳ ಸಂತೋಷ ! ! ಇಂದಿನಿಂದ ಗುರುದೀಕ್ಷೆ ದೊರೆತಂತಾಯಿತು ! ಅಲ್ಲವೇ ?

ಜಯರಾಮುನ ನಮ್ರತೆಯ ಮತ್ತೊಂದು ಕಾಲು ಭಾಗವು ಹಾರಿ ಹೋಯಿತು. ತಲೆಯೆತ್ತಿ ನುಡಿದನು—ಗುರುದೀಕ್ಷೆ ಇಲ್ಲದೆಯೇ ಮನುಷ್ಯನು ತನ್ನ ತಪ್ಪಿಗಾಗಿ ಲಜ್ಜಿತನಾಗಬಲ್ಲನು ! ತನ್ನ ತಪ್ಪನ್ನು ತಿದ್ದಿಕೊಳ್ಳಲು ಗುರು ಮಂತ್ರವು ಅವಶ್ಯಕವಿಲ್ಲ.

ಮುನ್ಷಿ—ಹಾಗಿದ್ದರೆ ಇನ್ನು ಮುಂದೆ ಅಲ್ಪರ ಸಹವಾಸ ಮಾಡುವುದಿಲ್ಲ ವಷ್ಟೇ ?

ಜಯರಾಮು—ಸಾಕಷ್ಟು ಪ್ರತ್ಯಕ್ಷ ಪ್ರಮಾಣವಿಲ್ಲದೆ ನೀವು ಅವರ ನ್ನೆಲ್ಲಾ ಅಲ್ಪರೆಂದೇಕೆ ಅನ್ನುವಿರಿ ?

ಮುನ್ಷಿ—ನಿನ್ನ ಸ್ನೇಹಿತರೆಲ್ಲರೂ ಅಲ್ಪರು ಅಯೋಗ್ಯರೇ ? ಒಬ್ಬ ನಾದದರೂ ಯೋಗ್ಯನಿಲ್ಲ! ಅವರನ್ನೆಲ್ಲ ಮನೆಯಲ್ಲಿ ಸೇರಿಸಬೇಡವೆಂದು ನಾನು ನಿನಗೆಷ್ಟೋ ಬಾರಿ ಹೇಳಿರುವೆನು; ಆದರೆ ನೀನು ಕೇಳಲಿಲ್ಲ. ಈ ದಿನ ಕೊನೆಯ ಸಲ ಹೇಳುತ್ತಿರುವೆನು, ಅವರನ್ನಿಲ್ಲಿ ಸೇರಿಸಿದೆಯಾದರೆ ಪೋಲೀಸಿನವರನ್ನು ಕರೆಸಬೇಕಾಗುವುದು !

ಜಯರಾಮನ ನಮ್ರತೆಯ ಮಗದೊಂದು ಕಾಲು ಭಾಗ ಮಾಯ ವಾಯಿತು. ಗರ್ಜಿಸಿ ನುಡಿದನು—ಒಳ್ಳೆಯದು ! ಪೋಲೀಸನವರನ್ನೂ ಕರೆಸಿ ! ಅವರೇನು ಮಾಡುವರೋ ನೋಡುವೆನು. ನನ್ನ ಮಿತ್ರರಲ್ಲಿ ಅರ್ಧಕ್ಕಿಂತ ಹೆಚ್ಚು ಮಂದಿ ಪೋಲೀಸ್ ಆಫೀಸರುಗಳ ಮಕ್ಕಳೇ ಇರುವರು. ನೀವೇ ನನ್ನ

ಸುಧಾರಣೆಗಾಗಿ ಪ್ರಯತ್ನ ಪಡುತ್ತಿರುವಾಗ, ನಾನೇಕೆ ವೃಥಾ ಕಷ್ಟಪಡಲಿ ?

ಹೀಗೆನ್ನುತ್ತ ಜಯರಾಮನು ತನ್ನ ಕೊಠಡಿಗೆ ಹೊರಟುಹೋದನು. ಒಂದು ಕ್ಷಣದ ನಂತರ ಹಾರ್ಮೋನಿಯಮಿನ ಮಧುರ ಸ್ವರವು ಹೊರಗಡೆಗೆ ಕೇಳಿಸತೊಡಗಿತು.

ಸಹೃದಯತೆಯಿಂದ ಉರಿಯುತ್ತಿದ್ದ ದೀಪವು ನಿರ್ದಯ ವ್ಯಂಗ್ಯದ ಒಂದೇ ಹೊಡೆತದಿಂದ ಆರಿ ಹೋಯಿತು ! ಕೋಪಗೊಂಡಿದ್ದ ಕುದುರೆಯು ಒಳ್ಳೆಯ ಮಾತಿನಿಂದ ಶಾಂತವಾಗಿ, ಜಾಗ್ರತೆ ಓಡತೊಡಗಿತ್ತು; ಆದರೆ ಚಾವಟಿ ಏಟು ಬಿದ್ದೊಡನೆಯೇ ಪುನಃ ಕೋಪಗೊಂಡು, ಗಾಡಿಯನ್ನು ಹಿಂದಕ್ಕೆ ತಳ್ಳತೊಡಗಿತು !

## ಹತ್ತೊಂಭತ್ತನೆಯ ಪರಿಚ್ಛೇದ

ಈ ಬಾರಿ ಸುಧೆಯ ಸಂಗಡ ನಿರ್ಮಲೆಯೂ ಹೋಗಲೇಬೇಕಾಯಿತು. ಇನ್ನೂ ಕೆಲವು ದಿನಗಳು ತವರುಮನೆಯಲ್ಲೇ ಇರಬೇಕೆಂದು ಅವಳಿಗಿಷ್ಟ ವಿತ್ತು. ಆದರೆ ಶೋಕಾಕುಲಳಾದ ಸುಧೆ ಒಬ್ಬಳೇ ಹೇಗಿರುವಳು ? ಅವಳ ಗೋಸ್ಕರ ಹೊರಡಲೇಬೇಕಾಯಿತು. ರುಕ್ಮಿಣಿಯು ಅಡಿಗೆಯವಳೊಡನೆ ಹೇಳಿದಳು—ನೋಡಿದೆಯಾ, ಬಹೂ ತಾಯಿಯ ಮನೆಯಿಂದ ಎಷ್ಟು ಚೆನ್ನಾಗಿ ಬಂದಿರುವಳು ?

ಅಡಿಗೆಯವಳು—ಹೌದು, ತಾಯಿಯ ಕೈ ಊಟವೆಂದರೆ ಮಕ್ಕಳಿಗೆ ಬಹಳ ಪ್ರಿಯ.

ರುಕ್ಮಿಣಿ—ನಿಜವಾದ ಮಾತನ್ನು ಹೇಳಿದೆ ! ಮಕ್ಕಳಿಗೆ ಉಣಿಸಲು ಮಾತೆಯೇ ಸರಿ.

ತಾನು ಬಂದುದು ಮನೆಯವರಾರಿಗೂ ಸಂತೋಷವಿಲ್ಲವೆಂದು ನಿರ್ಮಲೆಯ ಮನಸಿಗೆನಿಸಿತು. ಮುನ್ಷಿಯವರೇನೋ ಬಹಳ ಸಂತೋಷವನ್ನು ವ್ಯಕ್ತಪಡಿಸಿದರು. ಆದರೆ, ತಮ್ಮ ಹೃದಯಗತ ಚಿಂತೆಯನ್ನು ಮರೆಸಲಾಗಲಿಲ್ಲ. ಸುಧೆಯು ನಿರ್ಮಲೆಯ ಮಗಳಿಗೆ 'ಆಶಾ' ಎಂದು ಹೆಸರಿಟ್ಟಿದ್ದಳು. ಅವಳೂ ಆಸೆಯ ಮೂರ್ತಿಯಂತೆಯೇ ಇದ್ದಳು. ನೋಡಿದೊಡನೆ ಚಿಂತೆ

ಎಲ್ಲವೂ ಮರೆತುಹೋಗುತ್ತಿತ್ತು. ಮುನ್ಷಿಯವರು ಅವಳನ್ನು ಎತ್ತಿಕೊಳ್ಳಲು ಹೋದರು. ಆದರೆ ಆಶಾ ಅಳತೊಡಗಿದಳು. ತಂದೆಯ ಗುರುತನ್ನೇ ಅರಿಯದಂತೆ ತಾಯಿಯನ್ನು ಬಿಗಿಯಾಗಿ ಅಪ್ಪಿಕೊಂಡಳು. ಮಿಠಾಯಿಯನ್ನು ಕೊಟ್ಟು ಅವಳನ್ನು ಎತ್ತಿಕೊಳ್ಳಬೇಕೆಂದು ಮುನ್ಷಿಯವರು ಆಶಿಸಿದರು. ಮನೆಯಲ್ಲಿ ಆಳಂತೂ ಇರಲಿಲ್ಲ; ಶ್ರೀರಾಮನನ್ನು ಕರೆದು ಎರಡಾಣೆಯ ಮಿಠಾಯಿಯನ್ನು ತೆಗೆದುಕೊಂಡುಬಾರೆಂದು ಹೇಳಿದರು. ಜಯರಾಮನೂ ಅಲ್ಲೇ ಕುಳಿತಿದ್ದನು. 'ನಮಗೆ ಮಾತ್ರ ಎಂದೂ ಮಿಠಾಯಿ ತರಿಸಿ ಕೊಡುವುದಿಲ್ಲ!' ಎಂದನು.

ಮುನ್ಷಿಯವರು ಕೋಪಗೊಂಡು 'ನೀವೇನು ಚಿಕ್ಕಮಕ್ಕಳೇ?' ಎಂದರು.

ಜಯರಾಮ—ಮಕ್ಕಳಲ್ಲದೆ ಮುದುಕರೇ? ಮಿಠಾಯನ್ನು ತರಿಸಿಟ್ಟು ನೋಡಿ! ಆಗ ಗೊತ್ತಾಗುವುದು, ನಾವು ಮಕ್ಕಳೋ ಮುದುಕರೋ? ಇನ್ನು ನಾಲ್ಕಾಣೆಯನ್ನು ಬಿಚ್ಚಿ! ಆಶಾ ತಂಗಿಯ ದೆಸೆಯಿಂದ ನಮ್ಮ ಅದೃಷ್ಟವೂ ಬೆಳಗಲಿ!

ಮುನ್ಷಿ—ನನ್ನ ಹತ್ತಿರ ಈ ದಿನ ದುಡ್ಡಿಲ್ಲ. ಹೋಗು, ಶ್ರೀರಾಮ! ಬೇಗ ಬಾ.

ಜಯರಾಮ—ಶ್ರೀರಾಮನು ಹೋಗುವುದಿಲ್ಲ. ಅವನಾರ ಗುಲಾಮನೂ ಅಲ್ಲ. ಆಶಾ ತನ್ನ ತಂದೆಗೆ ಹೇಗೆ ಮಗಳೋ, ಹಾಗೆಯೇ ಅವನೂ ತನ್ನ ತಂದೆಗೆ ಮಗ!

ಮುನ್ಷಿ—ವ್ಯರ್ಥವಾದ ಮಾತುಗಳನ್ನೇಕೆ ಆಡುವೆ? ಚಿಕ್ಕ ಮಗುವಿನ ಸರಿಗಟ್ಟಿಕೊಂಡು ಹೋಗಲು ನಿನಗೆ ನಾಚಿಕೆಯಾಗುವುದಿಲ್ಲವೇ? ಹೋಗು, ಶ್ರೀರಾಮ! ಇದೋ ದುಡ್ಡು ತೆಗೆದುಕೋ!

ಜಯರಾಮ—ಹೋಗಬೇಡ, ಶ್ರೀರಾಮ! ನೀನು ಯಾರ ನೌಕರನೂ ಅಲ್ಲ.

ಶ್ರೀರಾಮನು ಉಭಯ ಸಂಕಟಕ್ಕೆ ಸಿಲುಕಿದನು. ಯಾರ ಮಾತನ್ನು ಕೇಳುವುದು? ಕೊನೆಗೆ ಜಯರಾಮನ ಮಾತನ್ನೇ ಕೇಳಬೇಕೆಂದು ನಿಶ್ಚಯಿಸಿದನು. ತಂದೆಯವರು ಒಂದೆರಡು ಮಾತು ಬೈಯುವರು. ಜಯರಾಮನಾದರೆ

ಹೊಡೆಯುವನು ! ಆಗ ಅವನು ಯಾರ ಬಳಿ ಹೇಳಿಕೊಳ್ಳುವುದು ? ಆದ್ದರಿಂದ ಅವನೆಂದನು—ನಾನು ಹೋಗುವುದಿಲ್ಲ !

ಮುನ್ಷಿಯವರು ಕೋಪದಿಂದ ಹೇಳಿದರು –ಸರಿ ! ಇನ್ನು ಮುಂದೆ ನನ್ನ ಬಳಿ ಯಾವ ಪದಾರ್ಥವನ್ನೂ ಕೇಳಲು ಬರಬೇಡ !

ಮುನ್ಷಿಯವರೇ ಅಂಗಡಿಗೆ ಹೋಗಿ ಒಂದು ರೂಪಾಯಿಯ ಮಿಠಾಯಿ ಕಟ್ಟಿಸಿಕೊಂಡು ಬಂದರು. ಎರಡಾಣೆಯ ಮಿಠಾಯಿ ಕೊಡೆಂದು ಕೇಳಲು ಅವರಿಗೆ ನಾಚಿಕೆ ಎನಿಸಿತು. ಮಿಠಾಯಂಗಡಿಯವನು ಅವರನ್ನು ಚೆನ್ನಾಗಿ ಬಲ್ಲನು; ಅವನು ಮನಸಿನಲ್ಲೇನೆಂದುಕೊಳ್ಳುವುದಿಲ್ಲ ?

ಮುನ್ಷಿಯವರು ಮಿಠಾಯಿ ತೆಗೆದುಕೊಂಡು ಒಳಕ್ಕೆ ಹೋದರು. ಮಿಠಾಯಿಯ ದೊಡ್ಡ ಪೊಟ್ಟಣವನ್ನು ಕಂಡು ತಂದೆಯ ಮಾತನ್ನೇಕೆ ಕೇಳಲಿಲ್ಲವೆಂದು ಶ್ರೀರಾಮನಿಗೆ ಬಹಳ ದುಃಖವಾಯಿತು. ಈಗ ಅವನು ಯಾವ ಮುಖವನ್ನಿಟ್ಟುಕೊಂಡು ಮಿಠಾಯಿ ಕೇಳಲು ಒಳಗಡೆ ಹೋಗುವನು ? ಬಹಳ ತಪ್ಪಾಯಿತು ! ಅವನು ತನ್ನ ಮನಸಿನಲ್ಲೇ ಜಯರಾಮನ ಚಾವಟಿ ಏಟುಗಳನ್ನೂ ಮತ್ತು ಮಿಠಾಯಿಯ ರುಚಿಯನ್ನೂ ಪರಸ್ಪರ ಹೋಲಿಸಿ ನೋಡತೊಡಗಿದನು !

ಅಷ್ಟರಲ್ಲೇ ಅಡಿಗೆಯವಳು ಮಿಠಾಯಿಯ ಎರಡು ತಟ್ಟೆಗಳನ್ನು ತಂದು ಅವರ ಮುಂದಿಟ್ಟಳು. ಜಯರಾಮನು ಕೋಪದಿಂದ ಹೇಳಿದನು—ಇದನ್ನು ತೆಗೆದುಕೊಂಡು ಹೋಗು !

ಅಡಿಗೆಯವಳು—ಸಿಟ್ಟೇಕೆ ಮಾಡುವಿರಿ, ಬಾಬು ? ಮಿಠಾಯಿ ರುಚಿಸುವುದಿಲ್ಲವೇ ?

ಜಯರಾಮ—ಮಿಠಾಯಿ ಆಶಾಗೋಸ್ಕರ ತಂದದ್ದು, ನಮಗೋಸ್ಕರವಲ್ಲ ! ತೆಗೆದುಕೊಂಡು ಹೋಗು; ಇಲ್ಲವಾದರೆ ಬೀದಿಯಲ್ಲಿ ಬಿಸಾಡುವೆನು. ನಾವು ಕಾಸುಕಾಸಿಗಾಗಿ ಬಾಯಿ ಬಿಡುವುದು, ಇಲ್ಲಿ ನೋಡಿದರೆ ರೂಪಾಯಿ ರೂಪಾಯಿಗಳ ಮಿಠಾಯಿ ತರುತ್ತಿರುವುದು !

ಅಡಿಗೆಯವಳು—ನೀವು ತೆಗೆದುಕೊಳ್ಳಿ, ಶ್ರೀರಾಮ ಬಾಬೂ ! ಇವರು ತೆಗೆದುಕೊಳ್ಳದಿದ್ದರೆ ಬೇಡ !

ಶ್ರೀರಾಮನು ಹೆದರುತ್ತ ಹೆದರುತ್ತ ಕೈಯನ್ನು ಮುಂದಕ್ಕೆ ಚಾಚಿದನು.

ಅಷ್ಟರಲ್ಲಿ ಜಯರಾಮನು ಅವನನ್ನು ಹೆದರಿಸಿ ಹೇಳಿದನು— ಮಿಠಾಯಿಯನ್ನು ಮುಟ್ಟಬೇಡ ! ಮುಟ್ಟಿದೆಯಾದರೆ ಕೈಮುರಿದುಬಿಡುವೆನು. ದುರಾಸೆಯ ಹುಡುಗ !

ಶ್ರೀರಾಮನು ಹೆದರಿ ಸುಮ್ಮನಾದನು. ಮಿಠಾಯಿ ತಿನ್ನುವಷ್ಟು ಸಾಹಸ ಅವನಿಗಾಗಲಿಲ್ಲ. ನಿರ್ಮಲೆಯು ಈ ಮಾತನ್ನು ಕೇಳಿ ಅವರಿಬ್ಬರನ್ನೂ ಸಮಾಧಾನಪಡಿಸಬೇಕೆಂದಳು. ಆದರೆ, ಮುನ್ಷಿಯವರು ಭಾಷೆಯಿಟ್ಟು ಹೋಗಬೇಡವೆಂದು ಹೇಳಿದರು.

ನಿರ್ಮಲೆ— ಇದೆಲ್ಲವೂ ನನ್ನ ಮೇಲಿನ ಕೋಪ ! ನಿಮಗೆ ಗೊತ್ತಿಲ್ಲ

ಮುನ್ಷಿ—ಇತ್ತೀಚೆಗೆ ಬಹಳ ಧೂರ್ತನಾಗಿ ಹೋದನು. ತಾಯಿ ಇಲ್ಲದ ಮಕ್ಕಳನ್ನು ಗೋಳಾಡಿಸುವರೆಂದು ಜನರಾಡಿಕೊಳ್ಳುವರು; ಇಲ್ಲ ದಿದ್ದರೆ ಅವನಿಗೆ ಸರಿಯಾದ ಶಿಕ್ಷೆ ಮಾಡುತ್ತಿದ್ದ !

ನಿರ್ಮಲೆ—ಈ ಜನನಿಂದೆಗಾಗಿಯೇ ನಾನೂ ಹೆದರುವೆನು.

ಮುನ್ಷಿ — ಇನ್ನುಮೇಲೆ ನಾನು ಹೆದರುವುದಿಲ್ಲ ಯಾರೇನು ಬೇಕಾದರೂ ಅಂದುಕೊಳ್ಳಲಿ !

ನಿರ್ಮಲೆ—ಮೊದಲು ಇವನು ಹೀಗಿರಲಿಲ್ಲ.

ಮುನ್ಷಿ —ಮಕ್ಕಳಿದ್ದೂ ಮದುವೆ ಏಕೆ ಮಾಡಿಕೊಂಡಿರಿ ?—ಎಂದು ಕೇಳುವನು. ಅಷ್ಟೇ ಏಕೆ ? ನೀವೇ ವಿಷ ಕೊಟ್ಟು ಮಾನಸರಾಮನನ್ನು ಕೊಂದಿರೆಂದು ಹೇಳುವನು. ಇವನು ಪುತ್ರನಲ್ಲ, ಶತ್ರು !

ಜಯರಾಮನು ಬಾಗಿಲಲ್ಲಿ ಮರೆಯಾಗಿ ನಿಂತು, ಪತಿ-ಪತ್ನಿಯರಲ್ಲಿ ಮಿಠಾಯಿಯ ಬಗ್ಗೆ ಏನು ಮಾತುಕತೆ ನಡೆಯುವುದೆಂದು ಕೇಳುತ್ತಿದ್ದನು. ಮುನ್ಷಿಯವರ ಅಂತಿಮ ವಾಕ್ಯ ಕೇಳಿ ಅವನು ಸಹಿಸದಾದನು. ' ಶತ್ರುವಲ್ಲ ದಿದ್ದರೆ ಈ ರೀತಿ ಗೋಳಾಡಿಸುತ್ತಿದ್ದಿರೇಕೆ ? ಈಗ ನಿಮ್ಮ ಬಾಯಿಂದ ಬಂದ ಈ ಮಾತನ್ನು ನಾನೆಂದೋ ತಿಳಿದುಕೊಂಡಿದ್ದೆ ! ಅಣ್ಣನಿಗಷ್ಟು ಗೊತ್ತಾಗ ಲಿಲ್ಲ; ಮೋಸಹೋದ ! ನಮ್ಮ ಸಂಗಡ ನಿಮ್ಮ ಬೇಳೆ ಬೇಯಲಾರದು ! ಅಣ್ಣ ನಿಗೆ ವಿಷಕೊಟ್ಟು ಕೊಂದರೆಂದು ಊರಲ್ಲೆಲ್ಲಾ ಆಡಿಕೊಳ್ಳುವರು. ಹೀಗಿರು ವಾಗ ನಾನು ಹೇಳಿದರೆ ನಿಮಗೇಕಿಷ್ಟು ಕೋಪ ? ' ಎಂದನು.

ನಿರ್ಮಲೆಗೆ ಮಿತಿಮೀರಿದ ಆಶ್ಚರ್ಯವಾಯಿತು ! ಅವಳ ಶರೀರದ ಮೇಲೆ

ಕೆಂಡವನ್ನು ಸುರಿದಂತಾಯಿತು! ಮುನ್ಷಿಯವರು ಜಯರಾಮನನ್ನು ಗದರಿಸಿ ಸುಮ್ಮನಿರಿಸಬೇಕೆಂದು ಪ್ರಯತ್ನಿಸಿದರು. ಆದರೆ, ಅವನು ನಿರ್ಭೀತಿಯಿಂದ ನಿಂತು ಎದುರು ವಾದಿಸುತ್ತಲೇ ಇದ್ದನು. ಕಡೆಗೆ ನಿರ್ಮಲೆಗೂ ಅವನ ಮೇಲೆ ಬಹಳ ಕೋಪವುಂಟಾಯಿತು. 'ನೆನ್ನೆ ಮೊನ್ನೆಯ ಹುಡುಗ, ಎಷ್ಟು ಹೆಚ್ಚಿ ಹೋದನು? ಮನೆಯವರನ್ನೆಲ್ಲಾ ಇವನೇ ಪಾಲಿಸಿ ಪೋಷಿಸುವವನಂತೆ ಮಾತನಾಡುವನು?'–ಎಂದುಕೊಂಡು ಹುಬ್ಬುಗಂಟಿಕ್ಕಿ ಹೇಳಿದಳು—ಸಾಕು ಜಯರಾಮ! ಇನ್ನು ಮಾತನಾಡಬೇಡ! ನೀನು ಬಹಳ ಯೋಗ್ಯನೆಂದು ತಿಳಿಯಿತು. ಹೊರಗಡೆ ಹೋಗಿ ಕುಳಿತುಕೊ!

ಮುನ್ಷಿಯವರು ಇದುವರೆಗೆ ಹೆದರಿಕೊಂಡು ಬೈಯುತ್ತಿದ್ದರು. ನಿರ್ಮಲೆಯು ಗುಪ್ತರೂಪದಿಂದ ಕ್ರೋಧ ಪ್ರಕಟಿಸಿದುದನ್ನು ಕಂಡು ಅವರಿಗೆ ಉತ್ತೇಜನೆಯಾಯಿತು. ಹಲ್ಲು ಕಡಿಯುತ್ತ ಮುಂದೆ ಬಂದರು. ನಿರ್ಮಲೆಯು ಅವರ ಕೈ ಹಿಡಿದುಕೊಳ್ಳುವ ಮುನ್ನವೇ ಬಲವಾಗಿ ಒಂದೇಟನ್ನು ಬೀಸಿದರು. ಆದರೆ, ನಿರ್ಮಲೆ ಎದುರಿಗೆ ಬಂದದ್ದರಿಂದ ಏಟು ಅವಳ ಮುಖದ ಮೇಲೆ ಬಿತ್ತು! ತಲೆ ತಿರುಗತೊಡಗಿತು ಗಟ್ಟಿಯಾಗಿ ತಲೆಯನ್ನು ಹಿಡಿದುಕೊಂಡು ಕುಳಿತುಬಿಟ್ಟಳು ಮುನ್ಷಿಯವರ ಕ್ರೋಧ ಮತ್ತಷ್ಟು ಹೆಚ್ಚಾಯಿತು. ಪುನಃ ಕಾಲಿನಿಂದ ಒದ್ದರು ಆದರೆ, ಈ ಬಾರಿ ಜಯರಾಮನು ಅವರ ಕೈಗಳನ್ನು ಹಿಡಿದು ಹಿಂದಕ್ಕೆ ತಳ್ಳಿ ಹೇಳಿದನು—ದೂರದಲ್ಲಿ ನಿಂತು ಮಾತನಾಡಿ! ವೃಥಾ ಏಕೆ ಅಮರ್ಯಾದೆ ಮಾಡಿಸಿಕೊಳ್ಳುವಿರಿ? ಅಮ್ಮನ ಗೌರವಕ್ಕಾಗಿ ಸುಮ್ಮನಿರುವೆನು; ಇಲ್ಲದಿದ್ದರೆ ತೋರಿಸುತ್ತಿದ್ದೆನೆನ್ನುತ್ತ ಅವನು ಹೊರಗೆ ಹೋದನು. ಮುನ್ಷಿಯವರು ಸಂಜ್ಞಾಶೂನ್ಯರಂತೆ ನಿಂತಿದ್ದರು. ಆಹಾ! ಯಾವ ಪುತ್ರನನ್ನು ತೊಡೆಯಮೇಲಿರಿಸಿಕೊಂಡು ಸಂತೋಷದಿಂದ ಹಿಗ್ಗುತ್ತಿದ್ದರೋ ಅದೇ ಪುತ್ರನ ವಿಷಯವಾಗಿ ಇಂದು ವಿಧವಿಧವಾದ ದುಷ್ಕಲ್ಪನೆಗಳು ಅವರ ಮನದಲ್ಲುಂಟಾದವು.

ರುಕ್ಮಿಣಿಯು ಇದುವರೆಗೆ ತನ್ನ ಕೊಠಡಿಯಲ್ಲೇ ಕುಳಿತಿದ್ದಳು. ಈಗ ಹೊರಗೆ ಬಂದು ಹೇಳಿದಳು—ಹುಡುಗರು ದೊಡ್ಡವರಾಗಿ, ಸರಿಸಮಾನರಾದ ಮೇಲೆ ಅವರನ್ನು ಹೊಡೆಯುವುದೆಂದರೇನು?

ಮುನ್ಷಿಯವರು ತುಟಿಯನ್ನು ಕಚ್ಚುತ್ತ ಹೇಳಿದರು—ಇವನನ್ನು

ಮನೆಯಿಂದ ಹೊರದೂಡುವೆನು. ಭಿಕ್ಷೆ ಬೇಡಿ ಜೀವಿಸಲಿ; ಕಳ್ಳತನ ಮಾಡಿ ಹೊಟ್ಟೆ ಹೊರೆಯಲಿ. ಇನ್ನು ನನಗಾವ ಸಂಬಂಧವೂ ಇಲ್ಲ.

ರುಕ್ಮಿಣಿ— ಯಾರ ಮರ್ಯಾದೆ ಹೋಗುವುದು ?

ಮುನ್ಷಿ—ನನಗವರ ಚಿಂತೆ ಇಲ್ಲ !

ನಿರ್ಮಲೆ—ನಾನು ಬಂದದ್ದರಿಂದ ಈ ಬಿರುಗಾಳಿ ಏಳುವುದೆಂದು ತಿಳಿದಿದ್ದರೆ, ಮರೆತು ಕೂಡ ಬರುತ್ತಿರಲಿಲ್ಲ ! ಈಗಲೂ ನನ್ನನ್ನು ಕಳುಹಿಸಿಬಿಡಿ; ಈ ಮನೆಯಲ್ಲಿ ನಾನಿರಲಾರೆ !

ರುಕ್ಮಿಣಿ—ನಿನ್ನನ್ನು ಬಹಳ ಗೌರವಿಸುವನು, ಬಹೂ ! ಇಲ್ಲದಿದ್ದರೆ ಈ ದಿನ ಅನರ್ಥವಾಗಿ ಹೋಗುತ್ತಿತ್ತು !

ನಿರ್ಮಲೆ—ಇನ್ನೆಂತಹ ಅನರ್ಥವಾಗಬೇಕು, ಅಕ್ಕಾ ? ನಾನು ಎಷ್ಟೆಷ್ಟೋ ಹೆದರಿ ನಡೆಯುವೆನು. ಆದರೂ ಅಪಯಶಸ್ಸು ನನ್ನ ತಲೆಗೇ ಕಟ್ಟುವದು ಇನ್ನೂ ಮನೆಗೆ ಕಾಲಿಡುವುದಕ್ಕಿಲ್ಲ, ಅಷ್ಟರಲ್ಲಿ ಈ ಗತಿಯಾಯಿತು ! ಭಗವಂತನೇ ಕಾಪಾಡಬೇಕು !

ರಾತ್ರಿ ಯಾರೂ ಊಟಕ್ಕೇಳಲಿಲ್ಲ. ಮುನ್ಷಿಯವರೊಬ್ಬರೇ ಊಟ ಮಾಡಿದರು ಇಂದು ನಿರ್ಮಲೆಗೊಂದು ಹೊಸ ಚಿಂತೆಯುಂಟಾಯಿತು ಈ ಜೀವನದಿಂದ ಪಾರಾಗುವುದು ಹೇಗೆ ? ನಾನೊಬ್ಬಳೇ ಆಗಿದ್ದರೆ ಅಷ್ಟು ಚಿಂತೆ ಇರಲಿಲ್ಲ. ಈಗ ಈ ಮಗು ಬೇರೆ ! ಇವಳ ಭಾಗ್ಯದಲ್ಲೇನು ಬರೆದಿರುವೆಯೋ, ದೇವಾ ! ಎಂದುಕೊಂಡಳು.

# ಇಪ್ಪತ್ತನೆಯ ಪರಿಚ್ಛೇದ

ಚಿಂತೆ ಇದ್ದರೆ ನಿದ್ದೆ ಬರುವುದೇ ? ನಿರ್ಮಲೆ ಮಂಚದ ಮೇಲೆ ಮಲಗಿ ಆಪಕ್ಕ—ಈಪಕ್ಕ ಹೊರಳುತ್ತಿದ್ದಳು. ನಿದ್ದೆ ಬರಲೆಂದು ಎಷ್ಟೋ ಆಶಿಸಿದಳು. ಆದರೆ, ನಿದ್ದೆ ಬರುವುದಿಲ್ಲವೆಂದು ಪ್ರಮಾಣ ಮಾಡಿತೋ—ಎಂಬಂತಾಯಿತು. ದೀಪವನ್ನು ಆರಿಸಿದಳು. ಕಿಟಕಿಯ ಬಾಗಿಲುಗಳನ್ನು ತೆರೆದಿದ್ದಳು. ಟಿಕ್ ಟಿಕ್ ಶಬ್ದ ಮಾಡುವ ಗಡಿಯಾರವನ್ನು ಬೇರೆ ಕೋಣೆಯಲ್ಲಿರಿಸಿದಳು, ಆದರೂ ನಿದ್ದೆಯು ಸುಳಿದು ಸಹ ನೋಡಲಿಲ್ಲ ! ಮಾಡಬೇಕಾದ

ಯೋಚನೆಗಳೆಲ್ಲಾ ಮುಗಿದವು. ಚಿಂತಿಸಿ ಚಿಂತಿಸಿ ಸಾಕಾಯಿತು ಅಷ್ಟಾದರೂ ನಿದ್ದೆ ಬರಲಿಲ್ಲ ಆಗ ಅವಳು ಪುನಃ ದೀಪವನ್ನು ಹೊತ್ತಿಸಿ ಒಂದು ಪುಸ್ತಕ ಓದತೊಡಗಿದಳು. ನಾಲ್ಕೈದು ಪುಟಗಳನ್ನು ಓದುವಷ್ಟರಲ್ಲಿ ನಿದ್ದೆ ಬಂದಿತು. ಪುಸ್ತಕವು ತೆರೆದೇ ಇತ್ತು.

ಅಕಸ್ಮಾತ್ತಾಗಿ ಜಯರಾಮನು ಕೊಠಡಿಯನ್ನು ಪ್ರವೇಶಿಸಿದನು. ಅವನ ಕಾಲು ಥರಥರ ಕಂಪಿಸುತ್ತಿದ್ದವು. ಅವನು ಕೊಠಡಿಯನ್ನು ಸುತ್ತಲೂ ನೋಡಿದನು. ನಿರ್ಮಲೆ ಮಲಗಿದ್ದಳು. ಅವಳ ತಲೆಯ ಕಡೆಗಿದ್ದ ಅಲಮಾರಿನಲ್ಲಿ ಹಿತ್ತಾಳೆಯ ಸಣ್ಣದೊಂದು ಪೆಟ್ಟಿಗೆ ಇಟ್ಟಿತ್ತು. ಜಯರಾಮನು ಶಬ್ದ ಮಾಡದೆ ಆ ಪೆಟ್ಟಿಗೆಯನ್ನು ತೆಗೆದುಕೊಂಡು ಅತಿವೇಗದಿಂದ ಕೊಠಡಿಯ ಹೊರಕ್ಕೆ ಬಂದನು. ಆಹೊತ್ತಿಗೆ ಸರಿಯಾಗಿ ನಿರ್ಮಲೆಗೆ ಎಚ್ಚರವಾಯಿತು. ಬೆಚ್ಚಿಕೊಂಡೆದ್ದು, ಬಾಗಿಲಬಳಿ ಬಂದು ನೋಡಿದಳು ಎದೆ ಧಗ್ಗೆಂದಿತು. ಇದೇನು, ಜಯರಾಮನೇ ? ನನ್ನ ಕೊಠಡಿಗೆ ಏತಕ್ಕಾಗಿ ಬಂದಿದ್ದ ? ನಿದ್ದೆಗಣ್ಣಿನಲ್ಲಿ ನಾನು ಮೋಸಹೋಗಲಿಲ್ಲವಷ್ಟೆ ? ಬಹುಶಃ ಅಕ್ಕನವರ ಕೊಠಡಿಯಿಂದ ಬಂದಿರಬಹುದು. ಇಲ್ಲಿ ಅವನಿಗೇನು ಕೆಲಸ ? ಒಂದುವೇಳೆ ನನ್ನೊಡನೆ ಏನಾದರೂ ಹೇಳಬಂದಿದ್ದನೋ ? ಆದರೆ, ಈ ಹೊತ್ತಿನಲ್ಲೇಕೆ ಬರುವನು ? ಎಂಬೀ ಯೋಚನೆಗಳಿಂದ ಅವಳ ಹೃದಯ ಕಂಪಿಸಿತು

ಮುನ್ಷಿಯವರು ಮಹಡಿಯ ಮೇಲೆ ಮಲಗಿದ್ದರು. ಹೋಗಿ ಅವರನ್ನು ಎಬ್ಬಿಸಲೇ ?–ಎಂದು ಯೋಚಿಸಿದಳು. ಆದರೆ ಅಷ್ಟು ಸಾಹಸವಾಗಲಿಲ್ಲ. ಸಂಶಯಸ್ವಭಾವದ ಮನುಷ್ಯರು. ಏನು ತಿಳಿದುಕೊಳ್ಳುವರೋ ? ಮತ್ತು ಹುಡುಗನನ್ನೇನು ಮಾಡುವರೋ ? ಬೆಳಗ್ಗೆ ಅವನನ್ನೇ ಕೇಳಿದರೆ ಗೊತ್ತಾಗುವುದು. ನಿದ್ದೆಗಣ್ಣಿನಲ್ಲಿ ನಾನೇ ಮೋಸಹೋಗಿರಬಹುದು–ಎಂದು ಯೋಚಿಸಿ ಪುನಃ ಪುಸ್ತಕವನ್ನು ಓದತೊಡಗಿದಳು. ಆದರೆ ಏನು ಮಾಡಿದರೂ ನಿದ್ದೆ ಬರಲಿಲ್ಲ.

ಬೆಳಗಾಗುತ್ತಲೇ ಕಾಫಿ-ತಿಂಡಿಯನ್ನು ತೆಗೆದುಕೊಂಡು ತಾನೇ ಜಯರಾಮನ ಬಳಿಗೆ ಹೋದಳು. ದಿನವೂ ಅಡಿಗೆಯವಳು ತರುತ್ತಿದ್ದಳು; ಈ ದಿನ ಇವರೇಕೆ ತಂದರು ?–ಎಂದು ಜಯರಾಮನು ಬೆಚ್ಚಿದನು. ನಿರ್ಮಲೆಯ ಕಡೆಗೆ ತಲೆಯೆತ್ತಿ ನೋಡುವಷ್ಟು ಧೈರ್ಯ ಅವನಿಗಾಗಲಿಲ್ಲ.

ನಿರ್ಮಲೆಯೂ ಅವನ ಕಡೆಗೆ ವಿಶ್ವಾಸಪೂರ್ಣ ನೇತ್ರಗಳಿಂದ ನೋಡಿ ಕೇಳಿದಳು—ನೀನು ರಾತ್ರಿ ನನ್ನ ಕೊಠಡಿಗೆ ಬಂದಿದ್ದೆಯಾ ?

ಜಯರಾಮನು ವಿಸ್ಮಯವನ್ನು ಸೂಚಿಸುತ್ತ ಹೇಳಿದನು—ನಾನೇ ? ಭಲಾ ! ರಾತ್ರಿಯಲ್ಲಿ ನಾನೇಕೆ ನಿಮ್ಮ ಕೊಠಡಿಗೆ ಬರಲಿ ? ಏಕೆ, ಯಾರಾದರೂ ಬಂದಿದ್ದರೇ ?

ಅವನ ಮಾತಿನಲ್ಲಿ ನಂಬಿಕೆಯಾಗದಂತೆ ನಟಿಸಿ ನಿರ್ಮಲೆಯು ಹೇಳಿದಳು— ಹೌದು, ಯಾರೋ ನನ್ನ ಕೊಠಡಿಗೆ ಬಂದಂತೆನಿಸಿತು. ನಾನವರ ಮುಖ ನೋಡಲಿಲ್ಲ. ಹಿಂಭಾಗವನ್ನು ನೋಡಿ ನೀನಿರಬಹುದೆಂದು ಊಹಿಸಿದೆ. ಯಾರೆಂದು ಹೇಗೆ ತಿಳಿಯುವುದು ? ಅಂತೂ ಯಾರೋ ನನ್ನ ಕೊಠಡಿಗೆ ಬಂದಿದ್ದರು. ಇದರಲ್ಲೇನೂ ಸಂಶಯವಿಲ್ಲ !

ಜಯರಾಮನು ತಾನು ನಿರಪರಾಧಿಯೆಂದು ಸಿದ್ಧಪಡಿಸಿಕೊಳ್ಳಬಯಸಿ, ಹೇಳಿದನು—ನಾನು ರಾತ್ರಿ ಸಿನೆಮಾ ನೋಡಲು ಹೋಗಿದ್ದೆ. ಅಲ್ಲಿಂದ ಹಿಂತಿರುಗಿ ಒಬ್ಬ ಮಿತ್ರನ ಮನೆಯಲ್ಲಿ ಮಲಗಿದ್ದೆ. ಇಲ್ಲಿಗೆ ಬಂದು ಈಗ ತಾನೇ ಸ್ವಲ್ಪ ಹೊತ್ತಾಯಿತು. ನನ್ನ ಸಂಗಡ ಇನ್ನೂ ಅನೇಕ ಮಿತ್ರರಿದ್ದರು. ಯಾರನ್ನು ಬೇಕಾದರೂ ಕೇಳಿಕೊಳ್ಳಿ ! ನನಗೆ ನಿಜವಾಗಿಯೂ ಹೆದರಿಕೆಯಾಗುವುದು; ಏನಾದರೂ ಪದಾರ್ಥ ಹೋಗಿದ್ದರೆ ನನ್ನ ಮೇಲೇ ಬರುವದು! ಕಳ್ಳನನ್ನು ಯಾರೂ ಪತ್ತೆ ಮಾಡುವುದಿಲ್ಲ; ನನ್ನ ಮೇಲೇ ಕಳ್ಳತನ ಹೊರಿಸುವರು. ಬಾಬೂಜೀಯವರ ಸ್ವಭಾವವನ್ನಂತೂ ನೀವೇ ಕಂಡಿರುವಿರಿ ! ನನ್ನನ್ನು ಹೊಡೆದೇ ಬಿಡುವರು !

ನಿರ್ಮಲೆ— ನಿನ್ನಮೇಲೇಕೆ ಕಳ್ಳತನ ಹೊರಿಸುವರು ? ಒಂದುವೇಳೆ ನೀನೇನಾದರೂ ತೆಗೆದುಕೊಂಡಿದ್ದರೂ ನಿನ್ನ ಮೇಲೆ ಕಳ್ಳತನ ಹೊರಿಸಲಾಗುವುದಿಲ್ಲ. ಕಳ್ಳನು ಇತರರ ಪದಾರ್ಥವನ್ನು ಕದಿಯುವನೇ ಹೊರತು, ತನ್ನ ಮನೆಯ ಪದಾರ್ಥವನ್ನು ಕದಿಯುವುದಿಲ್ಲ !

ಇದುವರೆಗೆ ನಿರ್ಮಲೆಯ ದೃಷ್ಟಿ ತನ್ನ ಪೆಟ್ಟಿಗೆಯ ಕಡೆಗೆ ಹೋಗಿರಲಿಲ್ಲ. ಅಡಿಗೆ ಕೆಲಸಕ್ಕಾಗಿ ಒಳಗೆ ಹೋದಳು. ವಕೀಲಸಾಹೇಬರು ಊಟಮಾಡಿ, ಕಛೇರಿಗೆ ಹೊರಟನಂತರ ನಿರ್ಮಲೆಯು ಸುಧೆಯ ಮನೆಗೆ ಹೊರಡಲನುವಾದಳು. ಈಗ ಕೆಲವು ದಿನಗಳಿಂದ ಸುಧೆಯನ್ನು ನೋಡಲು ಹೋಗಿರಲಿಲ್ಲ;

ಅಲ್ಲದೆ ರಾತ್ರಿ ನಡೆದ ಘಟನೆಯನ್ನು ಅವಳೊಡನೆ ಹೇಳಿಕೊಳ್ಳಬೇಕೆಂಬ ಕುತೂಹಲ! ಅಡಿಗೆಯವಳನ್ನು ಕರೆದು ಹೇಳಿದಳು—ಕೊಠಡಿಯಿಂದ ನನ್ನ ಒಡವೆಯ ಪೆಟ್ಟಿಗೆಯನ್ನು ತೆಗೆದುಕೊಂಡು ಬಾ!

ಅಡಿಗೆಯವಳು ಹಿಂತಿರುಗಿ ಹೇಳಿದಳು—ಅಲ್ಲಿಲ್ಲೂ ಪೆಟ್ಟಿಗೆಯಿಲ್ಲ, ಬಹೂಜೀ! ಎಲ್ಲಿಟ್ಟಿದ್ದಿರಿ?

ನಿರ್ಮಲೆಯು ಸಿಟ್ಟುಗೊಂಡು ನುಡಿದಳು—ಒಂದು ಸಲಕ್ಕೆ ನಿನ್ನಿಂದ ಯಾವ ಕೆಲಸವೂ ಆಗುವುದಿಲ್ಲ. ಅಲ್ಲೇ ಅಲಮಾರಿನಲ್ಲಿಟ್ಟಿದ್ದೆ, ನೋಡಿದೆಯಾ?

ಅಡಿಗೆಯವಳು—ಇಲ್ಲ, ಬಹೂಜೀ! ಅಲಮಾರಿನಲ್ಲಿ ನೋಡಲಿಲ್ಲ; ಹಲಗೆಯ ಮೇಲೆ ನೋಡಿದೆ.

ನಿರ್ಮಲೆ—ಹೋಗು, ಬೇಗ ತೆಗೆದುಕೊಂಡು ಬಾ!

ಒಂದು ಕ್ಷಣದಲ್ಲಿ ಅಡಿಗೆಯವಳು ಪುನಃ ಹಿಂತಿರುಗಿ ಹೇಳಿದಳು—ಅಲಮಾರಿನಲ್ಲೂ ಇಲ್ಲ, ಬಹೂಜೀ! ಇನ್ನೆಲ್ಲಿದೆ ಹೇಳಿದರೆ, ನೋಡಿ ತರುವೆನು!

ನಿರ್ಮಲೆಯು ಕೋಪದಿಂದ ಹೇಳಿದಳು—ಭಗವಂತನು ನಿನಗೆ ಕಣ್ಣುಗಳನ್ನೇಕೆ ಕೊಟ್ಟನೋ ಕಾಣೆ! ನೋಡುತ್ತಿರು, ಅದೇ ಕೊಠಡಿಯಿಂದ ತರುವೆನೋ ಇಲ್ಲವೋ? ಎನ್ನುತ್ತ ಅಲ್ಲಿಂದೆದ್ದು ಕೊಠಡಿಗೆ ಹೋದಳು.

ಅಡಿಗೆಯವಳೂ ಅವಳ ಹಿಂದೆಯೇ ಹೋದಳು. ನಿರ್ಮಲೆಯು ಅಲಮಾರಿನಲ್ಲಿ ನೋಡಿದಳು ಹಲಗೆಯ ಮೇಲೆ ನೋಡಿದಳು. ಮಂಚದ ಕೆಳಗೆ ಬಗ್ಗಿ ನೋಡಿದಳು. ಬಳಿಕ ಬಟ್ಟೆ ಇರಿಸುವ ದೊಡ್ಡ ಪೆಟ್ಟಿಗೆಯನ್ನೂ ತೆರೆದು ನೋಡಿದಳು ಆದರೆ ಅಲ್ಲೆಲ್ಲೂ ಇರಲಿಲ್ಲ! ಪೆಟ್ಟಿಗೆ ಎಲ್ಲಿ ಹೋಯಿತೆಂದು ಅವಳಿಗೆ ಅಚರಿಯಾಯಿತು!

ಇದ್ದಕ್ಕಿದ್ದಂತೆ ಅವಳ ಕಣ್ಣುಗಳ ಮುಂದೆ ರಾತ್ರಿ ನಡೆದ ಘಟನೆಯು ಮಿಂಚಿನಂತೆ ಹಾದುಹೋಯಿತು. ಎದೆ ಧಗ್ಗೆಂದಿತು! ಇದುವರೆಗೆ ಅವಳು ನಿಶ್ಚಿಂತಳಾಗಿ ಹುಡುಕುತ್ತಿದ್ದಳು. ಈ ಘಟನೆಯ ನೆನಪಾದ ಮೇಲೆ ಅವಳಿಗೆ ಜ್ವರವೇ ಬಂದಂತಾಯಿತು, ಬಹಳ ಗಾಬರಿಯಿಂದ ನಾಲ್ಕು ಕಡೆಯೂ ಹುಡುಕಿದಳು. ಆದರೆ, ಎಲ್ಲೂ ಸಿಗಲಿಲ್ಲ. ಕ್ಷಣಕ್ಷಣಕ್ಕೂ ಅವಳ ಮುಖಕಾಂತಿ ಮಲಿನವಾಗುತ್ತ ಬಂತು. ಕಡೆಗೆ ನಿರಾಶಳಾಗಿ-ಒಮ್ಮೆಲೆ ಎದೆ ಬಡಿದುಕೊಂಡು ಅಳತೊಡಗಿದಳು.

ಒಡವೆಗಳೇ ಪ್ರಿಯಸಂಪತ್ತು! ಪತಿಯ ಮತ್ತಾವ ಸಂಪತ್ತಿನ ಮೇಲೂ ಅವಳ ಅಧಿಕಾರವಿರುವುದಿಲ್ಲ. ಆಭರಣಗಳೇ ಅವಳ ಗೌರವ ಮತ್ತು ಬಲ. ನಿರ್ಮಲೆಯ ಬಳಿ ಐದಾರು ಸಾವಿರ ರೂಪಾಯಿಗಳ ಒಡವೆಯಿತ್ತು. ಆ ಒಡವೆಗಳನ್ನು ಧರಿಸಿಕೊಂಡಷ್ಟು ಹೊತ್ತು ಅವಳ ಹೃದಯ ಆನಂದದಿಂದ ಅರಳುತ್ತಿತ್ತು. ಒಂದೊಂದು ಒಡವೆಯೂ ಅವಳನ್ನು ಒಂದೊಂದು ವಿಪತ್ತಿನಿಂದ ಕಾಪಾಡುವ ರಕ್ಷಾಸ್ತ್ರದಂತಿತ್ತು. ಹಿಂದಿನ ದಿನ ತಾನೇ ಅವಳು ಯೋಚಿಸಿಕೊಂಡಿದ್ದಳು—ಭಗವಂತನ ಕೃಪೆಯಿಂದ ಯಾರ ಮುಂದೆಯೂ ಕೈನೀಡದಂತೆ ಆಗಲಿ! ಈ ಒಡವೆಗಳ ಆಧಾರದಿಂದಲೇ ನನ್ನ ಜೀವನ ಪಾರುಗಾಣಿಸಿಕೊಳ್ಳುವೆನು; ಮತ್ತು ಮಗಳಿಗೂ ಒಂದು ಮಾರ್ಗ ಮಾಡುವೆನು. ಮತ್ತೇನಿಲ್ಲದಿದ್ದರೂ ಈ ಆಭರಣಗಳನ್ನು ನನ್ನಿಂದಾರೂ ಕಿತ್ತುಕೊಳ್ಳುವಂತಿಲ್ಲ. ಇಂದು ಇದೇ ನನ್ನ ಶೃಂಗಾರವಸ್ತುವಾಗಿದೆ; ನಾಳೆ ನನ್ನ ಜೀವನಾಧಾರವಾಗುವುದು! ಈ ಯೋಚನೆಯಿಂದ ಅವಳಿಗೆಷ್ಟೋ ಸಾಂತ್ವನೆ ಸಿಕ್ಕಂತಿತ್ತು. ಇಂದು ಅದೇ ಸಂಪತ್ತು ಅವಳ ಕೈಯಿಂದ ಕಿತ್ತುಕೊಳ್ಳಲ್ಪಟ್ಟಿತು. ಈಗವಳು ನಿರಾಧಾರಳಾದಳು. ಪ್ರಪಂಚದಲ್ಲಿ ಅವಳಿಗಿನ್ನಾವ ಆಶ್ರಯ ಇರಲಿಲ್ಲ. ಅವಳ ಆಸೆಗಳ ಆಧಾರವು ಬೇರುಸಹಿತ ಕಿತ್ತುಹೋಯಿತು! ಅವಳು ಬಿಕ್ಕಿಬಿಕ್ಕಿ ಅಳತೊಡಗಿದಳು. ಭಗವಂತ! ನಿನಗಿಷ್ಟೂ ಸಹಿಸಲಾಗಲಿಲ್ಲವೇ? ಅಂಗವಿಹೀನಳಿಗೆ ಇದ್ದ ಒಂದು ಕಣ್ಣೂ ಹೋದಂತಾಯಿತು! ಹಾ, ದೇವಾ!—ಅವಳ ಶರೀರ ಬೆವೆತು ನೀರಾಯಿತು ಅತ್ತುಅತ್ತು ಕಣ್ಣುಗಳು ಊದಿಕೊಂಡವು. ನಿರ್ಮಲೆಯು ತಲೆ ತಗ್ಗಿಸಿಕೊಂಡು ಅಳುತ್ತಲೇ ಇದ್ದಳು. ರುಕ್ಮಿಣಿಯು ಎಷ್ಟೆಷ್ಟೋ ಸಮಾಧಾನ ಹೇಳಿದಳು. ಆದರೆ ಅವಳ ಕಣ್ಣೀರು ಕಡಿಮೆಯಾಗಲಿಲ್ಲ; ಶೋಕದ ತಾಪ ತಗ್ಗಲಿಲ್ಲ.

ಮೂರು ಘಂಟೆಗೆ ಜಯರಾಮನು ಶಾಲೆಯಿಂದ ಹಿಂತಿರುಗಿದನು. ಅವನು ಬಂದನೆಂದು ತಿಳಿದೊಡನೆಯೇ ನಿರ್ಮಲೆಯು ಆತುರದಿಂದೆದ್ದು ಅವನ ಕೊಠಡಿಯ ಬಾಗಿಲ ಬಳಿ ಬಂದು ಕೇಳಿದಳು—ಜಯರಾಮ! ತಮಾಷೆಗೇನಾದರೂ ತೆಗೆದಿಟ್ಟಿದ್ದರೆ ಕೊಟ್ಟುಬಿಡು! ದುಃಖಿಯ ಮನಸನ್ನು ನೋಯಿಸುವುದರಿಂದ ನಿನಗೇನು ಪ್ರಯೋಜನ?

ಜಯರಾಮನು ಕ್ಷಣಕಾಲ ಕಾತರನಾದನು. ಚೋರಕಲೆಯಲ್ಲಿ ಇದೇ

ಅವನ ಪ್ರಥಮ ಪ್ರಯಾಸವಾಗಿತ್ತು; ಹಿಂಸೆಯಿಂದ ಮನೋರಂಜನೆಯಾಗುವಂತಹ ಕಠೋರತೆ ಅವನಿಗಿನ್ನೂ ಪ್ರಾಪ್ತವಾಗಿರಲಿಲ್ಲ. ಪೆಟ್ಟಿಗೆಯು ಅವನ ಹತ್ತಿರ ಇದ್ದಿದ್ದರೆ ಅದನ್ನು ಪುನಃ ಅದೇ ಅಲಮಾರಿನಲ್ಲಿಟ್ಟು ಬಿಡುತ್ತಿದ್ದನು. ಆದರೆ ಅದು ಅವನ ಕೈಯಿಂದ ಹೊರಟುಹೋಗಿತ್ತು. ಅವನ ಮಿತ್ರರೆಲ್ಲಾ ಸೇರಿ ಅದನ್ನು ಸರಾಫ್ ಕಟ್ಟೆಗೆ ತೆಗೆದುಕೊಂಡು ಹೋಗಿ, ಹತ್ತಕ್ಕೆ ಒಂದಾಗಿ ಮಾರಿಬಿಟ್ಟಿದ್ದರು. ಕಳ್ಳತನಕ್ಕೆ ಸುಳ್ಳೇ ರಕ್ಷೆ! ಅಂತೆಯೇ ಜಯರಾಮನು ಹೇಳಿದನು—ಭಲಾ! ಅಮ್ಮಾ, ನಾನು ನಿಮ್ಮ ಸಂಡಗ ಈ ರೀತಿ ತಮಾಷೆ ಮಾಡುವೆನೇ? ನೀವಿನ್ನೂ ನನ್ನ ಮೇಲೆ ಸಂಶಯಪಡುತ್ತಿರುವಿರಿ! ರಾತ್ರಿ ನಾನು ಮನೆಯಲ್ಲಿರಲಿಲ್ಲವೆಂದು ಆಗಲೇ ತಿಳಿಸಿರುವೆನು ಆಷ್ಟಾದರೂ ನಿಮಗೆ ನಂಬಿಕೆಯೇ ಇಲ್ಲ! ನನ್ನನ್ನು ಇಷ್ಟು ನೀಚನೆಂದು ತಿಳಿದುದಕ್ಕಾಗಿ ನನಗೆ ಬಹಳ ವ್ಯಸನವೆನಿಸುತ್ತದೆ.

ನಿರ್ಮಲೆಯು ಕಣ್ಣೀರು ಒರೆಸಿಕೊಳ್ಳುತ್ತ ಹೇಳಿದಳು—ನನಗೆ ನಿನ್ನ ಮೇಲೆ ಸಂಶಯವಿಲ್ಲ, ಜಯರಾಮ! ನಾನು ನಿನಗೆ ಕಳ್ಳತನ ಹೊರಿಸುವುದಿಲ್ಲ. ತಮಾಷೆಗಾಗಿ ಎತ್ತಿಟ್ಟಿರಬಹುದೆಂದು ಕೇಳಿದೆನು.

ಜಯರಾಮನು ಅವರನ್ನು ಸಮಾಧಾನಪಡಿಸುತ್ತ ಹೇಳಿದನು—ನಡೆಯಿರಿ, ನೋಡೋಣ! ಯಾರು ತೆಗೆದುಕೊಂಡು ಹೋದರು? ಕಳ್ಳನು ಯಾವ ಮಾರ್ಗದಿಂದ ಬಂದಿರುವನು?

ಅಡಿಗೆಯವಳು— ಕಳ್ಳರು ಬರುವುದಕ್ಕೇನು ಅಡ್ಡಿ ಬಾಬೂ! ಇಲಿಯ ಬಿಲವಿದ್ದರೆ ಅದರಿಂದಲೇ ಬರುವರು. ಇಲ್ಲಂತೂ ನಾಲ್ಕು ಕಡೆಯಲ್ಲೂ ಕಿಟಕಿಗಳು!

ಜಯರಾಮ—ಎಲ್ಲಾ ಕಡೆಯಲ್ಲೂ ಚೆನ್ನಾಗಿ ಹುಡುಕಿ ನೋಡಿದಿರಾ?

ನಿರ್ಮಲೆ—ಮನೆಯೆಲ್ಲಾ ಹುಡುಕಿಯಾಯಿತು. ಮತ್ತೆಲ್ಲಿ ಹುಡುಕಲಿ?

ಜಯರಾಮ— ನೀವು ಮಲಗಿಬಿಟ್ಟರೆ ಏನಾದರೂ ಗೊತ್ತೇ ಆಗುವುದಿಲ್ಲ. ಅಂತಹ ಗಾಢನಿದ್ರೆಯೇ!

ನಾಲ್ಕು ಘಂಟೆಗೆ ಮುನ್ಷಿಯವರು ಮನೆಗೆ ಬಂದರು. ನಿರ್ಮಲೆಯ ಸ್ಥಿತಿಯನ್ನು ನೋಡಿ ಕೇಳಿದರು—ಏಕೆ? ದೇಹಸ್ಥಿತಿ ಸರಿಯಾಗಿದೆಯಷ್ಟೆ? ಎನ್ನುತ್ತ, ಆಶಾಳನ್ನು ಎತ್ತಿಕೊಂಡರು.

ನಿರ್ಮಲೆಗೆ ಏನೂ ಉತ್ತರ ಕೊಡಲಾಗಲಿಲ್ಲ; ಪುನಃ ಅಳತೊಡಗಿದಳು.

ಅಡಿಗೆಯವಳು—ಹೀಗೆಂದೂ ಆಗಿರಲಿಲ್ಲ! ನನ್ನ ಜೀವನವನ್ನೆಲ್ಲಾ ಈ ಮನೆಯಲ್ಲೇ ಕಳೆದಿರುವೆನು; ಇದುವರೆಗೂ ಒಂದು ಕಾಸೂ ಕಳ್ಳತನವಾಗಿರಲಿಲ್ಲ. ಅಡಿಗೆಯವಳೇ ಕದ್ದಿರಬೇಕೆಂದು ಜನರು ಆಡಿಕೊಳ್ಳುವರು. ಭಗವಂತನೇ ನನ್ನ ಮಾನ ಕಾಪಾಡಬೇಕು!

ಮುನ್ಷಿಯವರು ಕೋಟಿನ ಗುಂಡಿ ಬಿಚ್ಚುತ್ತಿದ್ದರು; ಅದನ್ನು ಹಾಗೆಯೇ ಹಾಕಿ ಕೇಳಿದರು -ಏಕೆ, ಏನಾಯಿತು? ಏನಾದರೂ ಪದಾರ್ಥ ಕಳ್ಳತನ ಆಯಿತೇ?

ಅಡಿಗೆಯವಳು—ಬಹೂಜೀವರ ಒಡವೆಗಳೆಲ್ಲಾ ಕಳವಾಯಿತು

ಮುನ್ಷಿ—ಎಲ್ಲಿರಿಸಿತ್ತು?

ನಿರ್ಮಲೆಯು ಬಿಕ್ಕಿಬಿಕ್ಕಿ ಅಳುತ್ತ ರಾತ್ರಿ ನಡೆದ ಘಟನೆಯನ್ನು ವರ್ಣಿಸಿದಳು. ಆದರೆ, ಜಯರಾಮನಂತೆ ಯಾರೋ ತನ್ನ ಕೊಠಡಿಯಿಂದ ಹೊರಗೆ ಹೋದರೆಂದು ಮಾತ್ರ ತಿಳಿಸಲಿಲ್ಲ!

ಮುನ್ಷಿಯವರು ಒಮ್ಮೆ ನಿಟ್ಟುಸಿರು ಬಿಟ್ಟು ಹೇಳಿದರು—ಆಹಾ! ಭಗವಂತನೂ ಬಹಳ ಅನ್ಯಾಯಿ! ದುಃಖಿಗಳಿಗೇ ಮೇಲಿಂದ ಮೇಲೆ ದುಃಖ ಕೊಡುವನು. ಕೆಟ್ಟ ದಿನಗಳು ಸಮೀಪಿಸಿದಂತೆ ತೋರುವುದು. ಆದರೆ ಕಳ್ಳನು ಯಾವ ಹಾದಿಯಿಂದ ಬಂದನು? ಬರಲು ಮಾರ್ಗವೇ ಇಲ್ಲವಲ್ಲಾ?. ಹಾ, ದೇವಾ! ನನಗಿಂತಹ ಶಿಕ್ಷೆ ವಿಧಿಸಲು, ನಾನಾವ ಪಾಪ ಮಾಡಿದೆ? ಒಡವೆಯ ಪೆಟ್ಟಿಗೆಯನ್ನು ಹಲಗೆಯ ಮೇಲಾಗಲಿ, ಅಲಮಾರಿನಲ್ಲಾಗಲಿ ಇರಿಸಬೇಡವೆಂದು ನಾನೆಷ್ಟೋ ಬಾರಿ ಹೇಳಿದೆ; ಯಾರೂ ಕೇಳಲಿಲ್ಲ!

ನಿರ್ಮಲೆ—ಇದ್ದಕ್ಕಿದ್ದಂತೆ ಹೀಗೆ ಮಾಯವಾಗುವುದೆಂದು ನನಗೇನು ಗೊತ್ತಿತ್ತು?

ಮುನ್ಷಿ—ಎಲ್ಲಾ ದಿನಗಳೂ ಒಂದೇ ಸಮನಾಗಿರುವುದಿಲ್ಲವೆಂದಷ್ಟು ಗೊತ್ತಿರಲಿಲ್ಲವೇ? ಈಗ ಮಾಡಿಸಬೇಕಾದರೆ ಹತ್ತು ಸಾವಿರಕ್ಕಿಂತ ಹೆಚ್ಚಾಗುವುದು. ಅಲ್ಲದೆ ಈಗಿನ ನನ್ನ ವರಮಾನವನ್ನೂ ನೀನು ನೋಡಿರುವೆ. ಮನೆಯ ಖರ್ಚನ್ನು ನಿರ್ವಹಿಸುವುದೇ ಕಷ್ಟವಾಗಿದೆ; ಹೀಗಿರುವಾಗ ಒಡವೆ ಮಾಡಿಸಲಾಗುವುದೇ? ಹೋಗಿ, ಪೋಲೀಸ್ ಸ್ಟೇಷನ್ನಿನಲ್ಲಿ ತಿಳಿಸಿ ನೋಡುವೆನು; ಆದರೆ ಸಿಗುವುದೆಂಬ ಯಾವ ಆಸೆಯೂ ಇಲ್ಲ!

ನಿರ್ಮಲೆಯು ದುಃಖದಿಂದ ನುಡಿದಳು— ಪೋಲೀಸಿಗೆ ತಿಳಿಸುವುದರಿಂದ ಏನೂ ಪ್ರಯೋಜನವಿಲ್ಲವೆಂದು ತಿಳಿದೂ ಏಕೆ ಹೋಗುವಿರಿ ?

ಮುನ್ಷಿ— ಸುಮ್ಮನಿರಲು ಮನಸೊಪ್ಪುವುದಿಲ್ಲ. ಇಷ್ಟು ಭಾರಿಯ ನಷ್ಟ ಹೊಂದಿ, ಸುಮ್ಮನಿರಲು ಸಾಧ್ಯವೇ ?

ನಿರ್ಮಲೆ—ಸಿಗುವದಾಗಿದ್ದಿದ್ದರೆ ಹಾಳಾಗುತ್ತಿತ್ತೇಕೆ? ಅದೃಷ್ಟವಿರಲಿಲ್ಲ; ಅದೂ ಹಾಳಾಯಿತು !

ಮುನ್ಷಿ— ಅದೃಷ್ಟವಿದ್ದರೆ ಸಿಗುವುದು, ಇಲ್ಲದಿದ್ದರೆ ತಿಳಿದೇ ಇದೆ ! ಎನ್ನುತ್ತಾ ಮುನ್ಷಿಯವರು ಕೊಠಡಿಯಿಂದ ಹೊರಟರು.

ನಿರ್ಮಲೆಯು ಅವರ ಕೈಹಿಡಿದು ಹೇಳಿದಳು— ಹೋಗಬೇಡಿರೆಂದು ಹೇಳುವೆನು ತರುವ ಬದಲು ಎಲ್ಲಾದರೂ ತೆರಬೇಕಾದೀತು ?

ಮುನ್ಷಿಯವರು ಕೈ ಬಿಡಿಸಿಕೊಂಡು ಹೇಳಿದರು—ನೀನೇಕೆ ಚಿಕ್ಕ ಮಕ್ಕಳಂತೆ ಹಟ ಮಾಡುವೆ ? ಹತ್ತು ಸಾವಿರ ರೂಪಾಯಿಗಳ ನಷ್ಟವನ್ನು ಸಹಿಸಿ ಸುಮ್ಮನಿರಲಾಗುವುದೇ ? ನನ್ನ ಮನಸಿಗೆಷ್ಟು ದುಃಖವಾಗುತ್ತಿದೆ ಯೆಂದು ನಾನೇ ಬಲ್ಲೆ !

ಮುನ್ಷಿಯವರಿಗೆ ಮುಂದೆ ಮಾತನಾಡಲಾಗಲಿಲ್ಲ. ದುಃಖ ಉಕ್ಕಿ ಬಂತು. ಅವರು ಅತಿ ವೇಗದಿಂದ ಕೊಠಡಿಯ ಹೊರಗೆ ಬಂದು ಪೋಲೀಸ ಠಾಣೆಗೆ ಹೋದರು. ಠಾಣೇದಾರನು ಮುನ್ಷಿಯವರನ್ನು ಬಹಳ ಗೌರವಿಸುತ್ತಿದ್ದನು. ಹಿಂದೊಮ್ಮೆ ಇವರು ಅವನನ್ನು ಒಂದು ಲಂಚದ ಮೊಕದ್ದಮೆಯಿಂದ ರಕ್ಷಿಸಿದ್ದರು. ಅವನು ಮುನ್ಷಿಯವರ ಸಂಗಡಲೇ ಪತ್ತೆ ಮಾಡಲು ಹೊರಟು ಬಂದನು. ಅವನ ಹೆಸರು ಅಲಾಯರ್‌ಖಾನ್.

ಸಾಯಂಕಾಲವಾಗಿತ್ತು. ಠಾಣೇದಾರನು ಮುನ್ಷಿಯವರ ಮನೆಯ ಸುತ್ತ ಮುತ್ತಲೂ ಚೆನ್ನಾಗಿ ಪರೀಕ್ಷಿಸಿ ನೋಡಿದನು. ನಂತರ ಒಳಗಡೆ ಬಂದು, ನಿರ್ಮಲೆಯ ಕೊಠಡಿಯನ್ನು ನಾಲ್ಕೂ ಕಡೆ ದಿಟ್ಟಿಸಿ ನೋಡಿದನು. ಬಳಿಕ ಮೇಲ್ಛಾವಣಿಯನ್ನೂ ಒಮ್ಮೆ ಗಮನವಿಟ್ಟು ಪರೀಕ್ಷಿಸಿದನು. ಮೊಹಲ್ಲೆಯ ನಾಲ್ಕಾರು ಜನರೊಡನೆ ಸುಮ್ಮಸುಮ್ಮನೆ ಒಂದೆರಡು ಮಾತ್ಸುಗಳನ್ನಾಡಿದನು. ಕಡೆಗೆ ಮುನ್ಷಿಯವರೊಡನೆ ಹೇಳಿದನು—ಸ್ವಾಮೀ ! ದೇವರಾಣೆಗೂ ಹೇಳುವೆನು, ಇದು ಖಂಡಿತವಾಗಿಯೂ ಹೊರಗಿನವರ ಕೆಲಸವಲ್ಲ. ನನ್ನ ಮಾತು

ಸುಳ್ಳಾದರೆ ಇಂದಿನಿಂದಲೇ ಠಾಣೇದಾರಿಯನ್ನು ಬಿಟ್ಟು ಬಿಡುವೆನು! ಮನೆಯವರ ಪೈಕಿ ನಿಮಗಾರಮೇಲೂ ಅನುಮಾನವಿಲ್ಲವೇ?

ಮುನ್ಷಿ—ಇತ್ತೀಚೆಗೆ ಮನೆಯಲ್ಲಿ ಅಡಿಗೆಯವಳೊಬ್ಬಳ ಹೊರತು ಬೇರೆ ಯಾರೂ ಹೊರಗಿನವರಿಲ್ಲ.

ಠಾಣೇದಾರ-ಪಾಪ! ಅವಳೀ ಕೆಲಸ ಮಾಡಿಲ್ಲ. ಇಷ್ಟು ಭಾರಿಯ ಕಳ್ಳತನ ಮಾಡಬೇಕಾದರೆ ಬಹಳ ಧೈರ್ಯ ಬೇಕು.

ಮುನ್ಷಿ—ಹಾಗಿದ್ದರೆ ಮನೆಯಲ್ಲಿ ಇನ್ನಾರಿರುವರು? ನನ್ನ ಹುಡುಗರಿಬ್ಬರು, ಹೆಂಡತಿ, ಅಕ್ಕ. ಇವರ ಪೈಕಿ ಯಾರಲ್ಲಿ ಅನುಮಾನವಿಡಲಿ?

ಠಾಣೇದಾರ—ಆದಾರೇ ಆಗಲಿ, ಈ ಕೆಲಸವಂತೂ ಹೊರಗಿನವರದಲ್ಲ. ನಾಲ್ಕಾರು ದಿನಗಳಲ್ಲೇ ಇದರ ಪತ್ತೆ ಹಚ್ಚಿ ನಿಮಗೆ ತಿಳಿಸುವೆನು. ಆದರೆ ಅಷ್ಟೂ ಮಾಲು ಸಿಗುವುದೆಂಬ ಭರವಸೆ ಕೊಡಲಾರೆ! ಕಳ್ಳನನ್ನು ಮಾತ್ರ ಖಂಡಿತ ಪತ್ತೆ ಮಾಡುವೆನು.

ಠಾಣೇದಾರನು ಹೋದನಂತರ, ಮುನ್ಷಿಯವರು ಅವನ ಮಾತುಗಳನ್ನು ನಿರ್ಮಲೆಗೆ ಹೇಳಿದರು. ನಿರ್ಮಲೆ ಹೆದರಿದಳು. 'ನಿಮ್ಮ ಕಾಲಿಗೆ ನಮಸ್ಕರಿಸಿ ಕೇಳಿಕೊಳ್ಳುವೆನು, ಠಾಣೇದಾರನಿಗೆ ಪತ್ತೆ ಮಾಡಬೇಡವೆಂದು ತಿಳಿಸಿಬಿಡಿ!' ಎಂದಳು.

ಮುನ್ಷಿ—ಅದೇಕೆ?

ನಿರ್ಮಲೆ—ಏಕೆಂದು ಹೇಳಲಿ? ಇದು ಮನೆಯವರ ಕೆಲಸವೇ ಎಂದು ಅವನು ಹೇಳುತ್ತಿಲ್ಲವೇ?

ಮುನ್ಷಿ—ಅವನು ಹೇಳಿದರೇನಾಯಿತು?

ಜಯರಾಮನು ತನ್ನ ಕೊಠಡಿಯಲ್ಲಿ ಕುಳಿತು ಭಗವಂತನನ್ನು ಬೇಡಿಕೊಳ್ಳುತ್ತಿದ್ದನು. ಅವನ ಮುಖಕಾಂತಿ ಮಲಿನವಾಯಿತು. ಪೋಲೀಸಿನವರು ಮುಖ ನೋಡಿದ ಮಾತ್ರಕ್ಕೇ ಪತ್ತೆ ಹಚ್ಚುವರೆಂದು ಅವನು ಕೇಳಿ ತಿಳಿದುಕೊಂಡಿದ್ದನು. ಕೊಠಡಿಯಿಂದ ಹೊರಕ್ಕೆ ಬರುವಷ್ಟು ಅವನಿಗೆ ಧೈರ್ಯವಾಗಲಿಲ್ಲ. ತಂದೆ ಮತ್ತು ಠಾಣೇದಾರನಲ್ಲಿ ಏನು ನಡೆಯಿತೆಂದು ತಿಳಿಯಲು ಅವನು ಬಹಳ ಕಾತುರನಾಗಿದ್ದನು. ಠಾಣೇದಾರನು ಅತ್ತ ಹೋದೊಡನೆಯೇ ಅಡಿಗೆಯವಳು ಯಾವುದೋ ಕೆಲಸಕ್ಕಾಗಿ ಹೊರಬಂದಳು. ಜಯರಾಮನು ಅವಳನ್ನು ಕರೆದು ಕೇಳಿದನು—ಠಾಣೇದಾರನು ಏನು ಹೇಳುತ್ತಿದ್ದ?

ಅಡಿಗೆಯವಳು — ಇದು ಮನೆಯವರೇ ಯಾರೋ ಮಾಡಿರುವ ಕೆಲಸ. ಹೊರಗಿನವರು ಖಂಡಿತ ಮಾಡಿಲ್ಲ—ಎಂದು ಹೇಳುತ್ತಿದ್ದರು.

ಜಯರಾಮ—ಅದಕ್ಕೆ ಬಾಬೂಜೀಯವರೇನೆಂದರು ?

ಅಡಿಗೆಯವಳು— ಏನೂ ಹೇಳಲಿಲ್ಲ ಸುಮ್ಮನೆ ನಿಂತು 'ಹುಂ; ಹುಂ;' ಎನ್ನುತ್ತಿದ್ದರು. ಮನೆಯ ಪೈಕಿ ನಾನೊಬ್ಬಳೇ ಅಲ್ಲವೇ ಹೊರಗಿನವಳು? ಬಾಕಿ ಎಲ್ಲರೂ ತನ್ಮವರೇ !

ಜಯರಾಮ—ನೀನೊಬ್ಬಳೇ ಏಕೆ ? ನಾನೂ ಹೊರಗಿನವನೆ !

ಅಡಿಗೆಯವಳು—ನೀವೇಕೆ ಹೊರಗಿನವರಾಗುವಿರಿ, ಬಾಬೂ !

ಜಯರಾಮ—ಮನೆಯಲ್ಲಿ ಯಾರ ಮೇಲೂ ಸಂದೇಹವಿಲ್ಲವೆಂದು ಬಾಬೂಜೀಯವರು ತಿಳಿಸಲಿಲ್ಲವೇ ?

ಅಡಿಗೆಯವಳು—ಏನೂ ಹೇಳಿದಂತೆ ತೋರಲಿಲ್ಲ. ಬಾಬೂಜೀಯವರು ನನ್ನ ಮೇಲೇ ಕಳ್ಳತನ ಹೊರಿಸುತ್ತಿದ್ದರೋ, ಏನೋ ? ಅದಕ್ಕೆ ಠಾಣೇ ದಾರನು 'ಪಾಪ ! ಅವಳಿಗೇನೂ ಗೊತ್ತಿಲ್ಲ. ಅವಳೀ ಕೆಲಸ ಮಾಡಿರ ಲಾರಳು' ಎಂದನು.

ಜಯರಾಮ—ಹಾಗಿದ್ದರೆ ನೀನೂ ತಪ್ಪಿಸಿಕೊಂಡೆ; ಉಳಿದವನು ನಾನೊಬ್ಬನೇ ! ನೀನೇ ಹೇಳು, ಆ ದಿವಸ ನಾನು ಮನೆಯಲ್ಲಿದ್ದೆನೇ ?

ಅಡಿಗೆಯವಳು—ಇಲ್ಲ, ಬಾಬೂ ! ಆದಿನ ನೀವು ಸಿನೆಮಾ ನೋಡಲು ಹೋಗಿದ್ದಿರಿ !

ಜಯರಾಮ —ನನ್ನ ಪರವಾಗಿ ಸಾಕ್ಷಿ ಹೇಳುವೆಯಾ ?

ಅಡಿಗೆಯವಳು— ಇದೇಕೆ ಹೀಗೆನ್ನುವಿರಿ, ಬಾಬೂ ? ಬಹೂಜೀಯವರು ಪತ್ತೇದಾರಿ ನಿಲ್ಲಿಸಿಬಿಡುವರು.

ಜಯರಾಮ—ನಿಜವಾಗಿಯೂ ?

ಅಡಿಗೆಯವಳು – ಹೌದು, ಬಾಬೂ ! 'ಒಡವೆಗಳು ಹೋದವು; ಇನ್ನು ಸಿಗುವಂತಿಲ್ಲ. ಸುಮ್ಮನೆ ಪತ್ತೆ ಮಾಡಿಸುವಿರೇಕೆ ?' ಎಂದು ಬಹೂಜೀ ಯವರು ಆಗಾಗ ಹೇಳುತ್ತಿರುವರು. ಆದರೆ ಬಾಬೂಜೀ ಕೇಳುವುದಿಲ್ಲ.

ಐದಾರು ದಿನಗಳವರೆಗೆ ಜಯರಾಮನು ಹೊಟ್ಟೆತುಂಬ ಊಟ ಮಾಡ ಲಿಲ್ಲ. ಒಮ್ಮೊಮ್ಮೆ ಒಂದೆರಡು ತುತ್ತು ತಿನ್ನುತ್ತಿದ್ದನು. ಒಮ್ಮೊಮ್ಮೆ ಹಸಿವೆ

ಇಲ್ಲ—ಎನ್ನುತ್ತಿದ್ದನು. ಅವನ ಮುಖಕಾಂತಿಯೇ ಮಾಯವಾಯಿತು! ರಾತ್ರಿ ಎಲ್ಲಾ ನಿದ್ದೆ ಮಾಡುತ್ತಿರಲಿಲ್ಲ. ಕ್ಷಣಕ್ಷಣಕ್ಕೂ ಠಾಣೇದಾರನ ಯೋಚನೆ ಬರುತ್ತಿತ್ತು. ವಿಷಯ ಇಷ್ಟು ಮಿತಿಮೀರುವುದೆಂದು ತಿಳಿದಿದ್ದರೆ ಅವನೀ ಕೆಲಸ ಮಾಡುತ್ತಿರಲಿಲ್ಲ. ಕಳ್ಳನು ಕದ್ದುಕೊಂಡು ಹೋದನೆಂದು ತಿಳಿಯುವುದು; ನನ್ನ ಮೇಲೆ ಯಾರಿಗೂ ಅನುಮಾನವುಂಟಾಗುವುದಿಲ್ಲ—ಎಂದು ಅವನು ಭಾವಿಸಿದ್ದನು. ಆದರೆ ಈಗ ಕಳ್ಳತನವು ರಟ್ಟಾಗುವಂತೆ ತೋರುತ್ತಿತ್ತು. ಠಾಣೇದಾರನು ಪತ್ತೆ ಮಾಡುತ್ತಿರುವ ರೀತಿಯನ್ನು ನೋಡಿ ಜಯರಾಮನಿಗೆ ಮನಸಿನಲ್ಲೇ ಹೆದರಿಕೆಯಾಗುತ್ತಿತ್ತು!

ಏಳನೆಯ ದಿನ ಜಯರಾಮನು ಮನೆಗೆ ಬಂದಾಗ ಬಹಳ ಚಿಂತಿತನಾಗಿದ್ದನು ಅಂದಿನವರೆಗೂ ಅವನಿಗೆ ತಪ್ಪಿಸಿಕೊಳ್ಳುವ ಆಸೆಯಿತ್ತು. ಇದುವರೆಗೆ ಮಾಲು ಹೊರಬಿದ್ದಿರಲಿಲ್ಲ. ಆದರೆ ಈಗ ಮಾಲು ಹೊರಬಿತ್ತೆಂಬ ವಿಷಯ ಅವನಿಗೆ ತಿಳಿಯಬಂತು. ಇನ್ನೇನು, ಠಾಣೇದಾರನು ಪೋಲೀಸಿನವರನ್ನು ಕರೆದುಕೊಂಡು ಬರುತ್ತಿರಬಹುದು! ತಪ್ಪಿಸಿಕೊಳ್ಳ ಯಾವ ಉಪಾಯವೂ ಇಲ್ಲ. ಒಂದು ವೇಳೆ ಲಂಚ ಕೊಟ್ಟರೆ ಠಾಣೇದಾರನು ಪತ್ತೆಯ ತರದೂದನ್ನು ನಿಲ್ಲಿಸಬಹುದು. ಲಂಚ ಕೊಡಲು ದುಡ್ಡು ನನ್ನ ಬಳಿ ಇದೆ. ಆದರೇನು? ವಿಷಯವನ್ನು ಬಚ್ಚಿಡಲಾಗುವುದೇ? ಇನ್ನೂ ಮಾಲು ಸಹ ಹೊರಬಿದ್ದಿಲ್ಲ, ಅಷ್ಟರಲ್ಲಿ ಮಗನೇ ಕದ್ದಿರುವನು—ಎಂದು ಊರಿನ ಜನರು ಆಡಿಕೊಳ್ಳುತ್ತಿರುವರು. ಹೀಗಿರುವಲ್ಲಿ ಮಾಲು ಹೊರಬಿದ್ದಿತೆಂದರೆ ಬೀದಿಬೀದಿಯಲ್ಲೂ ಇದೇ ಮಾತು ಹರಡುವುದು. ಆಗ ನಾನು ಹೇಗೆ ಮುಖ ತೋರಿಸಲಿ?—, ಎಂದು ಮುಂತಾಗಿ ಯೋಚಿಸುತ್ತಿದ್ದನು.

ಮುನ್ಶಿಯವರು ಕಛೇರಿಯಿಂದ ಹಿಂತಿರುಗಿದಾಗ ಬಹಳ ಗಾಬರಿಗೊಂಡಿದ್ದರು. ತಲೆಯ ಮೇಲೆ ಕೈಯನ್ನಿಟ್ಟು ಮಂಚದ ಮೇಲೆ ಸುಮ್ಮನೆ ಕುಳಿತುಬಿಟ್ಟರು.

ನಿರ್ಮಲೆ—ಏಕೆ, ಬಟ್ಟೆ ತೆಗೆಯುವುದಿಲ್ಲವೇ? ಈ ದಿನ ನಿತ್ಯಕ್ಕಿಂತ ಹೊತ್ತಾಯಿತು!

ಮುನ್ಶಿ—ಏನು ಮಾಡಲೂ ತೋರುತ್ತಿಲ್ಲ ನಿನಗೇನೂ ಸಮಾಚಾರ ತಿಳಿಯಲಿಲ್ಲವೇ?

ನಿರ್ಮಲೆ—ಏಕೆ, ಏನಾಯಿತು ? ನನಗೇನೂ ತಿಳಿಯಲಿಲ್ಲವಲ್ಲಾ ?

ಮುನ್ಷಿ—ಮಾಲು ಹೊರಬಿದ್ದಿದೆ. ಇನ್ನು ಜಯರಾಮನು ಉಳಿಯುವುದು ಕಷ್ಟ!

ನಿರ್ಮಲೆಗೆ ಆಶ್ಚರ್ಯವಾಗಲಿಲ್ಲ. ಅವಳೆಂದಳು—ಪೋಲೀಸ್ ಠಾಣೆಗೆ ವಿಷಯ ತಿಳಿಸಬೇಡಿರೆಂದು ನಾನಾಗಲೇ ಹೇಳಲಿಲ್ಲವೇ ?

ಮುನ್ಷಿ—ಏಕೆ, ನಿನಗೆ ಜಯರಾಮನ ಮೇಲೆ ಸಂಶಯವಿತ್ತೇ ?

ನಿರ್ಮಲೆ—ಸಂಶಯವೇಕಿರಲಿಲ್ಲ ? ಆ ದಿನ ಅವನು ನನ್ನ ಕೊಠಡಿಯಿಂದ ಹೊರಗೆ ಹೋದುದನ್ನು ನಾನು ನೋಡಿದೆನು.

ಮುನ್ಷಿ—ಹಾಗಿದ್ದರೆ ನೀನು ನನಗೇಕೆ ತಿಳಿಸಲಿಲ್ಲ ?

ನಿರ್ಮಲೆ—ಇದು ನಾನು ಹೇಳುವ ಮಾತಾಗಿರಲಿಲ್ಲ. ನಾನು ಕೇವಲ ಈರ್ಷ್ಯೆಯಿಂದ ಈ ಆಕ್ಷೇಪಣೆಯನ್ನು ಹೇಳುತ್ತಿರುವೆನೆಂಬ ಭಾವನೆ ನಿಮಗಾಗುತ್ತಿತ್ತು. ಹೌದೋ, ಅಲ್ಲವೋ ? ಹೇಳಿ, ಸುಳ್ಳುಹೇಳಬೇಡಿ !

ಮುನ್ಷಿ—ಸಂಭವವುಂಟು. ನಾನು ಇಲ್ಲೆನ್ನಲಾರೆ. ಆದರೂ ಆ ಹೊತ್ತಿನಲ್ಲಿ ನೀನು ನನಗೆ ತಿಳಿಸಬೇಕಿತ್ತು. ಪೋಲೀಸಿಗೆ ರಿಪೋರ್ಟು ಮಾಡುವ ಅವಶ್ಯಕತೆಯುಂಟಾಗುತ್ತಿರಲಿಲ್ಲ. ನಿನ್ನ ಒಳ್ಳೆಯ ಹೆಸರಿಗಾಗಿ ನೀನು ಚಿಂತಿಸಿದೆಯೇ ಹೊರತು, ಇದರ ಪರಿಣಾಮ ಏನಾಗುವುದೆಂದು ಯೋಚಿಸಲಿಲ್ಲ ! ನಾನು ಈಗಲೇ ಠಾಣೆಯಿಂದ ಬಂದೆನು. ಅಲಾಯಾರ್ ಖಾನನೂ ಬರುತ್ತಿರಬಹುದು !

ನಿರ್ಮಲೆಯು ಹತಾಶಳಾಗಿ ನುಡಿದಳು—ಇನ್ನೇನು ಗತಿ !

ಮುನ್ಷಿಯವರು ಆಕಾಶದೆಡೆ ದಿಟ್ಟಿಸುತ್ತ ಹೇಳಿದರು—ದೈವೇಚ್ಛೆ ಇದ್ದಂತಾಗಲಿ ! ಲಂಚ ಕೊಡುವುದಕ್ಕೆ ನನ್ನ ಬಳಿ ೧–೨ ಸಾವಿರ ರೂಪಾಯಿಗಳಾದರೂ ಇದ್ದರೆ ಮೊಕದ್ದಮೆಯನ್ನು ದಬಾಯಿಸ್ಬಿ ಬಿಡುತ್ತಿದ್ದೆ ! ಆದರೆ ನನ್ನ ಸ್ಥಿತಿಯನ್ನು ನೀನು ತಿಳಿದೇ ಇರುವೆ. ಇದು ನನ್ನ ದುರದೃಷ್ಟವೆಂದೇ ಹೇಳಬೇಕು; ಮತ್ತೇನೂ ಅಲ್ಲ ! ನಾನು ಮಾಡಿದ ಪಾಪಕ್ಕೆ ದಂಡನೆಯನ್ನು ಮತ್ತಾರನುಭವಿಸುವರು ? ದೊಡ್ಡ ಹುಡುಗನ ಗತಿ ಹಾಗಾಯಿತು, ಇವನ ಗತಿ ಹೀಗಾಗುತ್ತಿದೆ ! ಧೂರ್ತ, ದುಷ್ಟ ಮತ್ತು ಮೈಗಳ್ಳನೇನೋ ಹೌದು.

ಆದರೂ ಎಷ್ಟೇ ಆಗಲಿ ಮಗನಲ್ಲವೇ ? ಒಂದಲ್ಲ ಒಂದು ದಿನ ಬುದ್ಧಿ ಕಲಿತು ಕೊಳ್ಳುತ್ತಿದ್ದ. ಈ ಚಿಂತೆಯನ್ನು ನಾನು ಸಹಿಸಲಾರೆ !

ನಿರ್ಮಲೆ—ಲಂಚಕೊಟ್ಟು ಅವನನ್ನು ಉಳಿಸುವಂತಿದ್ದರೆ, ನಾನು ಎಲ್ಲಿಂದಾದರೂ ರೂಪಾಯಿ ಕೊಡಿಸುವ ಏರ್ಪಾಡು ಮಾಡುವೆನು !

ಮುನ್ಷಿ—ಮಾಡಬಲ್ಲೆಯಾ ? ಎಷ್ಟು ರೂಪಾಯಿಗಳನ್ನು ಕೊಡಿಸ ಬಲ್ಲೆ ?

ನಿರ್ಮಲೆ—ಎಷ್ಟು ಬೇಕಾಗಬಹುದು ?

ಮುನ್ಷಿ—ಒಂದು ಸಾವಿರ ರೂಪಾಯಿಗಿಂತ ಕಡಿಮೆಗೆ ತೀರ್ಮಾನವಾಗ ಲಾಲದು. ಹಿಂದೊಮ್ಮೆ ನಾನು ಇವನಿಂದ ಒಂದು ಮೊಕದ್ದಮೆಗಾಗಿ ಸಾವಿರ ರೂಪಾಯಿಗಳನ್ನು ತೆಗೆದುಕೊಂಡಿದ್ದೆ. ಈಗ ಆ ಋಣವನ್ನು ತೀರಿಸುವ ಕಾಲ ಬಂದೊದಗಿದೆ !

ನಿರ್ಮಲೆ—ಏರ್ಪಾಡು ಮಾಡುವೆನು. ನೀವು ಈಗಲೇ ಠಾಣೆಗೆ ಹೋಗಿ ಬನ್ನಿ.

ಮುನ್ಷಿಯವರು ಠಾಣೆಗೆ ಹೋದರು. ಏಕಾಂತದಲ್ಲಿ ಠಾಣೇದಾರ ನೊಡನೆ ಮಾತನಾಡುವ ಸಮಯ ಸಿಗಲು ಬಹಳ ಹೊತ್ತಾಯಿತು. ಅಲಾ ಯರ್ ಖಾನನನ್ನು ಒಪ್ಪಿಸುವುದು ಅವರಿಗೆ ಬಲು ಕಷ್ಟವಾಯಿತು. ಐನೂರು ರೂಪಾಯಿ ತೆಗೆದುಕೊಂಡೂ, ಏನೋ ಭಾರಿಯ ಉಪಕಾರ ಮಾಡಿದಂತೆ ನಟಿಸಿದನು. ಅಂತೂ ಮುನ್ಷಿಯವರು ಹೋದ ಕೆಲಸವಾಯಿತು. ಹಿಂತಿರುಗಿ ನಿರ್ಮಲೆಯೊಡನೆ ಹೇಳಿದರು—ಅಂತೂ, ಹೋದ ಕೆಲಸ ಮಾಡಿಕೊಂಡೇ ಬಂದೆ. ಅವನನ್ನು ಒಪ್ಪಿಸಬೇಕಾದರೆ ಬಹಳ ಕಷ್ಟವಾಯಿತು. ರೂಪಾಯಿ ಯನ್ನೇನೋ ನೀನು ಕೊಡಿಸಿದೆ; ಆದರೆ ಮಾತನಾಡಿ ಒಪ್ಪಿಸಿದವನು ನಾನೇ ಅಲ್ಲವೇ ? ಅದಿರಲಿ, ಜಯರಾಮನ ಊಟವಾಯಿತೇ ?

ನಿರ್ಮಲೆ—ಇಲ್ಲ. ಸುತ್ತಾಡಲು ಹೋದವನು ಇನ್ನೂ ಮನೆಗೆ ಬಂದಿಲ್ಲ.

ಮುನ್ಷಿ—ಆಗಲೇ ಹನ್ನೆರಡು ಘಂಟೆಯಾಯಿತಲ್ಲವೇ ?

ನಿರ್ಮಲೆ—ಐದಾರು ಸಲ ಅವನ ಕೊಠಡಿಗೆ ಹೋಗಿ ನೋಡಿ ಬಂದೆ. ಇನ್ನೂ ಬಂದಿಲ್ಲ.

ಮುನ್ಷಿ—ಶ್ರೀರಾಮು ?

ನಿರ್ಮಲೆ—ಅವನು ಊಟಮಾಡಿ ಮಲಗಿರುವನು.

ಮುನ್ಷಿ—ಜಯರಾಮನೆಲ್ಲಿ ಹೋದನೆಂದು ಅವನನ್ನು ಕೇಳಲಿಲ್ಲವೇ ?

ನಿರ್ಮಲೆ—ನನ್ನೊಡನೆ ಏನೂ ಹೇಳಲಿಲ್ಲವೆಂದು ಅವನು ಹೇಳುವನು.

ಮುನ್ಷಿಯವರ ಮನಸಿಗೆ ಏನೋ ಒಂದು ಬಗೆಯ ಸಂಶಯವುಂಟಾಯಿತು. ಶ್ರೀರಾಮನನ್ನು ಎಬ್ಬಿಸಿ ಕೇಳಿದರು—ಎಷ್ಟು ಹೊತ್ತಿಗೆ ಬರುವೆನೆಂದು ಜಯರಾಮನು ನಿನ್ನ ಸಂಗಡ ಹೇಳಿ ಹೋದನೇ ? ಎಲ್ಲಿ ಹೋದನು ?

ಶ್ರೀರಾಮನು ಕಣ್ಣು ಉಜ್ಜಿಕೊಳ್ಳುತ್ತ ತಲೆಯಲ್ಲಾಡಿಸಿ ಹೇಳಿದನು—ನನ್ನೊಡನೆ ಏನೂ ಹೇಳಲಿಲ್ಲ.

ಮುನ್ಷಿ—ಬಟ್ಟೆಗಳನ್ನೆಲ್ಲಾ ಹಾಕಿಕೊಂಡು ಹೋಗಿರುವನೇ ?

ಶ್ರೀರಾಮ—ಇಲ್ಲ, ಪಂಚೆ ಮತ್ತು ಷರಟು ಮಾತ್ರ.

ಮುನ್ಷಿ—ಹೋಗುವ ಹೊತ್ತಿನಲ್ಲಿ ಸಂತೋಷದಿಂದಿದ್ದನೇ ?

ಶ್ರೀರಾಮ—ಸಂತೋಷದಿಂದಿದ್ದಂತೆ ತೋರಲಿಲ್ಲ. ಎಷ್ಟೊ ಬಾರಿ ಒಳಗೆ ಬರಲು ಪ್ರಯತ್ನಿಸಿದನು. ಆದರೆ ಬರಲಿಲ್ಲ. ಬಹಳ ಹೊತ್ತಿನ ವರೆಗೆ ಅಂಗಳದಲ್ಲೇ ನಿಂತಿದ್ದು, ನಂತರ ಹೋದನು. ಹೋಗುವ ಹೊತ್ತಿನಲ್ಲಿ ಕಣ್ಣುಗಳನ್ನೊರೆಸಿಕೊಳ್ಳುತ್ತಿದ್ದನು ಈಚೆಗೆ ಕೆಲವು ದಿನಗಳಿಂದ ಆಗಾಗ ಅಳುತ್ತಲೇ ಇದ್ದನು.

ತಮ್ಮ ಜೀವನದ ಆಸೆ ತೀರಿತೋ ಎಂಬಂತೆ ಮುನ್ಷಿಯವರು ಒಂದು ನಿಟ್ಟುಸಿರ್ಗರೆದರು. ನಿರ್ಮಲೆಯೊಡನೆ ಹೇಳಿದರು—ನೀನೇನೋ ಒಳ್ಳೆಯದಕ್ಕೆಂದು ಯೋಚಿಸಿ ಹೀಗೆ ಮಾಡಿದೆ. ಆದರೆ ಶತ್ರುವು ಸಹ ನನ್ನ ಮೇಲೆ ಇಂತಹ ಕಠೋರ ಆಘಾತವನ್ನು ಮಾಡುತ್ತಿರಲಿಲ್ಲ ! ಜಯರಾಮನ ಮಾತೆ ಇದ್ದಿದ್ದರೆ ಈ ರೀತಿ ಸಂಕೋಚ ಮಾಡುತ್ತಿದ್ದಳೇ ? ಎಂದಿಗೂ ಇಲ್ಲ !

ನಿರ್ಮಲೆ—ಡಾಕ್ಟರ್‌ಸಾಹೇಬರ ಬಳಿ ಒಮ್ಮೆ ಹೋಗಿ ನೋಡಿಬರಬಾರದೇ ? ಅಲ್ಲೇನಾದರೂ ಕುಳಿತಿರಬಹುದು. ಎಷ್ಟೋ ಹುಡುಗರು ಅಲ್ಲಿಗೆ ಬರುವರು. ಅವರಲ್ಲಿ ಯಾರನ್ನಾದರೂ ಕೇಳಿದರೆ ಗೊತ್ತಾಗುವುದು. ಎಷ್ಟೆಷ್ಟು ಹೆದರಿ ನಡೆದರೂ ಅಪಯಶಸ್ಸು ನನ್ನ ತಲೆಗೇ ಕಟ್ಟಿತು ! ಆಹಾ !

ಮುನ್ಷಿ—ಅಲ್ಲೂ ಹೋಗಿ ನೋಡುವೆನು. ಮತ್ತೇನು ಮಾಡಲಿ ?

ಮುನ್ಷಿಯವರು ಹೊರಬಂದು ನೋಡಲಾಗಿ ಡಾಕ್ಟರ್ ಸಿಂಹರು ಅಲ್ಲಿ ನಿಂತಿದ್ದರು. ಬೆಚ್ಚಿ ಕೇಳಿದರು—ಬಹಳ ಹೊತ್ತಿನಿಂದ ನಿಂತಿರುವಿರಾ ?

ಡಾಕ್ಟರ್—ಇಲ್ಲ, ಈಗತಾನೇ ಬಂದೆ. ನೀವು ಈ ಹೊತ್ತಿನಲ್ಲಿ ಎಲ್ಲಿ ಹೊರಟಿರಿ ? ಆಗಲೇ ಒಂದು ಘಂಟೆ ಸಮೀಪಿಸುತ್ತ ಬಂತು !

ಮುನ್ಷಿ—ನಿಮ್ಮ ಬಳಿಗೇ ಬರುತ್ತಿದ್ದೆ. ಜಯರಾಮನು ಇನ್ನೂ ಮನೆಗೇ ಬಂದಿಲ್ಲ. ನಿಮ್ಮ ಮನೆ ಕಡೆ ಬಂದಿದ್ದನೇ ?

ಡಾಕ್ಟರ್ ಸಿಂಹರು ಮುನ್ಷಿಯವರ ಎರಡೂ ಕೈಗಳನ್ನು ಹಿಡಿದು ಕೊಂಡು ' ವಕೀಲ ಸಾಹೇಬರೇ ! ಇನ್ನು ಸ್ವಲ್ಪ ಧೈರ್ಯವನ್ನು ತಂದು-ಕೊಳ್ಳಿ ! ' ಎಂದು ಹೇಳುವಷ್ಟರಲ್ಲೇ ಮುನ್ಷಿಯವರು ಮೂರ್ಛಿತರಾಗಿ ನೆಲದ ಮೇಲೆ ಬಿದ್ದರು !

## ಇಪ್ಪತ್ತೊಂದನೆಯ ಪರಿಚ್ಛೇದ

ರುಕ್ಮಿಣಿಯು ಹುಬ್ಬುಗಂಟಿಕ್ಕಿ ಕೇಳಿದಳು—ಹುಡುಗನು ಬರಿಕಾಲಿನಲ್ಲೇ ಶಾಲೆಗೆ ಹೋಗುವನೇ ?

ನಿರ್ಮಲೆಯು ಮಗುವಿನ ತಲೆ ಬಾಚುತ್ತ ಹೇಳಿದಳು—ಅದಕ್ಕೆ ನಾನೇನು ಮಾಡಲಿ ? ನನ್ನ ಹತ್ತಿರ ಹಣವಿಲ್ಲ.

ರುಕ್ಮಿಣಿ—ಒಡವೆ ಮಾಡಿಸುವುದಕ್ಕೆಂದರೆ ದುಡ್ಡಿರುತ್ತದೆ. ಹುಡುಗನ ಕಾಲಿಗೆ ಒಂದು ಜೊತೆ ಬೂಟ್ಸು ತೆಗೆದುಕೊಡಲು ದುಡ್ಡಿಲ್ಲವೇ ? ಇಬ್ಬರಂತೂ ಹೋದರು. ಮೂರನೆಯವನನ್ನೂ ಅಳಿಸಿ ಅಳಿಸಿ ಅಂತ್ಯಗಾಣಿಸಬೇಕೆಂದು ಅಪೇಕ್ಷಿಸುವೆಯಾ ?

ನಿರ್ಮಲೆಯು ಒಮ್ಮೆ ನಿಟ್ಟುಸಿರು ಬಿಟ್ಟು ನುಡಿದಳು—ಯಾರು ಬದುಕ ಬೇಕೋ ಬದುಕುವರು, ಯಾರು ಸಾಯಬೇಕೋ ಸಾಯುವರು ! ನಾನಾರನ್ನೂ ಬದುಕಿಸುವುದೂ ಇಲ್ಲ, ಸಾಯಿಸುವುದೂ ಇಲ್ಲ.

ಈಚೀಚೆಗೆ ಪ್ರತಿದಿನವೂ ಒಂದಲ್ಲ ಒಂದು ಮಾತಿಗಾಗಿ ನಿರ್ಮಲೆ ಮತ್ತು ರುಕ್ಮಿಣಿಯರಲ್ಲಿ ಜಗಳವಾಗುತ್ತಲೇ ಇತ್ತು. ಒಡವೆಗಳು ಕಳವಾದಂದಿನಿಂದ ನಿರ್ಮಲೆಯು ಸ್ವಭಾವವೇ ಬದಲಾಯಿಸಿತು. ಅವಳು ಒಂದೊಂದು

ಕಾಸನ್ನೂ ಖರ್ಚು ಮಾಡದೆ ಶೇಖರಿಸುತ್ತಿದ್ದಳು. ಶ್ರೀರಾಮನು ಅತ್ತು-ಅತ್ತು ಸಾಕಾದರೂ ಮಿಠಾಯಿಗೆ ಒಂದು ಕಾಸೂ ಕೊಡುತ್ತಿರಲಿಲ್ಲ. ಈ ವ್ಯವಹಾರವು ಕೇವಲ ಶ್ರೀರಾಮನೊಡನೆ ಮಾತ್ರ ಅಲ್ಲ. ಸ್ವತಃ ತನ್ನ ಅವಶ್ಯಕತೆಗಳನ್ನೇ ಅಲಕ್ಷಿಸುತ್ತಿದ್ದಳು. ಪಂಚೆ ಹರಿದು ತುಂಡಾದ ಹೊರತು ಹೊಸ ಪಂಚೆ ತರಿಸುತ್ತಿರಲಿಲ್ಲ. ತಿಂಗಳು ಗಟ್ಟಲೆ ತಲೆಎಣ್ಣೆಯನ್ನು ತರಿಸುತ್ತಿರಲಿಲ್ಲ. ತಾಂಬೂಲವೆಂದರೆ ಅವಳಿಗೆ ಪ್ರಾಣ. ಅಷ್ಟಾದರೂ ಎಷ್ಟೋ ದಿನಗಳು ಅದನ್ನೂ ತರಿಸುತ್ತಿರಲಿಲ್ಲ. ಇಷ್ಟೇ ಏಕೆ? ಮಗುವಿಗೆ ಹಾಲನ್ನು ಸಹ ಕೊಳ್ಳುತ್ತಿರಲಿಲ್ಲ. ತನ್ನ ಹೆಣ್ಣು ಮಗುವಿನ ಭವಿಷ್ಯವು ವಿರಾಟ್ ರೂಪವನ್ನು ಧರಿಸಿ ಅವಳ ವಿಚಾರ ಕ್ಷೇತ್ರದಲ್ಲಿ ವಿಹರಿಸುತ್ತಿತ್ತು.

ಮುನ್ಷಿಯವರು ಎಲ್ಲಾ ಕಾರ್ಯಭಾರವನ್ನೂ ಇತ್ತೀಚೆಗೆ ನಿರ್ಮಲೆಗೊಪ್ಪಿಸಿದ್ದರು. ಅವಳ ಯಾವ ಕೆಲಸದಲ್ಲೂ ಅಡ್ಡಿ ಬರುತ್ತಿರಲಿಲ್ಲ. ಗಾಡಿ ಇಲ್ಲದೆಯೇ ಕಛೇರಿಗೆ ಹೋಗುತ್ತಿದ್ದರು. ತಮ್ಮ ಯೌವನ ಕಾಲದಲ್ಲಿಯೂ ಅವರಿಷ್ಟು ಕಷ್ಟ ಪಟ್ಟಿರಲಿಲ್ಲ ಕಣ್ಣುಗಳೂ ಸ್ವಲ್ಪ ಮಂಜಾಗುತ್ತ ಬಂದಿದ್ದುವು. ರಾತ್ರಿಯ ಹೊತ್ತು ಓದಿ ಬರೆಯ ಬೇಡಿರೆಂದು ಡಾಕ್ಟರ್ ಸಿಂಹರು ತಿಳಿಸಿದ್ದರು. ಪಚನ ಶಕ್ತಿಯಂತೂ ಮೊದಲೇ ದುರ್ಬಲವಾಗಿತ್ತು. ಈಚೆಗೆ ಮತ್ತಿಷ್ಟು ಹೆಚ್ಚಾಯಿತು. ಸ್ವಲ್ಪ ಉಬ್ಬಸವೂ ಸುರುವಾಗಿತ್ತು. ಅಷ್ಟಾದರೂ ಅವರು ಬೆಳಗಿನಿಂದ ಅರ್ಧರಾತ್ರಿಯವರೆಗೆ ಕೆಲಸ ಮಾಡುತ್ತಲೇ ಇದ್ದರು. ಮನಸಿರಲಿ, ಇಲ್ಲದಿರಲಿ; ದೇಹಸ್ಥಿತಿ ಸರಿಯಾಗಿರಲಿ, ಇಲ್ಲದಿರಲಿ; ಕೆಲಸ ಮಾಡಲೇಬೇಕು! ನಿರ್ಮಲೆಗೆ ಅವರ ಮೇಲೆ ಕೂಡ ಕನಿಕರ ಉಂಟಾಗುತ್ತಿರಲಿಲ್ಲ ಅದೇ ಭವಿಷ್ಯದ ಭೀಷಣ ಚಿಂತೆಯು ಅವಳ ಆಂತರಿಕ ಸದ್ಭಾವಗಳನ್ನು ಸರ್ವನಾಶಗೊಳಿಸಿತ್ತು! ಮನೆ ಬಾಗಿಲಿಗೆ ಭಿಕ್ಷುಕರು ಬಂದರೆ ಸಿಡಗುಟ್ಟುತ್ತಿದ್ದಳು. ಒಂದು ಕಾಸನ್ನೂ ಖರ್ಚು ಮಾಡಲು ಅವಳ ಮನಸು ಒಪ್ಪುತ್ತಿರಲಿಲ್ಲ!

ಒಂದು ದಿನ ನಿರ್ಮಲೆಯು ತುಪ್ಪ ತರುವುದಕ್ಕಾಗಿ ಶ್ರೀರಾಮನನ್ನು ಪೇಟೆಗೆ ಕಳುಹಿಸಿದಳು ಅಡಿಗೆಯವಳಲ್ಲಿ ಅವಳಿಗೆ ನಂಬಿಕೆ ಇರಲಿಲ್ಲ. ಶ್ರೀರಾಮನಿಗೆ ಸುಳ್ಳು, ಕಪಟ ಗೊತ್ತಿರಲಿಲ್ಲ. ಅಂತೆಯೇ, ಅಂಗಡಿಯ ಕೆಲಸವೆಲ್ಲಾ ಅವನ ಪಾಲಿಗೇ ಬೀಳುತ್ತಿತ್ತು. ನಿರ್ಮಲೆಯು ಒಂದೊಂದು ಪದಾರ್ಥವನ್ನೂ ತೂಕಮಾಡಿ ಕೊಳ್ಳುತ್ತಿದ್ದಳು. ಸ್ವಲ್ಪ ಕಡಿಮೆ ಇದ್ದರೂ ಅವನನ್ನು ಪುನಃ

ಕಳುಹಿಸುತ್ತಿದ್ದಳು. ಈ ಸುತ್ತಾಟದಲ್ಲೇ ಶ್ರೀರಾಮನ ಮುಕ್ಕಾಲು ವೇಳೆ ಯೆಲ್ಲಾ ಕಳೆಯುತ್ತಿತ್ತು. ಅಂಗಡಿಯವರು ಅವನಿಗೆ ಸಾಮಾನನ್ನೂ ಜಾಗ್ರತೆ ಕೊಡುತ್ತಿರಲಿಲ್ಲ. ಈ ದಿನವೂ ಹೀಗೆಯೇ ಆಯಿತೂ! ಶ್ರೀರಾಮನು ಎಷ್ಟೋ ಅಂಗಡಿಗಳಲ್ಲಿ ವಿಚಾರಿಸಿ ನೋಡಿ ಒಳ್ಳೆಯ ತುಪ್ಪವನ್ನೇ ತಂದಿದ್ದನು. ಆದರೆ ನಿರ್ಮಲೆಯು ಅದನ್ನು ಮೂಸಿ ನೋಡುತ್ತಲೇ 'ತುಪ್ಪ ಚನ್ನಾಗಿಲ್ಲ! ವಾಪಸು ಕೊಟ್ಟುಬಾ.' ಎಂದಳು.

ಶ್ರೀರಾಮನು ಸಿಟ್ಟಿನಿಂದ ಹೇಳಿದನು—ಇದಕ್ಕಿಂತ ಒಳ್ಳೆಯ ತುಪ್ಪ ಅಂಗಡಿಯಲ್ಲೇ ಇಲ್ಲ. ನಾನು ಎಲ್ಲಾ ಅಂಗಡಿಯಲ್ಲೂ ನೋಡಿ ತಂದಿರುವೆನು.

ನಿರ್ಮಲೆ—ಹಾಗಿದ್ದರೆ ನಾನು ಸುಳ್ಳು ಹೇಳುವೆನೆ?

ಶ್ರೀರಾಮ—ನೀವು ಸುಳ್ಳು ಹೇಳುವಿರೆಂದಲ್ಲ; ಆದರೆ ವರ್ತಕನು ತುಪ್ಪ ವಾಪಸು ತೆಗೆದುಕೊಳ್ಳುವುದಿಲ್ಲ. 'ಇಲ್ಲೇ ಚೆನ್ನಾಗಿ ನೋಡಿ, ಪರೀಕ್ಷಿಸಿ, ಯಾವುದನ್ನು ಬೇಕಾದರೂ ತೆಗೆದುಕೊ! ನಂತರ ವಾಪಸು ತೆಗೆದುಕೊಳ್ಳುವು ದಿಲ್ಲ' ಎಂದು ಮುಂಚಿತವಾಗಿಯೇ ತಿಳಿಸಿರುವನು. ನಾನು ಮೂಸಿ ನೋಡಿ, ಸ್ವಲ್ಪ ತಿಂದು ನೋಡಿ ತಂದೆನು. ಈಗ ಯಾವ ಮುಖವನ್ನಿಟ್ಟುಕೊಂಡು ವಾಪಸು ಮಾಡಲಿ?

ನಿರ್ಮಲೆಯು ಹಲ್ಲುಗಳನ್ನು ಕಡಿಯುತ್ತ ಹೇಳಿದಳು—ತುಪ್ಪಕ್ಕೆ ಕೊಬ್ಬು ಬೆರೆತಿರುವುದು ಚೆನ್ನಾಗಿ ಕಾಣುತ್ತಿದೆ. ಒಳ್ಳೆಯ ತುಪ್ಪವೆಂದು ಹೇಳುವೆಯಲ್ಲಾ? ಇದರಿಂದ ನಾನು ಅಡಿಗೆ ಮಾಡುವುದಿಲ್ಲ. ಇಷ್ಟವಿದ್ದರೆ ಹಿಂತಿರುಗಿಸು; ಇಲ್ಲದಿದ್ದರೆ ತಿಂದುಕೊ!

ಎನ್ನುತ್ತ ತುಪ್ಪದ ತಪ್ಪಲೆಯನ್ನು ಅಲ್ಲೇ ಬಿಟ್ಟು ನಿರ್ಮಲೆಯು ಒಳಕ್ಕೆ ಹೋದಳು. ಶ್ರೀರಾಮನು ಕ್ರೋಧ ದುಃಖಗಳಿಂದ ಕಾತರನಾದನು. ಯಾವ ಮುಖವನ್ನಿಟ್ಟುಕೊಂಡು ತುಪ್ಪ ವಾಪಸುಮಾಡಲು ಹೋಗಲಿ? ವಾಪಸು ತೆಗೆದುಕೊಳ್ಳುವುದಿಲ್ಲವೆಂದು ವರ್ತಕನು ಸ್ಪಷ್ಟವಾಗಿ ಹೇಳಿಬಿಡುವನು. ಆಗೇನು ಮಾಡಲಿ? ಅಕ್ಕಪಕ್ಕದ ವರ್ತಕರು ಮತ್ತು ದಾರಿಯಲ್ಲಿ ಹೋಗುವವ ರೆಲ್ಲರೂ ನಿಂತು ನೋಡುವರು. ಆಗ ಅವರೆಲ್ಲರೆದುರಿಗೂ ನಾನು ನಾಚಿಕೊಳ್ಳ ಬೇಕಾಗುವುದು! ತುಪ್ಪ ಇಲ್ಲೇ ಬಿದ್ದಿರಲಿ. ನಾನು ವಾಪಸು ಮಾಡಲ ಹೋಗುವುದಿಲ್ಲ—ಎಂದು ಮನಸಿನಲ್ಲೇ ಯೋಚಿಸಿಕೊಂಡನು.

ಮಾತೃಹೀನ ಬಾಲಕನಿಗಿಂತ ದೀನನೂ ದುಃಖಿಯೂ ಪ್ರಪಂಚದಲ್ಲಿ ಇನ್ನಾರೂ ಇಲ್ಲ! ಶ್ರೀರಾಮನಿಗೆ ಮಾತೆಯ ನೆನಪು ಬಂತು. ಅಮ್ಮನಿದ್ದಿದ್ದರೆ ನಾನು ಇಷ್ಟೆಲ್ಲ ಕಷ್ಟ ಸಹಿಸಬೇಕಾಗುತ್ತಿತ್ತೇ? ಅಣ್ಣನೂ ಹೋದನು. ಜಯರಾಮನೂ ಹೋದನು. ನಾನೊಬ್ಬನೇ ಈ ವಿಪತ್ತುಗಳನ್ನೆಲ್ಲಾ ಸಹಿಸಲು ಉಳಿದುಕೊಂಡೆನೇ?–ಎಂದು ಕಂಬನಿಗರೆದನು. ಅವನ ಶೋಕಕಾತರ ಕಂಠದಿಂದ ಒಂದು ದೀರ್ಘ ನಿಶ್ವಾಸ ಹೊರಬಿತ್ತು! 'ಹಾ, ಅಮ್ಮಾ! ನನ್ನನ್ನೇಕೆ ಮರೆತುಬಿಟ್ಟೆ? ನಿನ್ನ ಬಳಿಗೆ ನನ್ನನ್ನೂ ಕರೆದುಕೋ!' ಎಂದನು.

ಅಷ್ಟರಲ್ಲಿ ನಿರ್ಮಲೆಯು ಪುನಃ ಕೊಠಡಿಯ ಕಡೆ ಬಂದಳು. ಶ್ರೀರಾಮನು ತುಪ್ಪ ವಾಪಸು ಮಾಡಲು ಹೋಗಿರಬಹುದು–ಎಂದುಕೊಂಡಿದ್ದಳು. ಆದರೆ ಅವನು ಅಲ್ಲೇ ಕುಳಿತಿರುವುದನ್ನು ಕಂಡು ಕೋಪದಿಂದ ಹೇಳಿದಳು—ಇನ್ನೂ ಇಲ್ಲೇ ಕುಳಿತಿರುವೆಯಾ? ಹೀಗಾದರೆ ಅಡಿಗೆ ಮಾಡುವುದು ಯಾವಾಗ?

ಶ್ರೀರಾಮನು ಕಣ್ಣೊರೆಸಿಕೊಂಡು ಹೇಳಿದನು—ನನಗೆ ಶಾಲೆಗೆ ಹೊತ್ತಾಗುವುದು.

ನಿರ್ಮಲೆ—ಒಂದು ದಿನ ಹೊತ್ತಾಗಿ ಹೋದರೆ ಮುಳುಗಿಹೋಗುವುದೇನು? ಇದೂ ಮನೆಯ ಕೆಲಸವಲ್ಲವೇ?

ಶ್ರೀರಾಮ—ದಿನವೂ ಹೀಗೆಯೇ ಆಗುತ್ತದೆ. ಒಂದು ದಿನವೂ ಶಾಲೆಗೆ ಸರಿಯಾದ ವೇಳೆಗೆ ಹೋಗಲಾಗುವುದಿಲ್ಲ. ಯಾವ ಸಾಮಾನನ್ನು ತರಿಸಿದರೂ ಒಂದೆರಡು ಸಲ ವಾಪಸು ಕಳುಹಿಸದೆ ಇರುವುದೇ ಇಲ್ಲ. ಅಷ್ಟಾದರೂ ನನ್ನನ್ನೇ ಗದರಿಸುವಿರಿ! ಅಂಗಡಿಬೀದಿಯಲ್ಲಿ ನಾಚಿಕೆಗೀಡಾಗುವವನು ನಾನು, ನಿಮಗೇನು?

ನಿರ್ಮಲೆ—ಹೌದು, ನನಗೇನು? ನಾನು ನಿನ್ನ ಶತ್ರು; ನೀನು ಓದಿ ಬರೆದು ವಿದ್ಯಾವಂತನಾಗಬಾರದೆಂದು ನನ್ನ ಆಶೆ! ನಾನೇ ಕೆಟ್ಟವಳು; ನೀಚತನವೆಲ್ಲ ನನ್ನಲ್ಲೇ ತುಂಬಿದೆ; ನಿನ್ನದಾವ ದೋಷವೂ ಇಲ್ಲ. ವಿಮಾತೆಯೆಂಬ ಹೆಸರೇ ಕೆಟ್ಟದ್ದು! ತಾಯಿಯಾದವಳು ವಿಷವನ್ನುಣ್ಣಿಸಿದರೂ ಅದು ಅಮೃತವಾಗುವುದು; ನಾನು ಅಮೃತವನ್ನುಣ್ಣಿಸಿದರೂ ಅದು ವಿಷವೇ! ನಿಮ್ಮಗಳ ಕಾರಣದಿಂದ ನಾನು ಹಾಳಾದೆ! ಅತ್ತುಅತ್ತು ಜೀವನವನ್ನೆಲ್ಲ ಕಳೆದೆ!

ಭಗವಂತನು ನನಗೇಕಾದರೂ ಜನ್ಮವಿತ್ತನೋ ಅರಿಯೆ! ಅವನ ಕೃಪೆಯಿಂದ ಪ್ರಾಣವಾದರೂ ಹೋದರೆ, ಈ ಕಷ್ಟಗಳೆಲ್ಲಾ ನೀಗುವವು! ಎನ್ನುತ್ತಿದ್ದಂತೆ ನಿರ್ಮಲೆಯ ಕಂಗಳು ಕಂಬನಿದುಂಬಿದವು. ಒಳಕ್ಕೆ ಹೋದಳು. ಅವಳು ಅಳುವುದನ್ನು ಕಂಡು ಶ್ರೀರಾಮನು ಹೆದರಿದನು. ಅವನಿಗೆ ತಿರಸ್ಕಾರಭಾವ ಉಂಟಾಗಲಿಲ್ಲ; ಏನು ಶಿಕ್ಷೆ ದೊರಕುವುದೋ-ಎಂದು ಸಂಶಯವಾಯಿತು. ತುಪ್ಪದ ತಪ್ಪಲೆಯನ್ನು ತೆಗೆದುಕೊಂಡು ವಾಪಸು ಮಾಡಲು ಹೊರಟನು. ತಾನೆಂದೂ ನೋಡದ ಹೊಸದೊಂದು ಊರಿನಲ್ಲಿ ತಲೆತಗ್ಗಿಸಿಕೊಂಡು ಹೋಗುವ ನಾಯಿಯಂತೆ ಹೊರಟನು! ಅವನ ಮನೋಗತ ವೇದನೆಯು ಅವನ ಒಂದೊಂದು ಅಂಗದಿಂದಲೂ ಹೊರಸೂಸುತ್ತಿತ್ತು. ಸಾಧಾರಣ ಬುದ್ಧಿಯ ಯಾವ ಮನುಷ್ಯನಾದರೂ ಅವನನ್ನು ನೋಡಿದರೆ ಅನಾಥನೆಂದು ಹೇಳಬಹುದಾಗಿತ್ತು.

ಮುಂದೆ ಮುಂದೆ ಹೋದಂತೆಲ್ಲ, ಹೆದರಿಕೆಯಿಂದ ಅವನ ಎದೆ ಡಬಡಬ ಬಡಿದುಕೊಳ್ಳತೊಡಗಿತು. ವರ್ತಕನು ತುಪ್ಪ ಹಿಂದಕ್ಕೆ ತೆಗೆದುಕೊಳ್ಳದೆ ಹೋದರೆ, ಅದನ್ನು ಅಲ್ಲೇ ಬಿಟ್ಟು ಬಂದುಬಿಡುವುದೆಂದು ಯೋಚಿಸಿದನು. ಆಗ ವರ್ತಕನು ತಾನಾಗಿಯೇ ಕರೆಯುವನು; ತೋರಿಸುವ ಸಾಮಾನೇ ಬೇರೆ, ಕೊಡುವ ಸಾಮಾನೇ ಬೇರೆ! ಹೀಗೇಕೆ ಮೋಸ ಮಾಡುವಿರಿ?-ಎಂದು ಗದರಿಸುವೆನು-ಎಂಬುದಾಗಿ ಏನೇನೋ ಯೋಚಿಸುತ್ತ ನಡೆದನು. ಅಷ್ಟಾದರೂ ಅವನ ಹೆಜ್ಜೆ ಮುಂದೆ ಸಾಗುತ್ತಲೇ ಇರಲಿಲ್ಲ. ಹಾಗೂ ಹೀಗೂ ವರ್ತಕನ ಬಳಿ ಬಂದನು.

ಅವನನ್ನು ನೋಡಿದೊಡನೆಯೇ ವರ್ತಕನು ಹೇಳಿದನು – ಸಾಮಾನು ವಾಪಸು ತೆಗೆದುಕೊಳ್ಳುವುದಿಲ್ಲವೆಂದು ನಾನಾಗಲೇ ತಿಳಿಸಿರುವೆನು! ಹೌದೋ, ಇಲ್ಲವೋ?

ಶ್ರೀರಾಮನು ಸಿಟ್ಟಿನಿಂದ ನುಡಿದನು – ನೀನು ತೋರಿಸಿದ ತುಪ್ಪವೇ ಬೇರೆ. ಕೊಟ್ಟಿರುವ ತುಪ್ಪವೇ ಬೇರೆ! ಈಗ ವಾಪಸು ತೆಗೆದುಕೊಳ್ಳುವುದಿಲ್ಲ ವೆಂದರೆ ಹೇಗೆ?

ವರ್ತಕ— ಇದಕ್ಕಿಂತ ಒಳ್ಳೆಯ ತುಪ್ಪ ಪೇಟೆಯಲ್ಲಿ ಸಿಕ್ಕಿದರೆ, ನಿನ ಗಿದನ್ನು ಮುಫತ್ತಾಗಿ ಕೊಟ್ಟುಬಿಡುವೆನು. ತಪ್ಪಲೆಯನ್ನು ತೆಗೆದುಕೊಂಡು ಹೋಗಿ ನಾಲ್ಕಂಗಡಿಯಲ್ಲಿ ನೋಡಿಬಾ!

ಶ್ರೀರಾಮು—ಅಷ್ಟು ಪುರಸತ್ತಿಲ್ಲ. ತುಪ್ಪ ಹಿಂದಕ್ಕೆ ತೆಗೆದುಕೊಳ್ಳಿ!

ವರ್ತಕ—ಇಲ್ಲ, ವಾಪಸು ತೆಗೆದುಕೊಳ್ಳುವುದಿಲ್ಲ!

ವರ್ತಕನ ಅಂಗಡಿಯಲ್ಲಿ ಒಬ್ಬ ಜಟಾಧಾರಿ ಸಾಧುವು ಕುಳಿತು ಈ ತಮಾಷೆಯನ್ನೆಲ್ಲ ನೋಡುತ್ತಿದ್ದನು. ಎದ್ದು ಶ್ರೀರಾಮುನ ಬಳಿ ಬಂದು, ತುಪ್ಪವನ್ನು ಮೂಸಿನೋಡಿ ಹೇಳಿದನು—ತುಪ್ಪ ಚೆನ್ನಾಗಿರುವಂತೆ ಕಾಣುತ್ತದೆ; ತೆಗೆದುಕೊಂಡು ಹೋಗು, ಮಗು!

ವರ್ತಕ—ಬಾಬಾಜೀ! ನೀವೇ ಹೇಳಿ, ವರ್ತನೆಯ ಗಿರಾಕಿಗಳಿಗೆ ಕೆಟ್ಟ ಮಾಲನ್ನು ಕೊಡಲಾಗುವುದೇ?

ಸಾಧು—ತುಪ್ಪ ಬಹಳ ಚೆನ್ನಾಗಿದೆ, ತೆಗೆದುಕೊಂಡು ಹೋಗು, ಮಗು!

ಶ್ರೀರಾಮುನಿಗೆ ಅಳು ಬಂದಿತು. ತುಪ್ಪ ಚೆನ್ನಾಗಿಲ್ಲವೆಂದು ತಿಳಿಸಲು ಅವನ ಬಳಿ ಇನ್ನಾವ ಪ್ರಮಾಣವೂ ಇರಲಿಲ್ಲ. 'ತುಪ್ಪ ಚೆನ್ನಾಗಿಲ್ಲ, ವಾಪಸು ಕೊಟ್ಟು ಬಾರೆಂದು ಅವರೇ ಹೇಳಿದರು. ತುಪ್ಪ ಚೆನ್ನಾಗಿದೆಯೆಂದು ನಾನೆಷ್ಟೋ ಹೇಳಿದೆ, ಕೇಳಲಿಲ್ಲ!' ಎಂದನು.

ಸಾಧು—ಯಾರು ಹೇಳಿದರು?

ವರ್ತಕ—ಮತ್ತಾರು ಹೇಳುವರು? ಅವರ ಅಮ್ಮನೇ ಹೇಳಿರಬೇಕು. ಯಾವ ಪದಾರ್ಥವೂ ಅವರ ಮನಸಿಗೆ ಒಪ್ಪುವುದೇ ಇಲ್ಲ. ಪಾಪ, ಹುಡುಗನನ್ನು ಬಾರಿಬಾರಿಗೂ ಓಡಿಸುವರು! ಎಷ್ಟೇ ಆಗಲಿ ಸವತಿತಾಯಿ! ತಾಯಿಯಾಗಿದ್ದರೆ ಹೀಗೆ ಮಾಡುತ್ತಿದ್ದಳೇ?

ಸಾಧುವು ಶ್ರೀರಾಮುನನ್ನು ಸದಯನೇತ್ರಗಳಿಂದ ನೋಡಿದನು; ಮತ್ತು ಕರುಣಸ್ವರದಿಂದ ಕೇಳಿದನು—ನಿನ್ನ ತಾಯಿ ಸ್ವರ್ಗಸ್ಥಳಾಗಿ ಎಷ್ಟು ದಿನಗಳಾದವು ಮಗು?

ಶ್ರೀರಾಮು—ಆರನೆಯ ವರ್ಷ!

ಸಾಧು—ಹಾಗಿದ್ದರೆ ಆಗ ನೀನು ಬಹಳ ಚಿಕ್ಕವನಾಗಿದ್ದಿರಬೇಕು? ಭಗವಂತ, ನಿನ್ನ ಲೀಲೆ ಎಷ್ಟು ವಿಚಿತ್ರವಾದುದು? ಇಂತಹ ಹಸು–ಕಂದನನ್ನು ನೀನು ಮಾತೃಪ್ರೇಮದಿಂದ ವಂಚಿಸಿದೆಯಾ? ಎಂತಹ ಅನರ್ಥ ಮಾಡುವೆ, ದೇವಾ! ಹಾ! ಆರು ವರ್ಷದ ಬಾಲಕನು ರಾಕ್ಷಸಿ ವಿಮಾತೆಯ

ಕೈಗೆ ಸಿಕ್ಕು ಕಷ್ಟಪಡುವುದೇ? (ವರ್ತಕನನ್ನು ಕುರಿತು) ಸಾಹುಜೀ, ಬಾಲ ಕನ ಮೇಲೆ ದಯೆಯಿಟ್ಟು, ತುಪ್ಪ ವಾಪಸು ತೆಗೆದುಕೊಳ್ಳಿ. ಇಲ್ಲವಾದರೆ ಅವನ ಮಾತೆಯು ಮನೆಗೆ ಸೇರಿಸುವುದಿಲ್ಲ. ಭಗವಂತನ ಕೃಪೆಯಿಂದ ನಿಮ್ಮ ತುಪ್ಪ ಅತಿ ಶೀಘ್ರದಲ್ಲೇ ಖರ್ಚಾಗುವುದು. ನಿಮಗೆ ನನ್ನ ಅನಂತ ಆಶೀರ್ವಾದಗಳು.

ವರ್ತಕನು ಹಣ ಹಿಂತಿರುಗಿಸಲಿಲ್ಲ. ಅಂತೂ ಬೇರೆ ತುಪ್ಪ ತೆಗೆದುಕೊಳ್ಳಲು ಮತ್ತೊಮ್ಮೆ ಬರಲೇಬೇಕಾಯಿತು. ತನ್ನ ಅಂಗಡಿಯಲ್ಲಿ ಅತ್ಯುತ್ತಮವಾದದ್ದೆನಿಸಿದ ತುಪ್ಪವನ್ನು ಶ್ರೀರಾಮನಿಗೆ ಕೊಟ್ಟನು. ಶ್ರೀರಾಮನು ಮನಸಿನಲ್ಲೇ ಯೋಚಿಸಿಕೊಂಡನು—ಆಹಾ! ಈ ಸಾಧು ಎಷ್ಟು ದಯಾಳು! ಇವರು ಶಿಫಾರಸ್ ಮಾಡದೇ ಇದ್ದಿದ್ದರೆ ವರ್ತಕನು ಒಳ್ಳೆಯ ತುಪ್ಪ ಖಂಡಿತವಾಗಿಯೂ ಕೊಡುತ್ತಿರಲಿಲ್ಲ!

ಶ್ರೀರಾಮನು ತುಪ್ಪ ತೆಗೆದುಕೊಂಡು ಹೊರಟನು. ಸಾಧುವೂ ಅವನ ಸಂಗಡಲೇ ಹೊರಟನು. ರಸ್ತೆಯಲ್ಲಿ ಅವನೊಡನೆ ಪ್ರೀತಿಪೂರ್ವಕ ಸವಿನುಡಿಗಳನ್ನಾಡುತ್ತ ನಡೆದನು.

ಮಗೂ, ನಾನೂ ಮೂರು ವರ್ಷದವನಾಗಿದ್ದಾಗ ನನ್ನ ತಾಯಿ ಸ್ವರ್ಗಸ್ಥಳಾದಳು. ಆದುದರಿಂದ ಮಾತೃವಿಹೀನ ಬಾಲಕರನ್ನು ಕಂಡರೆ ನನಗೆ ಬಹಳ ದುಃಖವಾಗುವುದು!

ಶ್ರೀರಾಮ—ನಿಮ್ಮ ತಂದೆಯೂ ಎರಡನೆಯ ವಿವಾಹ ಮಾಡಿಕೊಂಡಿದ್ದರೇ?

ಸಾಧು—ಹೌದು, ಮಗು! ಇಲ್ಲದಿದ್ದರೆ ನಾನೇಕೆ ಸಾಧುವಾಗುತ್ತಿದ್ದೆ? ಎರಡನೆಯ ಮದುವೆ ಮಾಡಿಕೊಳ್ಳುವ ಮುನ್ನ ತಂದೆಯವರು ನನ್ನನ್ನೆಷ್ಟೋ ಪ್ರೀತಿಯಿಂದ ಕಾಣುತ್ತಿದ್ದರು. ನಂತರ ಅದೇನು ಮನುಸು ಬಂತೋ ಮದುವೆ ಮಾಡಿಕೊಂಡರು. ನಾನು ಸಾಧುವೆನಿಸಿಕೊಂಡು ಕಟುವಾಕ್ಯಗಳನ್ನಾಡಬಾರದು—ಆದರೆ ನನ್ನ ವಿಮಾತೆಯು ಎಷ್ಟು ಸುಂದರಿಯೋ, ಅಷ್ಟು ಕಠೋರಳು. ಪ್ರತಿದಿನವೂ ಊಟತಿಂಡಿಗಳನ್ನು ಸರಿಯಾಗಿ ಕೊಡುತ್ತಿರಲಿಲ್ಲ; ಅತ್ತರೆ ಹೊಡೆಯುತ್ತಿದ್ದಳು. ತಂದೆಯವರಿಗೂ ನನ್ನಲ್ಲಿ ಅಲಕ್ಷ್ಯವುಂಟಾಯಿತು. ಅತ್ತರೆ, ಹೊಡೆದೇಬಿಡುತ್ತಿದ್ದರು. ಕಡೆಗೊಂದು ದಿನ ನಾನು ಮನೆ ಬಿಟ್ಟು ಹೊರಟುಬಂದೆ.

ಶ್ರೀರಾಮನ ಮನಸಿನಲ್ಲೂ ಮನೆಬಿಟ್ಟು ಓಡಿಹೋಗಬೇಕೆಂಬ ಯೋಚನೆ ಎಷ್ಟೋ ಸಲ ಉಂಟಾಗಿತ್ತು. ಈಗಲೂ ಅವನ ಮನಸಿನಲ್ಲಿ ಇದೇ ಯೋಚನೆ ಬಂದಿತ್ತು. ಅತಿ ಉತ್ಸುಕತೆಯಿಂದ ಕೇಳಿದನು—ಮನೆಯಿಂದ ಹೊರಟು ನೀವೆಲ್ಲಿಗೆ ಹೋದಿರಿ ?

ಸಾಧು—ಅಂದೇ ನನ್ನ ಕಷ್ಟಗಳೆಲ್ಲ ಕೊನೆಯಾದವು. ಮನೆಯ ಮೋಹ, ಬಂಧನ, ಭಯವನ್ನು ಎಂದು ತೊರೆದೆನೋ ಅಂದೇ ನನ್ನ ಉದ್ಧಾರ ವಾಯಿತು ! ಆ ದಿನವೆಲ್ಲಾ ಒಂದು ಸೇತುವೆಯ ಅಡಿಯಲ್ಲಿ ಕುಳಿತಿದ್ದೆ. ಸಂಧ್ಯಾಸಮಯಕ್ಕೆ ನನಗೊರ್ವ ಮಹಾತ್ಮರ ದರ್ಶನವಾಯಿತು. ಅವರ ಹೆಸರು ಸ್ವಾಮಿ ಪರಮಾನಂದಜೀ ! ಅವರು ಬಾಲಬ್ರಹ್ಮಚಾರಿಗಳು. ನನ್ನಲ್ಲಿ ದಯೆ ತೋರಿ, ನನ್ನನ್ನು ತಮ್ಮ ಸಂಗಡ ಇರಿಸಿಕೊಂಡರು. ಅವರ ಸಂಗಡ ನಾನು ದೇಶದೇಶಾಂತರಗಳನ್ನೆಲ್ಲಾ ತಿರುಗತೊಡಗಿದೆ. ಅವರು ಅತ್ಯುತ್ತಮ ಯೋಗಿವರ್ಯರು ನನಗೂ ಯೋಗವಿದ್ಯೆಯನ್ನು ಕಲಿಸಿದರು. ಆ ಯೋಗ ವಿದ್ಯೆಯ ಬಲದಿಂದ ನಾನೀಗ ಇಷ್ಟ ಬಂದಾಗೆಲ್ಲ ಮಾತೆಯ ದರ್ಶನ ಮಾಡಿ ಕೊಳ್ಳುವೆನು, ಮತ್ತು ಮಾತನ್ನೂ ಆಡುವೆನು !

ಶ್ರೀರಾಮನು ಆಶ್ಚರ್ಯದಿಂದ ಕಣ್ಣುಗಳನ್ನರಳಿಸಿ ಕೇಳಿದನು—ನಿಮ್ಮ ತಾಯಿ ಸ್ವರ್ಗಸ್ಥರಾಗಿರಲಿಲ್ಲವೇ ?

ಸಾಧು—ಆದರೇನಾಯಿತು ಮಗು ? ಯಾವ ಮೃತ-ಆತ್ಮವನ್ನು ಬೇಕಾದರೂ ಕರೆಸಿಕೊಳ್ಳುವ ಶಕ್ತಿ ಯೋಗವಿದ್ಯೆಯಲ್ಲಿದೆ !

ಶ್ರೀರಾಮ—ನಾನೂ ಯೋಗವಿದ್ಯೆ ಕಲಿತುಕೊಂಡರೆ, ನನ್ನ ಮಾತೆಯ ದರ್ಶನವಾಗುವುದೇ ?

ಸಾಧು—ಅಗತ್ಯವಾಗಿಯೂ ! ಅಭ್ಯಾಸಬಲದಿಂದ ಸಕಲವೂ ಸಾಧ್ಯ ವಾಗುವುದು, ಮಗು ! ಆದರೆ ಯೋಗ್ಯ ಗುರು ಬೇಕು. ಯೋಗದಿಂದ ಎಷ್ಟೆಷ್ಟೋ ಮಹತ್ವದ ಸಾಧನೆಗಳು ಸಿದ್ಧಿಸುವವು. ಕ್ಷಣಮಾತ್ರದಲ್ಲಿ ಬೇಕಾದಷ್ಟು ಧನವನ್ನು ಬರಮಾಡಬಹುದು ! ಎಂತಹ ರೋಗವಿದ್ದರೂ ಚಿಕಿತ್ಸೆ ಮಾಡಬಹುದು !

ಶ್ರೀರಾಮ—ನಿಮ್ಮ ಊರಾವುದು ?

ಸಾಧು—ನಮ್ಮ ಊರಾವುದೂ ಇಲ್ಲ ಮಗು ! ದೇಶದೇಶಾಂತರಗಳಲ್ಲಿ

ಸುತ್ತುತ್ತಿರುವೆನು. ಇನ್ನು ನೀನು ಹೊರಡು ಮಗು! ನಾನೂ ಸ್ನಾನಾಹ್ನಿಕಗಳನ್ನು ಮಾಡಿಕೊಳ್ಳಲು ಹೊರಡುವೆನು!

ಶ್ರೀರಾಮ—ನಡೆಯಿರಿ, ನಾನೂ ಅತ್ತಕಡೆಯೇ ಬರುವೆನು. ನಿಮ್ಮ ದರ್ಶನದಿಂದ ಮನ ದಣಿಯಲಿಲ್ಲ.

ಸಾಧು—ಬೇಡ, ಮಗು! ನಿನಗೆ ಶಾಲೆಗೆ ಹೊತ್ತಾಗುವುದು.

ಶ್ರೀರಾಮ—ಪುನಃ ನಿಮ್ಮ ದರ್ಶನವಾಗುವುದೆಂದು ?

ಸಾಧು—ಯಾವಾಗಲಾದರೂ ಬರುವೆನು, ಮಗು! ನಿಮ್ಮ ಮನೆ ಎಲ್ಲಿದೆ ?

ಶ್ರೀರಾಮನು ಪ್ರಸನ್ನನಾಗಿ ಹೇಳಿದನು—ಬನ್ನಿ, ನಮ್ಮ ಮನೆಗೆ! ಇದೋ ಸಮೀಪದಲ್ಲೇ ಇರುವುದು. ಎಷ್ಟೋ ಕೃಪೆ ಮಾಡಿದಂತಾಗುವುದು!

ಶ್ರೀರಾಮನು ವೇಗದಿಂದ ಮುಂದೆ ನಡೆದನು. ಬಂಗಾರದ ಗಂಟನ್ನು ಕೈಯಲ್ಲಿಟ್ಟುಕೊಂಡಿರುವನೋ ?–ಎಂಬಂತೆ ಅತಿ ಪ್ರಸನ್ನನಾಗಿದ್ದನು. ಮನೆ ಸಮೀಪಿಸಿದೊಡನೆಯೇ 'ಬನ್ನಿ! ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಿ!' ಎಂದನು.

ಸಾಧು—ಇಲ್ಲ, ಮಗು! ಈಗ ಕುಳಿತುಕೊಳ್ಳಲು ಸಮಯವಿಲ್ಲ. ನಾಳೆ ನಾಳಿದ್ದರಲ್ಲಿ ಯಾವಾಗಲಾದರೂ ಬರುವೆನು; ಇದೇ ನಿಮ್ಮ ಮನೆಯೇ ?

ಶ್ರೀರಾಮ—ನಾಳೆ ಎಷ್ಟು ಹೊತ್ತಿಗೆ ಬರುವಿರಿ ?

ಸಾಧು—ನಿರ್ಧರವಾಗಿ ಹೇಳಲಾಗುವುದಿಲ್ಲ; ಯಾವಾಗಲಾದರೂ ಬರುವೆನು.

ಎಂದು ಹೇಳಿ ಸಾಧುವು ಮುಂದೆ ನಡೆದನು. ಸ್ವಲ್ಪ ದೂರ ಹೋದೊಡನೆಯೇ ಅವನಿಗೆ ಮತ್ತೊಬ್ಬ ಸಾಧು ಸಿಕ್ಕನು. ಆವನ ಹೆಸರು ಹರಿಹರಾನಂದ.

ಪರಮಾನಂದನು ಕೇಳಿದನು—ಎಲ್ಲೆಲ್ಲಿ ಸುತ್ತಿ ಬಂದೆ? ಯಾವುದಾದರೂ ಶಿಕಾರಿ ಸಿಕ್ಕಿತೇ ?

ಹರಿಹರಾನಂದ—ನಾಲ್ಕು ಕಡೆಗಳಲ್ಲೂ ಸುತ್ತಿ ಬಂದೆ, ಯಾವ ಶಿಕಾರಿಯೂ ಸಿಕ್ಕಲಿಲ್ಲ. ಒಬ್ಬಿಬ್ಬರು ಸಿಕ್ಕಂತಿದ್ದರು; ಆದರೆ ನನ್ನನ್ನೇ ಪರಿಹಾಸ್ಯ ಮಾಡತೊಡಗಿದರು.

ಪರಮಾನಂದ—ನನಗೇನೋ ಒಂದು ಶಿಕಾರಿ ಸಿಗುವಂತಿದೆ; ನೋಡಬೇಕು!

ಹರಿಹರಾನಂದ—ನೀನು ಯಾವಾಗಲೂ ಹೀಗೆಯೇ ಹೇಳುತ್ತಿರುವೆ! ಸಿಕ್ಕವರೆಲ್ಲ ಒಂದೆರಡು ದಿನವಿದ್ದು ಓಡಿಹೋಗುವರು.

ಪರಮಾನಂದ—ಈ ಸಲ ಸಿಕ್ಕವನು ಓಡಿಹೋಗುವುದಿಲ್ಲ, ನೋಡುತ್ತಿರು! ಇವನ ತಾಯಿ ಸತ್ತುಹೋಗಿರುವಳು. ತಂದೆ ಎರಡನೆಯ ಮದುವೆ ಮಾಡಿಕೊಂಡಿರುವನು. ಮಲತಾಯಿಯು ಬಹಳ ಗೋಳಾಡಿಸುವಳು. ಮನೆಯೆಂದರೆ ಬಹಳ ಬೇಸರಗೊಂಡಿರುವನು.

ಹರಿಹರಾನಂದ—ಹಾಗಿದ್ದರೆ ಸಿಗುವನು; ಸಿಕ್ಕೇ ಸಿಗುವನು! ಚೆನ್ನಾಗಿ ತಲೆ ಸವರಿದೆಯಷ್ಟೇ?

ಪರಮಾನಂದ—ಓಹೋ! ಚೆನ್ನಾಗಿ ಸವರಿರುವೆನು. ಈ ಮೊಹಲ್ಲೆಯಲ್ಲಿ ಯಾರಾರ ಮನೆಯಲ್ಲಿ ವಿಮಾತೆಯರಿರುವರೆಂದು ಮೊದಲು ತಿಳಿದುಕೊಳ್ಳಬೇಕು, ನಂತರ ಬಲೆ ಬೀಸಬೇಕು! ಇದೇ ಉತ್ತಮ ಉಪಾಯ!

## ಇಪ್ಪತ್ತೆರಡನೆಯ ಪರಿಚ್ಛೇದ

ನಿರ್ಮಲೆಯು ಸಿಟ್ಟಿನಿಂದ ಕೇಳಿದಳು—ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ?

ಶ್ರೀರಾಮನು ಧೃಷ್ಟತೆಯಿಂದ ನುಡಿದನು—ರಸ್ತೆಯಲ್ಲಿ ಒಂದು ಕಡೆ ಮಲಗಿಕೊಂಡಿದ್ದೆ?

ನಿರ್ಮಲೆ—ಹಾಗೆಂದು ನಾನು ಹೇಳಲಿಲ್ಲ. ಈಗ ಹೊತ್ತೆಷ್ಟು ಗೊತ್ತೇ? ಹತ್ತು ಹೊಡೆದು ಎಷ್ಟೋ ಹೊತ್ತಾಯಿತು! ಪೇಟೆಯೇನೂ ಅಂತಹ ದೂರವಿಲ್ಲ!

ಶ್ರೀರಾಮ—ಹೌದು, ಹೌದು; ದೂರವಿಲ್ಲ. ಮನೆ ಬಾಗಿಲಲ್ಲೇ ಇದೆ!

ನಿರ್ಮಲೆ—ಸ್ಪಷ್ಟವಾಗೇಕೆ ಹೇಳಿಬಿಡುವುದಿಲ್ಲ? ನನ್ನ ಕೆಲಸ ಮಾಡಿಕೊಟ್ಟದ್ದಕ್ಕಿಂತ ಹೆಚ್ಚಾಗಿ ಹಾರಾಡುತ್ತಿರುವೆ!

ಶ್ರೀರಾಮ—ನೀವೇಕೆ ಸುಮ್ಮನೆ ಬಡಬಡಿಸುವಿರಿ? ಒಮ್ಮೆ ತಂದ ಸಾಮಾನನ್ನು ವಾಪಸು ಕೊಟ್ಟುಬರುವುದು ಸುಲಭವಾದ ಕೆಲಸವಲ್ಲ! ವರ್ತಕನ ಸಂಗಡ ಎಷ್ಟು ಹೊತ್ತು ವಾದಿಸಬೇಕಾಯಿತು? ಅದಿರಲಿ, ಅಲ್ಲಿದ್ದ ಒಬ್ಬ

ಸಾಧುವು ಎಷ್ಟೋ ಹೇಳಿದ್ದರಿಂದ ವಾಪಸು ತೆಗೆದುಕೊಂಡನು; ಇಲ್ಲದಿದ್ದರೆ ಖಂಡಿತ ತೆಗೆದುಕೊಳ್ಳುತ್ತಿರಲಿಲ್ಲ. ರಸ್ತೆಯಲ್ಲಿ ಒಂದು ನಿಮಿಷ ಸಹ ನಿಲ್ಲದೆ, ನೆಟ್ಟಗೆ ಮನೆಗೆ ಬಂದೆ!

ನಿರ್ಮಲೆ –ತುಪ್ಪಕ್ಕಾಗಿ ಹೋದವನು ಹನ್ನೊಂದು ಘಂಟೆ ಮಾಡಿದೆ; ಇನ್ನು ಸೌದೆಗೆ ಹೋದರೆ ಸಾಯಂಕಾಲವೇ ಬರುವೆಯೆನೋ? ನಿಮ್ಮ ಬಾಬೂಜೀಯವರು ಊಟ ಮಾಡದೆಯೇ ಹೊರಟುಹೋದರು. ಇಷ್ಟು ಹೊತ್ತು ಮಾಡುವಂತಿದ್ದರೆ ಮೊದಲೇ ತಿಳಿಸಿಬಿಡಬೇಕಾಗಿತ್ತು? ಈಗ ಸೌದೆಗೆ ಹೋಗುವೆಯಾ?

ಶ್ರೀರಾಮನಿಗೆ ಇನ್ನು ಸಹಿಸಲಾಗಲಿಲ್ಲ; ಸಿಟ್ಟಿನಿಂದ ನುಡಿದನು—ಸೌದೆಯನ್ನು ಇನ್ನಾರ ಕೈಲಾದರೂ ತರಿಸಿಕೊಳ್ಳಿ. ಶಾಲೆಗೆ ಹೋಗಲು ನನಗೆ ಹೊತ್ತಾಯಿತು.

ನಿರ್ಮಲೆ—ಊಟ ಮಾಡುವುದಿಲ್ಲವೇ?

ಶ್ರೀರಾಮ—ಮಾಡುವುದಿಲ್ಲ!

ನಿರ್ಮಲೆ—ನಾನೇನೋ ಮಾಡಿ ಬಡಿಸಲು ಸಿದ್ಧಳಿರುವೆನು; ಆದರೆ ಸೌದೆ ತರಲು ಹೋಗಲಾರೆ!

ಶ್ರೀರಾಮ—ಅಡಿಗೆಯವಳನ್ನೇಕೆ ಕಳುಹಿಸಬಾರದು?

ನಿರ್ಮಲೆ—ಅವಳು ಮಾಡಿಕೊಂಡು ಬರುವ ವ್ಯಾಪಾರವನ್ನು ನೀನೆಂದೂ ನೋಡಿಲ್ಲವೇ?

ಶ್ರೀರಾಮ—ಸರಿಯೆ! ಆದರೆ ನಾನೀಗ ಹೋಗುವುದಿಲ್ಲ.

ನಿರ್ಮಲೆ—ಹಾಗಿದ್ದರೆ ನಂತರ ನನ್ನನ್ನು ತಪ್ಪಿಗೆಳೆಯಬೇಡ!

ಶ್ರೀರಾಮನು ಎಷ್ಟೋ ದಿನಗಳಿಂದ ಶಾಲೆಗೆ ಹೋಗಿರಲಿಲ್ಲ. ಈ ಪೇಟೆಯ ಸುತ್ತಾಟದಲ್ಲೇ ಬಹಳ ಸಮಯ ಕಳೆದು ಹೋಗುತ್ತಿದ್ದುದರಿಂದ, ಅವನಿಗೆ ಪಾಠಗಳನ್ನೇ ಓದಿಕೊಳ್ಳಲಾಗುತ್ತಿರಲಿಲ್ಲ. ಶಾಲೆಗೆ ಹೋಗಿ ಉಪಾಧ್ಯಾಯರಿಂದ ಬೈಸಿಕೊಂಡು, ಸೋಮಾರಿಟೋಪಿ ಹಾಕಿಸಿಕೊಂಡು ಬೆಂಚಿನ ಮೇಲೆ ನಿಂತುಕೊಳ್ಳುವುದರಿಂದ ಏನು ಪ್ರಯೋಜನ? ಆದ್ದರಿಂದ ಅವನು ಪ್ರತಿದಿನವೂ ಪುಸ್ತಕಗಳನ್ನು ತೆಗೆದುಕೊಂಡು ಮನೆಯಿಂದ ಹೊರಟು, ಊರಿನಾಚೆ ಯಾವುದಾದರೂ ವೃಕ್ಷದ ನೆರಳಲ್ಲಿ ಕುಳಿತು ಕಾಲಕಳೆಯುತ್ತಿದ್ದನು

ಮತ್ತು ಮೂರು ಘಂಟೆಗೆ ಮನೆಗೆ ಹಿಂತಿರುಗುತ್ತಿದ್ದನು. ಈ ದಿನವೂ ಹೀಗೆಯೇ ಮನೆಯಿಂದ ಹೊರಟನು. ಆದರೆ ಸುಮ್ಮನೆ ಕುಳಿತುಕೊಳ್ಳಲಾಗ ಲಿಲ್ಲ. ಉರಿ ಬಿಸಿಲು; ಅಲ್ಲದೆ ಊಟವೂ ಇಲ್ಲ! ಅತಿ ಸಂಕಟದಿಂದ ಯೋಚಿಸ ತೊಡಗಿದನು—ಅದೇಕೆ? ಹತ್ತು ಘಂಟೆಗೆ ಅಡಿಗೆ ಮಾಡಲಾಗುವುದಿಲ್ಲವೇ? ಒಂದು ವೇಳೆ ಬಾಬೂಜೀಯವರು ಊಟ ಮಾಡದೆ ಹೋಗಿದ್ದಿರಬಹುದು. ಆದರೆ ನನಗೆ ತಿಂಡಿಗಾಗಿ ಅರ್ಧಾಣೆ ಒಂದಾಣೆ ಕೊಡಲೂ ಮನೆಯಲ್ಲಿ ಕಾಸಿರಲಿಲ್ಲವೇ? ಅಮ್ಮನಿದ್ದಿದ್ದರೆ ಹೀಗೆ ಊಟ ಮಾಡದೆ ಹೋಗಗೊಡು ತ್ತಿದ್ದಳೇ? ಇನ್ನಾರು ನನ್ನವರಿರುವರು, ದೇವಾ!

ಶ್ರೀರಾಮನ ಮನಸು ಸಾಧುವಿನ ದರ್ಶನಕ್ಕಾಗಿ ಕಾತರಗೊಂಡಿತು. 'ಈ ಹೊತ್ತಿನಲ್ಲಿ ಎಲ್ಲಿ ಸಿಗುವರು? ಎಲ್ಲಿ ಹೋಗಿ ನೋಡಲಿ? ನಾನು ಅವರ ಸಂಗಡಲೇ ಏಕೆ ಹೊರಟುಹೋಗಲಿಲ್ಲ? ಮನೆಯಲ್ಲಿ ನನಗಿದ್ದುದಾದರೂ ಏನು?' ಎಂದು ಯೋಚಿಸಿದನು. ಅವರ ಮನೋಹರ ವಾಣಿ ಮತ್ತು ಉತ್ಸಾಹಪ್ರದ ಸಾಂತ್ವನೆಯು ಅವನ ಮನಸನ್ನಾಕರ್ಷಿಸತೊಡಗಿತು.

ಇಂದು ಅವನು ಹಿಂತಿರುಗಿ ಮನೆಗೆ ಹೋಗಲಿಲ್ಲ. ಸಾಧುವು ಅದೇ ಅಂಗಡಿಯ ಬಳಿ ಏನಾದರೂ ಸಿಗುವರೊ?–ಎಂಬ ಆಸೆಯಿಂದ ನೆಟ್ಟಗೆ ಅಲ್ಲಿಗೆ ಹೋದನು. ಆದರೆ ಅಲ್ಲಿ ಸಾಧುವಿರಲಿಲ್ಲ. ಬಹಳ ಹೊತ್ತು ಅಲ್ಲೇ ನಿಂತಿದ್ದು, ನಂತರ ಹಿಂತಿರುಗಿದನು.

ಮನೆಗೆ ಬಂದು ಕುಳಿತೊಡನೆಯೇ ನಿರ್ಮಲೆಯು ಕೇಳಿದಳು—ಇಷ್ಟು ಹೊತ್ತೇಕೆ ಮಾಡಿದೆ? ಬೆಳಗ್ಗೆಯಂತೂ ಅಡಿಗೆ ಮಾಡಲಿಲ್ಲ; ಈಗಲೂ ಉಪ ವಾಸವಿರಲಾಗುವುದೇ? ಪೇಟೆಗೆ ಹೋಗಿ ಏನಾದರೂ ತರಕಾರಿ ತೆಗೆದು ಕೊಂಡುಬಾ!

ಶ್ರೀರಾಮನು ಸಿಟ್ಟಿನಿಂದ ನುಡಿದನು—ದಿನವೆಲ್ಲಾ ಉಪವಾಸವಿದ್ದು ಮನೆಗೆ ಬಂದರೆ, ಕುಡಿಯಲು ಒಂದು ಲೋಟ ನೀರು ಸಹ ಕೊಡದೆ, ಪೇಟೆಗೆ ಹೋಗೆಂದು ಆಜ್ಞೆ ಮಾಡುತ್ತಿರುವಿರಿ? ನಾನು ಹೋಗುವುದಿಲ್ಲ! ನಾನಾರ ನೌಕರನೂ ಅಲ್ಲ! ಎರಡು ಹೊತ್ತಿನ ಊಟಕ್ಕಾಗಿ ಇಷ್ಟೆಲ್ಲ ಏಕೆ ಕಷ್ಟಪಡಲಿ? ಇದೇ ಕಷ್ಟವನ್ನು ಮತ್ತೆಲ್ಲಾದರೂ ಪಟ್ಟರೆ, ನನ್ನ ಹೊಟ್ಟೆ ಹೊರೆದುಕೊಳ್ಳ ಬಲ್ಲೆ! ಎಲ್ಲಿದ್ದರೂ ಚಾಕರಿ ಮಾಡಲೇಬೇಕಾದದ್ದು ದಿಟ; ಆದರೆ ನಿಮ್ಮ ಚಾಕರಿ ಮಾತ್ರ ಖಂಡಿತ ಮಾಡಲಾರೆ! ನನಗೋಸ್ಕರ ಅಡಿಗೆ ಮಾಡಬೇಡ.

ನಿರ್ಮಲೆಯು ಅವಾಕ್ಕಾದಳು. ಹುಡುಗನಿಗೆ ಇಂದೇನಾಯಿತು? ನಿತ್ಯವೂ ಮರುಮಾತಾಡದೆ ಪೇಟೆಗೆ ಹೋಗಿ, ಹೇಳಿದ ಕೆಲಸ ಮಾಡಿ ಕೊಂಡು ಬರುತ್ತಿದ್ದ! ಈ ದಿನವೇಕೆ ಹುಬ್ಬುಗಂಟಿಕ್ಕಿ ಕೂಗಾಡುತ್ತಿರುವನು? ಈಗಲಾದರೂ ಅವನಿಗೆ ತಿಂಡಿ ತಿನ್ನೆಂದು ಒಂದೆರಡಾಣೆ ಕೊಡಬೇಕೆಂದು ನಿರ್ಮಲೆಗೆ ತೋರಲಿಲ್ಲ. ಈಚೆಗೆ ಅವಳು ಅತ್ಯಂತ ಕೃಪಣ ಸ್ವಭಾವದವಳಾಗಿ ದ್ದಳು. ಅವಳೆಂದಳು—ಮನೆಕೆಲಸ ಮಾಡುವುದಕ್ಕೆ ಚಾಕರಿಯೆಂದು ಹೇಳು ವರೇ? ಹಾಗಿದ್ದ ಪಕ್ಷಕ್ಕೆ ನಾನೂ ಅಡಿಗೆ ಮಾಡುವುದಿಲ್ಲವೆಂದು ಹೇಳ ಬಹುದು; ನಿಮ್ಮ ತಂದೆಯುವರೂ ಕಛೇರಿಗೆ ಹೋಗುವುದಿಲ್ಲವೆಂದು ಹೇಳ ಬಹುದು. ಹೀಗಾದರೆ ಮನೆಕೆಲಸ ಯಾವ ರೀತಿ ನಡೆಯುವುದು? ನಿನಗಿಷ್ಟ ವಿಲ್ಲದಿದ್ದರೆ ಹೋಗಬೇಡ, ಅಡಿಗೆಯವಳನ್ನು ಕಳುಹಿಸಿ ತರಿಸಿಕೊಳ್ಳುವೆನು. ಪೇಟೆಗೆ ಹೋಗುವುದು ನಿನಗಿಷ್ಟು ಅಸಹ್ಯವಾಗಿ ತೋರುವುದೆಂದು ನನಗೇನು ಗೊತ್ತಿತ್ತು? ಈ ವಿಷಯ ತಿಳಿದಿದ್ದರೆ ಖಂಡಿತವಾಗಿ ನಿನಗೆ ಹೇಳುತ್ತಿರಲಿಲ್ಲ. ಇಂದಿನಿಂದ ಹೇಳುವುದಿಲ್ಲ!

ಶ್ರೀರಾಮನು ಮನಸಿನಲ್ಲೇ ತುಸು ಲಜ್ಜಿತನಾದನು: ಆದರೆ ಪೇಟೆಗೆ ಹೋಗಲಿಲ್ಲ. ಅವನ ಧ್ಯಾನವೆಲ್ಲಾ ಆ ಸಾಧುವಿನ ಕಡೆ ಆಕರ್ಷಿತವಾಗಿತ್ತು. ತನ್ನ ದುಃಖಗಳೆಲ್ಲಾ ಕೊನೆಗೊಂಡು, ಜೀವನದ ಆಸೆಗಳು ಸಫಲವಾಗಬೇಕಾ ದರೆ ಸಾಧುಗಳ ಆಶೀರ್ವಾದದಿಂದಲೇ! ಅವರಿಗೆ ಶರಣು ಹೋಗುವುದ ರಿಂದಲೇ ತನ್ನ ಜೀವನ ಸಾರ್ಥಕವಾಗುವುದು–ಎಂದವನು ಬಗೆದಿದ್ದನು. ಸೂರ್ಯಾಸ್ತ ಸಮಯಕ್ಕೆ ಅವನು ಅತ್ಯಂತ ಕಾತರನಾದನು. ಪೇಟೆ ಬೀದಿ ಯಲ್ಲೆಲ್ಲಾ ಒಂದಂಗಡಿಯನ್ನೂ ಬಿಡದೆ ಹುಡುಕಿದನು. ಆದರೆ ಸಾಧುವು ಎಲ್ಲೂ ಸಿಗಲಿಲ್ಲ. ದಿನವೆಲ್ಲವೂ ಉಪವಾಸವಿದ್ದು ಬಳಲಿ ಬೆಂಡಾಗಿದ್ದ ಆ ಅಬೋಧ ಬಾಲಕನು ತನ್ನ ಹೃದಯದ ದುಃಖವನ್ನು ಅದುಮಿರಿಸಿಕೊಂಡು ಗಲ್ಲಿಗಲ್ಲಿ, ಬೀದಿಬೀದಿ, ಅಂಗಡಿ, ದೇವಸ್ಥಾನ ಎಲ್ಲಾ ಕಡೆಗಳಲ್ಲೂ ಹುಡುಕಿ ದನು. ಒಮ್ಮೆ ಒಂದು ದೇವಸ್ಥಾನದ ಮುಂದೆ ಯಾವನೋ ಒಬ್ಬ ಸಾಧು ಕುಳಿತಿದ್ದಂತೆ ಕಂಡುಬಂತು. ಆ ಸಾಧುವೇ ಇರಬಹುದೆಂದು ತಿಳಿದು, ಅವನ ಹರ್ಷೋನ್ಮಾದಕ್ಕೆ ಪಾರವೇ ಇಲ್ಲದಂತಾಯಿತು. ಸಮೀಪಕ್ಕೆ ಓಡಿಹೋಗಿ ನೋಡಿದನು; ಆದರೆ ಇವನಾರೋ ಬೇರೆ ಸಾಧುವಾದ್ದರಿಂದ ನಿರಾಶನಾಗಿ ಮುಂದಕ್ಕೆ ತೆರಳಿದನು.

ಸುತ್ತಲೂ ನಿಸ್ತಬ್ಧತೆ ಕವಿಯಿತು. ಎಲ್ಲಾ ಮನೆಗಳ ಬಾಗಿಲುಗಳೂ ಮುಚ್ಚಲ್ಪಟ್ಟವು. ಸಕಲರೂ ಸುಖ ನಿದ್ರೆಯಲ್ಲಿ ಮಗ್ನರಾದರು; ಆದರೆ ಶ್ರೀರಾಮನು ಮನೆಗೆ ಹಿಂತಿರುಗಲಿಲ್ಲ. ಪ್ರೀತಿ–ವಾತ್ಸಲ್ಯರಹಿತವಾದ ಮನೆಯಿಂದ ಅವನ ಮನಸು ಬೇಸರಗೊಂಡಿತ್ತು. ' ಈಗಲಾದರೂ ನಾನು ಮನೆಗೆ ಹಿಂತಿರುಗಲಿಲ್ಲವೆಂದು ಚಿಂತಿಸುವವರಾರು? ಬಾಬೂಜೀಯವರು ಊಟ ಮಾಡಿ ಮಲಗಿರಬಹುದು; ಅಮ್ಮನೂ ವಿಶ್ರಮಿಸಿಕೊಳ್ಳುತ್ತಿರಬಹುದು; ನನ್ನ ಕೊಠಡಿಯ ಕಡೆ ಸಹ ಯಾರೂ ಇಣಿಕಿ ನೋಡಿರಲಿಕ್ಕಿಲ್ಲ! ರುಕ್ಮಿಣಿ ಅತ್ತೆಯು ಮಾತ್ರ ಗಾಬರಿಗೊಂಡಿರಬಹುದು; ಮತ್ತು ಇದುವರೆಗೆ ನನ್ನ ಹಾದಿ ಕಾಯುತ್ತಿರಬಹುದು! ನಾನು ಹೋಗುವವರೆಗೂ ಊಟ ಮಾಡದೆ ಕಾದಿರುವರು ' ಎಂದು ಮುಂತಾಗಿ ಯೋಚಿಸಿಕೊಂಡನು.

ರುಕ್ಮಿಣಿ ಅತ್ತೆಯ ನೆನಪಾದೊಡನೆಯೇ ಅವನು ಮನೆಯ ಕಡೆ ಹೊರಟನು. ಅವಳು ಮತ್ತೇನು ಮಾಡಲಾಗದಿದ್ದರೂ ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಮಾಧಾನ ಹೇಳುತ್ತಿದ್ದಳು; ಅಲ್ಲದೆ ಮನೆಗೆ ಬಂದೊಡನೆ ಕೈಕಾಲು ತೊಳೆದುಕೊಳ್ಳಲು ಮತ್ತು ಕುಡಿಯಲು ಒಂದು ಲೋಟ ನೀರನ್ನಾದರೂ ಕೊಡುತ್ತಿದ್ದಳು! ಪ್ರಪಂಚದಲ್ಲಿ ಎಲ್ಲಾ ಬಾಲಕರೂ ಸುಖದಿಂದಲೇ ಬೆಳೆಯುವರೇ? ಎಷ್ಟೋ ಮಕ್ಕಳಿಗೆ ಹೊಟ್ಟೆ ತುಂಬ ಊಟ ಸಹ ಸಿಗುವುದಿಲ್ಲ. ಆದರೆ ಈ ರೀತಿ ಮನೆಯಿಂದ ವಿರಕ್ತರಾಗಬೇಕಾದರೆ ಮಾತೃಸ್ನೇಹದಿಂದ ವಂಚಿತರಾದವರೇ!

ಶ್ರೀರಾಮನು ಮನೆಯ ಕಡೆ ಹೋಗುತ್ತಿರುವಂತೆಯೇ ಅಕಸ್ಮಾತ್ ಸಾಧು ಪರಮಾನಂದರು ಒಂದು ಗಲ್ಲಿಯಿಂದ ಅವನೆದುರಿಗೆ ಬಂದರು. ಶ್ರೀರಾಮನು ಓಡಿಹೋಗಿ ಅವರ ಕೈಗಳನ್ನು ಹಿಡಿದುಕೊಂಡನು. ಸಾಧುವು ಬೆಚ್ಚಿ ಬಿದ್ದು ಕೇಳಿದನು –ಮಗೂ! ನೀನು ಇಲ್ಲೆಲ್ಲಿ ಬಂದೆ?

ಶ್ರೀರಾಮ—ಇಲ್ಲೇ ಒಬ್ಬ ಮಿತ್ರನನ್ನು ಕಾಣಲು ಬಂದಿದ್ದೆ. ತಮ್ಮ ಸ್ಥಳವು ಇಲ್ಲಿಂದ ಎಷ್ಟು ದೂರ?

ಪರಮಾನಂದ—ಈ ದಿನ ನಾವು ಇಲ್ಲಿಂದ ಹೊರಡುವೆವು, ಮಗು! ಹರಿದ್ವಾರ ಯಾತ್ರೆಗೆ ಹೊರಡಬೇಕಾಗಿದೆ.

ಶ್ರೀರಾಮನು ಹತೋತ್ಸಾಹನಾಗಿ ಕೇಳಿದನು—ಇಂದೇ ಹೋಗುವಿರಾ?

ಪರಮಾನಂದ—ಹೌದು, ಮಗು! ಅಲ್ಲಿಂದ ಹಿಂತಿರುಗಿದ ನಂತರ ದರ್ಶನ ಕೊಡುವೆನು.

ಕಾತರದ ಧ್ವನಿಯಿಂದ ಶ್ರೀರಾಮನು ಕೇಳಿದನು—ಹಿಂತಿರುಗಿದ ನಂತರವೇ?

ಪರಮಾನಂದ—ಹೌದು; ಜಾಗ್ರತೆಯಲ್ಲೇ ಹಿಂತಿರುಗುವೆನು, ಮಗು!

ಶ್ರೀರಾಮನು ದೀನಭಾವದಿಂದ ನುಡಿದನು—ನಾನೂ ನಿಮ್ಮ ಸಂಗಡ ಬರುವೆನು.

ಪರಮಾನಂದ—ನನ್ನ ಸಂಗಡಲೇ? ನಿಮ್ಮ ಮನೆಯವರು ಹೋಗಗೊಡುವರೇ?

ಶ್ರೀರಾಮ—ಮನೆಯವರಿಗೆ ನನ್ನದೇನು ಲಕ್ಷ್ಯ? ಶ್ರೀರಾಮನಿಗೆ ಇನ್ನು ಮುಂದೆ ಮಾತನಾಡಲಾಗಲಿಲ್ಲ; ಕಂಠ ಬಿಗಿದು ಬಂತು. ಅವನ ಅಶ್ರುಪೂರಿತ ನೇತ್ರಗಳು ಅವನ ಕರುಣ ಕಥೆಯನ್ನು ಸವಿಸ್ತರವಾಗಿ ಬಣ್ಣಿಸಿದವು.

ಪರಮಾನಂದನು ಬಾಲಕನನ್ನು ಹೃದಯಕ್ಕಪ್ಪಿಕೊಂಡು ಹೇಳಿದನು—ಒಳ್ಳೆಯದು, ಮಗು! ನಿನ್ನ ಇಷ್ಟವಿದ್ದರೆ ಬಾ! ಸಾಧುಸಂತರ ಸಹವಾಸದ ಆನಂದವನ್ನು ಅನುಭವಿಸು. ಭಗವಂತನ ಕೃಪೆ ಇದ್ದರೆ ನಿನ್ನ ಇಷ್ಟಾರ್ಥ ಪೂರ್ತಿಯಾಗುವುದು.

ಬಲೆಯ ಮೇಲೆ ಹಾರಾಡುತ್ತಿದ್ದ ಹಕ್ಕಿ ಕಡೆಗೆ ಬಲೆಯಲ್ಲಿ ಸಿಕ್ಕಿಬಿತ್ತು. ಆದರ ಜೀವನದಂತ್ಯವು ಪಂಜರದಲ್ಲೋ ಅಥವಾ ಬೇಡನ ಕೈಯಿಂದಲೋ ಯಾರು ಬಲ್ಲರು?

## ಇಪ್ಪತ್ತಮೂರನೆಯ ಪರಿಚ್ಛೇದ

ಮುನ್ಷಿಯವರು ಸಾಯಂಕಾಲ ಐದು ಘಂಟೆಗೆ ಕಛೇರಿಯಿಂದ ಹಿಂತಿರುಗಿದೊಡನೆ ಮಂಚದ ಮೇಲೆ ಆಯಾಸದಿಂದ ಮಲಗಿಕೊಂಡರು. ವೃದ್ಧಾಪ್ಯ; ಅಲ್ಲದೆ ದಿನವೆಲ್ಲಾ ಊಟ ಸಹ ಮಾಡಿರಲಿಲ್ಲ ಆದ್ದರಿಂದ ಮುಖ ಬಾಡಿ ಬೆಂಡಾಗಿತ್ತು. ಈ ದಿನ ಏನೂ ಸಿಕ್ಕಲಿಲ್ಲವೆಂದು ನಿರ್ಮಲೆ ತಿಳಿದುಕೊಂಡಳು.

ನಿರ್ಮಲೆ – ಏಕೆ ? ಈ ದಿನ ಏನೂ ಸಿಗಲಿಲ್ಲವೇ ?

ಮುನ್ಷಿ—ದಿನವೆಲ್ಲಾ ಓಡಾಡಿ ಓಡಾಡಿ ಬೇಸತ್ತೆ; ಕೆಡೆಗೂ ಏನೂ ಕೈ ಹತ್ತಲಿಲ್ಲ !

ನಿರ್ಮಲೆ – ಫೌಜದಾರೀ ಮೊಕದ್ದಮೆಯಲ್ಲಿ ಏನಾಯಿತು ?

ಮುನ್ಷಿ—ನನ್ನ ಕಕ್ಷಿದಾರನಿಗೆ ಸಜಾ ವಿಧಿಸಲ್ಪಟ್ಟಿತು.

ನಿರ್ಮಲೆ—ಪಂಡಿತರ ಮೊಕದ್ದಮೆಯಲ್ಲಿ ಏನಾಯಿತು ?

ಮುನ್ಷಿ—ಡಿಕ್ರಿಯಾಗಿ ಹೋಯಿತು.

ನಿರ್ಮಲೆ– ದಾವಾ ಮಾಡಲಾಗುವುದೆಂದು ಹೇಳಿದ್ದಿರಲ್ಲವೇ ?

ಮುನ್ಷಿ– ಹೌದು, ಹೇಳಿದ್ದೆ. ಆದೂ ಹೀಗಾಗಿ ಹೋಯಿತು.

ನಿರ್ಮಲೆ— ಇನ್ನೊಂದು ದಾವಾದಲ್ಲಿ ಏನಾಯಿತು ?

ಮುನ್ಷಿ—ಅದರಲ್ಲೂ ಸೋಲೇ !

ನಿರ್ಮಲೆ – ಈ ದಿನ ಯಾವ ನಿರ್ಭಾಗ್ಯನ ಮುಖ ನೋಡಿದ್ದಿರೋ, ಏನೋ ?

ಮುನ್ಷಿಯವರಿಗೆ ವೃದ್ಧಾಪ್ಯದ ದೆಸೆಯಿಂದ ಕೆಲಸ ಮಾಡಲಾಗುತ್ತಿರಲಿಲ್ಲ. ಆದ್ದರಿಂದ ಇತ್ತೀಚೆಗೆ ಅವರಿಗೆ ಮೊಕದ್ದಮೆಗಳೇ ಸಿಗುತ್ತಿರಲಿಲ್ಲ; ಹಾಗೊಂದು ವೇಳೆ ಸಿಕ್ಕರೂ ಸಫಲವಾಗುತ್ತಿರಲಿಲ್ಲ. ಆದರೂ ಅವರು ತಮ್ಮ ವಿಫಲತೆಯನ್ನು ನಿರ್ಮಲೆಯಿಂದ ಬಚ್ಚಿಡುತ್ತಿದ್ದರು. ಮೊಕದ್ದಮೆಯಲ್ಲಿ ಹಣ ಸಿಗದಿದ್ದ ದಿನವೆಲ್ಲಾ ಯಾರಿಂದಾದರೂ ನಾಲ್ಕಾರು ರೂಪಾಯಿಗಳನ್ನು ತೆಗೆದುಕೊಂಡು ನಿರ್ಮಲೆಗೆ ತಂದು ಕೊಡುತ್ತಿದ್ದರು. ಹೀಗಾಗಿ ಎಲ್ಲ ಮಿತ್ರರ ಬಳಿಯಲ್ಲೂ ಸ್ವಲ್ಪಸ್ವಲ್ಪ ಸಾಲವಾಗಿತ್ತು. ಈ ದಿನ ಇದಕ್ಕೂ ಮಾರ್ಗವಾಗಲಿಲ್ಲ.

ನಿರ್ಮಲೆಯು ಚಿಂತಾಪೂರ್ಣ ದನಿಯಿಂದ ನುಡಿದಳು– ವರಮಾನದ ಗತಿ ಹೀಗಾದರೆ ಭಗವಂತನೇ ಕಾಪಾಡಬೇಕು. ಸಾಲದುದಕ್ಕೆ ಹುಡುಗನು ಪೇಟೆಗೆ ಹೋಗಿಬರಲು ಗೊಣಗುಟ್ಟುವನು. ತುಪ್ಪ ತೆಗೆದುಕೊಂಡು ಹನ್ನೊಂದು ಘಂಟೆಗೆ ಮನೆಗೆ ಬಂದನು. ಸೌದೆ ತೆಗೆದುಕೊಂಡುಬಾರೆಂದು ಎಷ್ಟೆಷ್ಟೋ ಹೇಳಿದೆ; ಕಡೆಗೂ ತರಲಿಲ್ಲ.

ಮುನ್ಷಿ—ಹಾಗಿದ್ದರೆ ಅಡಿಗೆ ಮಾಡಲಿಲ್ಲವೇ ?

ನಿರ್ಮಲೆ— ಇಂತಹ ಮಾತುಗಳಿಂದಲೇ ನೀವು ಮೊಕದ್ದಮೆಯಲ್ಲಿ ಸೋಲುವುದು. ಸೌದೆ ಇಲ್ಲದೆ ಅಡಿಗೆ ಮಾಡಲು ಸಾಧ್ಯವೇ ?

ಮುನ್ಶಿ—ಹಾಗಿದ್ದರೆ ಏನೂ ತಿನ್ನದೆಯೇ ಹೊರಟು ಹೋದನೇ?

ನಿರ್ಮಲೆ—ಅವನಿಗೆ ತಿನ್ನಲು ಕೊಡುವುದಕ್ಕೆ ಮನೆಯಲ್ಲಿ ಮತ್ತೇನಿತ್ತು?

ಮುನ್ಶಿಯವರು ಹೆದರುತ್ತ ಹೆದರುತ್ತ ಹೇಳಿದರು—ಒಂದೆರಡಾಣೆಯನ್ನೂ ಕೊಡಲಿಲ್ಲವೇ?

ನಿರ್ಮಲೆಯು ಹುಬ್ಬುಗಂಟಿಕ್ಕಿ ನುಡಿದಳು– ದುಡ್ಡೇನು ಹಿತ್ತಲಲ್ಲಿ ಬೆಳೆಯುವುದೇ?

ಮುನ್ಶಿಯವರು ಏನೂ ಉತ್ತರ ಕೊಡಲಿಲ್ಲ ತಿಂಡಿಯನ್ನಾದರೂ ಮಾಡಿರಬಹುದೆಂದು ಸ್ವಲ್ಪ ಹೊತ್ತು ನಿರೀಕ್ಷಿಸಿದರು. ಆದರೆ ನಿರ್ಮಲೆಯು ಒಂದು ಲೋಟ ನೀರನ್ನು ಸಹ ತಂದುಕೊಡಲಿಲ್ಲ. ಆಗ ಅವರು ನಿರಾಶರಾಗಿ ಹೊರಕ್ಕೆ ಹೋಟುಹೋದರು ಶ್ರೀರಾಮನ ಯೋಚನೆಯಿಂದ ಅವರ ಚಿತ್ತ ಚಂಚಲವಾಯಿತು. ಪಾಪ, ಹುಡುಗನು ದಿನವೆಲ್ಲಾ ಉಪವಾಸವಿದ್ದು ಎಷ್ಟು ಕಷ್ಟಪಡುತ್ತಿರುವನೋ? ಕೊಠಡಿಯಲ್ಲಿ ಸುಮ್ಮನೆ ಮಲಗಿರಬಹುದು. ಒಂದು ದಿನದ ಮಾತ್ರಕ್ಕೆ ಅಡಿಗೆಯವಳ ಕೈಲಿ ಸೌದೆ ತರಿಸಿಕೊಂಡಿದ್ದರೆ ನಷ್ಟವೇನಾಗುತ್ತಿತ್ತು? ಮನೆ ಮಂದಿಯೆಲ್ಲ ಉಪವಾಸವಿದ್ದಾದರೂ ಉಳಿತಾಯ ಮಾಡಬೇಕಾದುದೇನು?–ಎಂದು ಮುಂತಾಗಿ ಯೋಚಿಸಿ, ಒಂದೆರಡಾಣೆಯಾದರೂ ಸಿಗುವುದೋ ಎಂಬಾಸೆಯಿಂದ ತಮ್ಮ ಪೆಟ್ಟಿಗೆಯನ್ನು ಹುಡುಕತೊಡಗಿದರು. ಕಾಗದಪತ್ರಗಳನ್ನೆಲ್ಲಾ ತೆಗೆದಿಟ್ಟರು; ಖಾನೆಖಾನೆಯನ್ನೂ ಶೋಧಿಸಿದರು; ಆದರೆ ಒಂದು ಕಾಸೂ ಸಿಗಲಿಲ್ಲ! ಕಡೆಗೆ ಕಾಗದಗಳನ್ನು ಕೊಡವಿದಾಗ ಒಂದು ನಾಲ್ಕಾಣೆಯ ಬಿಲ್ಲೆ ಕೆಳಗೆ ಬಿತ್ತು. ಮುನ್ಶಿಯವರ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ಹಿಂದೆ ಅವರು ಎಷ್ಟೆಷ್ಟೋ ರೂಪಾಯಿಗಳನ್ನು ಸಂಪಾದಿಸಿದ್ದರು; ಆದರೆ ಇಂದು ಈ ನಾಲ್ಕಾಣೆಯ ಬಿಲ್ಲೆಯನ್ನು ಕಂಡು ಅವರಿಗಾದಷ್ಟು ಆನಂದ ಹಿಂದೆಂದೂ ಆಗಿರಲಿಲ್ಲ. ಅದನ್ನು ಕೈಗೆ ತೆಗೆದುಕೊಂಡು ಶ್ರೀರಾಮನ ಕೊಠಡಿಯ ಬಳಿ ಬಂದು ಕೂಗಿದರು; ಏನೂ ಉತ್ತರ ಸಿಗಲಿಲ್ಲ. ಆಗ ಕೊಠಡಿಯೊಳಗೆ ಹೋಗಿ ನೋಡಿದರು; ಎಲ್ಲೂ ಶ್ರೀರಾಮನ ಪತ್ತೆಯಿಲ್ಲ! 'ಏಕೆ? ಇನ್ನೂ ಶಾಲೆಯಿಂದ ಹಿಂತಿರುಗಲಿಲ್ಲವೇ?' ಎಂದು ಯೋಚಿಸಿ, ಒಳಗಡೆ ಹೋಗಿ ಅಡಿಗೆಯವಳನ್ನು ಕೇಳಿದರು. ಶಾಲೆಯಿಂದ ಹಿಂತಿರುಗಿದನೆಂದು ತಿಳಿಯ ಬಂತು.

ಮುನ್ಷಿ ಕೇಳಿದರು—ಸ್ವಲ್ಪ ಜಲಪಾನವಾದರೂ ಮಾಡಿಹೋದನೇ?

ಅಡಿಗೆಯವಳು ಏನೂ ಉತ್ತರ ಕೊಡಲಿಲ್ಲ. ಮುಖ ತಿರುಗಿಸಿಕೊಂಡು ಹೊರಟು ಹೋದಳು.

ಮುನ್ಷಿಯವರು ಮತ್ತೇನೂ ಮಾತನಾಡದೆ ತಮ್ಮ ಕೊಠಡಿಗೆ ಬಂದು ಕುಳಿತುಕೊಂಡರು. ಇಂದು ಮೊದಲನೆಯ ಬಾರಿ ಅವರಿಗೆ ನಿರ್ಮಲೆಯ ಮೇಲೆ ಕೋಪವುಂಟಾಯಿತು. ಆದರೆ ಒಂದು ಕ್ಷಣದಲ್ಲೇ ಆ ಕೋಪವು ತಮ್ಮ ಮೇಲೆ ತಿರುಗಿತು. ಪುತ್ರನ ವಿಚಾರದಲ್ಲಿ ಇಷ್ಟು ಉದಾಸೀನರಾಗಿದ್ದುದಕ್ಕಾಗಿ ತಮ್ಮನ್ನು ತಾವೇ ಧಿಕ್ಕರಿಸಿಕೊಂಡರು. ದಿನವೆಲ್ಲಾ ಕೆಲಸ ಮಾಡಿ ಆಲಸ್ಯವಾಗಿದ್ದುದರಿಂದ ಹಾಗೆಯೇ ನಿದ್ದೆ ಬಂದಿತು.

ಆ ಹೊತ್ತಿಗೆ ಸರಿಯಾಗಿ ಅಡಿಗೆಯವಳು ಬಂದು ಕೂಗಿದಳು—ಬಾಬೂಜೀ! ಅಡಿಗೆ ಸಿದ್ಧವಾಗಿದೆ. ಮುನ್ಷಿಯವರು ಬೆಚ್ಚಿಕೊಂಡೆದ್ದರು. ಕೊಠಡಿಯಲ್ಲಿ ದೀಪ ಉರಿಯುತ್ತಲೇ ಇತ್ತು.

ಮುನ್ಷಿ—ಎಷ್ಟು ಘಂಟೆಯಾಗಿದೆ ಈಗ? ನನಗೆ ನಿದ್ದೆಯೇ ಬಂದಿತ್ತು.

ಅಡಿಗೆಯವಳು—ಒಂಭತ್ತು ಘಂಟೆಯೆಂದು ತೋರುತ್ತದೆ. ನನಗೆ ಸರಿಯಾಗಿ ಗೊತ್ತಿಲ್ಲ, ಬಾಬೂಜೀ!

ಮುನ್ಷಿ—ಶ್ರೀರಾಮನು ಬಂದನೇ?

ಅಡಿಗೆಯವಳು—ಬಂದಿದ್ದರೆ ಮನೆಯಲ್ಲಿರುತ್ತಿರಲಿಲ್ಲವೇ?

ಮುನ್ಷಿಯವರು ಸಿಟ್ಟಿನಿಂದ 'ಬಂದನೇ ಇಲ್ಲವೇ, ಎಂದು ಕೇಳಿದರೆ ಏನೇನೋ ಹೇಳುತ್ತಿರುವೆ!' ಎಂದರು.

ಅಡಿಗೆಯವಳು—ನಾನು ನೋಡಿಲ್ಲ, ಬಾಬೂಜೀ! ಸುಳ್ಳೇಕೆ ಹೇಳಲಿ?

ಮುನ್ಷಿಯವರು ಪುನಃ ಮಲಗಿಕೊಂಡರು. 'ಅವನೂ ಬರಲಿ; ನಂತರ ಬರುವೆನು!' ಎಂದರು.

ಅರ್ಧ ಘಂಟೆಯ ವರೆಗೆ ಮುನ್ಷಿಯವರು ದ್ವಾರದೆಡೆಗೇ ದಿಟ್ಟಿಸುತ್ತ ಮಲಗಿದ್ದರು. ನಂತರ ಎದ್ದು ಹೊರಗೆ ಬಂದರು. ಬಲಗಡೆಯ ರಸ್ತೆಯಲ್ಲಿ ಹಾಗೆಯೇ ಒಂದೆರಡು ಫರ್ಲಾಂಗ್ ದೂರ ಹೋದರು. ಪುನಃ ಹಿಂತಿರುಗಿ ಮನೆಗೆ ಬಂದು ಕೇಳಿದರು—ಶ್ರೀರಾಮನು ಬಂದನೇ?

ಒಳಗಿನಿಂದ 'ಇನ್ನೂ ಇಲ್ಲ' ಎಂಬ ಧ್ವನಿ ಕೇಳಬಂತು.

ಮುನ್ಷಿಯವರು ಪುನಃ ಎಡಗಡೆಯ ರಸ್ತೆಯಲ್ಲಿ ಒಂದೆರಡು ಫರ್ಲಾಂಗ್

ದೂ ಹೋ ರು. ಶ್ರೀರಾಮನು ಎಲ್ಲೂ ಕಾಣಿಸಲಿಲ್ಲ. ಲ್ಲಿಂದ ಪುನಃ ಮನೆ ಬಾಗಿಲಿಗೆ ಹಿಂತಿರುಗಿ ಕೇಳಿದರು – ಶ್ರೀರಾಮನು ಹಿಂತಿರುಗಿದನೇ ?

ಒಳಗಿನಿಂದ ಪುನಃ ಅದೇ ಉತ್ತರ ಬಂತು.

ಗಡಿಯಾರದಲ್ಲಿ ಹತ್ತು ಘಂಟೆ ಹೊಡೆಯಿತು.

ಮುನ್ಷಿಯವರು ಅತಿ ವೇಗದಿಂದ ಕಂಪನೀಬಾಗಿನ ಕಡೆ ಹೊರಟರು. ಬಹುಶಃ ಅಲ್ಲಿ ತಿರುಗಾಡಲು ಹೋಗಿ, ಹುಲ್ಲಿನ ಮೇಲೆ ಮಲಗಿ ಹಾಗೆಯೇ ನಿದ್ರಿಸಿಬಿಟ್ಟನೋ–ಎಂದು ಯೋಚಿಸಿ, ತೋಟದಲ್ಲೆಲ್ಲಾ ಹುಡುಕಿದರು. ಕಲ್ಲು ಬೆಂಚುಗಳ ಮೇಲೆಲ್ಲಾ ನೋಡಿದರು. ಹುಲ್ಲಿನ ಮೇಲೆ ಎಷ್ಟೋ ಮಂದಿ ಮಲ್ಲ ಗಿದ್ದರು. ಆದರೆ ಶ್ರೀರಾಮನು ಎಲ್ಲೂ ಕಾಣಿಸಲಿಲ್ಲ. ಅವನ ಹೆಸರು ಹಿಡಿದು ನಾಲ್ಕೈದು ಸಲ ಜೋರಾಗಿ ಕೂಗಿದರು; ಎಲ್ಲಿಂದಲೂ ಉತ್ತರ ಬರಲಿಲ್ಲ.

ಬಹುಶಃ ಶಾಲೆಯಲ್ಲಿ ಏನಾದರೂ ಆಟನೋಟವೋ–ಎಂದು ಯೋಚಿಸಿ ಶಾಲೆಯ ಕಡೆ ನಡೆದರು. ಶಾಲೆಯು ಅಲ್ಲಿಂದ ಸುಮಾರು ಒಂದು ಮೈಲಿ ಮೇಲಿತ್ತು. ಪೇಟೆಯ ಅಂಗಡಿಗಳೆಲ್ಲಾ ಬಾಗಿಲು ಮುಚ್ಚಿದ್ದವು. ಇಷ್ಟು ರಾತ್ರಿ ಯಾದ ನಂತರ ಶಾಲೆಯಲ್ಲೇನೂ ನೋಟವಿರಲಾರದು–ಎಂದುಕೊಂಡು ಅರ್ಧ ಹಾದಿಯಿಂದಲೇ ಹಿಂತಿರುಗಿದರು. ಇಷ್ಟು ಹೊತ್ತಿಗೆ ಶ್ರೀರಾಮನು ಖಂಡಿತ ಮನೆಗೆ ಬಂದಿರಬಹುದು–ಎಂದು ಯೋಚಿಸಿ, ಮನೆ ಬಾಗಿಲ ಬಳಿ ಬಂದು 'ಶ್ರೀರಾಮನು ಬಂದನೇ ?' ಎಂದು ಕೇಳಿದರು. ಬಾಗಿಲು ಮುಚ್ಚಿತ್ತು. ಒಳ ಗಿನಿಂದ ಏನೂ ಉತ್ತರ ಬರಲಿಲ್ಲ. ಮತ್ತೊಮ್ಮೆ ಜೋರಾಗಿ ಕೂಗಿದರು. ಅಡಿಗೆಯವಳು ಬಾಗಲು ತೆಗೆದು ಹೇಳಿದಳು—ಇನ್ನೂ ಬಂದಿಲ್ಲ. ಮುನ್ಷಿ ಯವರು ಒಳ್ಳೆಯ ಮಾತಿನಿಂದ ಅವಳನ್ನು ಬಳಿಗೆ ಕರೆದು, ಕರುಣ ದನಿ ಯಿಂದ ಕೇಳಿದರು—ನಿನಗಾದರೆ ಮನೆಯಲ್ಲಿ ನಡೆಯುವ ವಿಷಯವೆಲ್ಲಾ ಗೊತ್ತು. ಈ ದಿನ ಏನಾಯಿತು, ಹೇಳು ?

ಅಡಿಗೆಯವಳು—ಬಾಬೂಜೀ, ಏನು ಹೇಳಲಿ ? ಹೇಳಿದರೆ ಯಜ ಮಾನಿಯು ನನ್ನನ್ನೆಲ್ಲಿ ಕೆಲಸದಿಂದ ತೆಗೆದುಬಿಡುವರೋ–ಎಂಬ ಹೆದರಿಕೆ. ಹತ್ತೊಬ್ಬರ ಹುಡುಗನಾದ ಮಾತ್ರಕ್ಕೆ ಇಷ್ಟು ಗೋಳಾಡಿಸುವುದೇ ? ದಿನಕ್ಕೆ ಅದೆಷ್ಟು ಬಾರಿ ಪೇಟೆಗೆ ಕಳಿಹಿಸುವುದು ? ಹೊತ್ತೆಲ್ಲಾ ಇದರಲ್ಲೇ ಕಳೆದು ಹೋಗುತ್ತಿತ್ತು. ಈ ದಿನ ಸೌದೆ ತರಲು ಹೋಗಲಿಲ್ಲವೆಂದು ಬಳೆಯುನ್ನೇ

ಹೊತ್ತಿಸಲಿಲ್ಲ ಹೇಳಿದರೆ ಹುಬ್ಬುಗಂಟಿಕ್ಕುವರು. ಮಕ್ಕಳನ್ನು ನೀವೇ ನೋಡದ ಬಳಿಕ ಮತ್ತಾರು ನೋಡುವರು? ನಡೆಯಿರಿ, ಊಟ ಮಾಡಿ! ಬಹೂಜೀಯವರು ಎಷ್ಟು ಹೊತ್ತಿನಿಂದ ಕಾದಿರುವರು?

ಮುನ್ಷಿ— ಈಗ ಊಟ ಮಾಡುವುದಿಲ್ಲವೆಂದು ಹೇಳಿಬಿಡು.

ಮುನ್ಷಿಯವರು ತಮ್ಮ ಕೊಠಡಿಯನ್ನು ಹೊಕ್ಕು, ಒಮ್ಮೆ ನಿಟ್ಟುಸಿರು ಬಿಟ್ಟರು 'ಹಾ, ದೇವಾ! ದಂಡನೆ ಇನ್ನೂ ಮುಗಿಯಲಿಲ್ಲವೇ? ಈ ಅಂಧನಿಗಾಧಾರವಾದ ಕೋಲನ್ನೂ ಕಿತ್ತುಕೊಳ್ಳುವೆಯಾ?' ಎಂಬ ವೇದನಾಪೂರ್ಣ ಶಬ್ದಗಳು ಅವರ ಮುಖದಿಂದ ಹೊರಟವು.

ನಿರ್ಮಲೆಯು ಬಂದು ಹೇಳಿದಳು— ಈ ದಿನ ಶ್ರೀರಾಮನು ಇಷ್ಟು ಹೊತ್ತಾದರೂ ಮನೆಗೇ ಬಂದಿಲ್ಲ. ಅಡಿಗೆ ಮಾಡುವೆನು, ಊಟ ಮಾಡಿಕೊಂಡು ಹೋಗೆಂದು ಹೇಳುತ್ತಲೇ ಇದ್ದೆ; ಯಾವಾಗಲೋ ಎದ್ದು ಹೊರಟು ಹೋಗಿರುವನು. ಎಲ್ಲಿ ಸುತ್ತುತ್ತಿರುವನೋ ಏನೋ? ಹೇಳಿದ ಮಾತನ್ನು ಕೇಳುವುದೇ ಇಲ್ಲ ಇನ್ನೆಷ್ಟು ಹೊತ್ತು ಅವನ ಹಾದಿ ಕಾಯುತ್ತ ಕುಳಿತಿರುವುದು? ಏಳಿ, ನೀವು ಊಟ ಮಾಡಿ! ಅವನ ಪಾಲನ್ನು ಎತ್ತಿರಿಸಿ ಬಿಡುವೆನು.

ಮುನ್ಷಿಯವರು ನಿರ್ಮಲೆಯ ಕಡೆ ಕಠೋರ ನೇತ್ರಗಳಿಂದ ನೋಡಿ ನುಡಿದರು— ಈಗೆಷ್ಟು ಘಂಟೆಯಾಗಿರಬಹುದು?

ನಿರ್ಮಲೆ— ಹತ್ತು ಘಂಟೆ ಇರಬಹುದು!

ಮುನ್ಷಿ— ಇಲ್ಲ. ಇಲ್ಲ. ಹನ್ನೆರಡು ಘಂಟೆ!

ನಿರ್ಮಲೆ— ಹನ್ನೆರಡು ಹೊಡೆದು ಹೋಯಿತೇ? ಎಂದೂ ಇಷ್ಟು ಹೊತ್ತು ಮಾಡುತ್ತಿರಲಿಲ್ಲ. ಇನ್ನೆಷ್ಟು ಹೊತ್ತಿನ ವರೆಗೆ ಅವನ ದಾರಿ ಕಾಯುತ್ತ ಕುಳಿತಿರುವಿರಿ? ಮಧ್ಯಾಹ್ನವೂ ಏನೂ ತಿಂದು ಹೋಗಲಿಲ್ಲ. ಇಂತಹ ಸ್ವೇಚ್ಛೆಯ ಹುಡುಗನನ್ನು ನಾನೆಲ್ಲೂ ನೋಡಿರಲಿಲ್ಲ.

ಮುನ್ಷಿ—ಏಕೆ? ನಿನ್ನನ್ನು ಬಹಳ ಬೇಸರ ಪಡಿಸುವನೇ?

ನಿರ್ಮಲೆ— ನೋಡಿ! ಇಷ್ಟು ಹೊತ್ತಾದರೂ ಅವನಿಗೆ ಮನೆಯ ಜ್ಞಾನವಿದೆಯೇ?

ಮುನ್ಷಿ— ಬಹುಶಃ ಇದೇ ಅವನ ಕೊನೆಯ ಶರಾರತ್ತಿರಬಹುದು!

ನಿರ್ಮಲೆ— ಇಂತಹ ಮಾತುಗಳನ್ನೇಕಾಡುವಿರಿ? ಎಲ್ಲಿ ಹೋಗುವನು?

ಯಾರೋ ಮಿತರ ಮನೆಯಲ್ಲಿ ಮಲಗಿಕೊಂಡಿರಬಹುದು. ಬೆಳಿಗ್ಗೆ ಬರುವನು.

ಮುನ್ಷಿ—ಇರಬಹುದು. ಭಗವಂತನ ಕೃಪೆಯಿಂದ ಹಾಗೆಯೇ ಆಗಲಿ.

ನಿರ್ಮಲೆ—ಬೆಳಿಗ್ಗೆ ಬಂದರೆ ಸ್ವಲ್ಪ ಹೆದರಿಸಿ ತಿಳಿವಳಿಕೆ ಹೇಳಿ!

ಮುನ್ಷಿ—ಹಾಗೆಯೇ ಆಗಲಿ.

ನಿರ್ಮಲೆ—ನಡೆಯಿರಿ! ಬಹಳ ಹೊತ್ತಾಯಿತು; ಊಟ ಮಾಡಿ!

ಮುನ್ಷಿ—ಬೆಳಿಗ್ಗೆ ಅವನನ್ನು ಹೆದರಿಸಿ, ತಿಳಿವಳಿಕೆ ಹೇಳಿ, ನಂತರ ಊಟ ಮಾಡುವೆನು. ಒಂದುವೇಳೆ ಬರದೇ ಹೋದರೆ ಇಂತಹ ಸತ್ಯಸಂಧ ನೌಕರನು ನಿನಗೆಲ್ಲಿ ಸಿಗುವನು?

ನಿರ್ಮಲೆಯು ಹುಬ್ಬುಗಂಟಿಕ್ಕಿ ಹೇಳಿದಳು ಹಾಗಿದ್ದರೆ ನಾನು ಅವನನ್ನು ಮನೆಯಿಂದ ಓಡಿಸಿದೆನೇ?

ಮುನ್ಷಿ—ಇಲ್ಲ; ಹಾಗೆಂದು ಯಾರು ಹೇಳಿದರು? ನೀನೇಕೆ ಅವನನ್ನು ಓಡಿಸುವೆ? ನಿನಗೇ ಕೆಲಸ ಮಾಡಿಕೊಡುತ್ತಿದ್ದ! ಬಹುಶಃ ಆಪತ್ಕಾಲ ಸಮೀಪಿಸಿರಬಹುದು!

ಮಾತ್ತು ಮುಂದುವರಿಯುವುದೆಂಬ ಹೆದರಿಕೆಯಿಂದ, ನಿರ್ಮಲೆ ಮತ್ತೇನೂ ಹೇಳಲಿಲ್ಲ. ಒಳಕ್ಕೆ ಹೊರಟು ಹೋದಳು. ಮಲಗಿಕೊಳ್ಳಿರೆಂದೂ ಹೇಳಲಿಲ್ಲ. ತುಸು ಹೊತ್ತಿನಲ್ಲೇ ಅಡಿಗೆಯವಳು ಒಳಗಿನಿಂದ ಬಾಗಿಲು ಹಾಕಿಕೊಂಡಳು.

ಪಾಪ, ಮುನ್ಷಿಯವರಿಗೆ ನಿಜವಾಗಿ ನಿದ್ದೆ ಬರುವುದೇ? ಮೂರು ಮಂದಿ ಮಕ್ಕಳಲ್ಲಿ ಒಬ್ಬನು ಉಳಿದಿದ್ದನು. ಅವನೂ ಕೈಬಿಟ್ಟು ಹೋದರೆ ಜೀವನದಲ್ಲಿ ಅಂಧಕಾರದ ಹೊರತು ಬೇರೇನಿದೆ? ವಂಶದ ಹೆಸರು ಹೇಳಲು ಸಹ ಯಾರೂ ಇರುವುದಿಲ್ಲ. ಹಾ! ಎಂತೆಂತಹ ರತ್ನಗಳು ಕೈಬಿಟ್ಟು ಹೋದವು? ಹೀಗಿರುವಲ್ಲಿ ಮುನ್ಷಿಯವರು ಕಣ್ಣೀರು ಸುರಿಸುವುದು ಆಶ್ಚರ್ಯವೇ? ಆ ವ್ಯಾಪಕ ಪಶ್ಚಾತ್ತಾಪ, ಸಘನ ತಿರಸ್ಕಾರ—ತಿಮಿರಗಳ ನಡುವೆ, ಆಶೆಯ ಸಣ್ಣದೊಂದು ರೇಖೆಯು ಅವರನ್ನು ಇದುವರೆಗೆ ರಕ್ಷಿಸುತ್ತ ಬಂದಿತ್ತು. ಈ ರೇಖೆಯೂ ಅಳಿಸಿತೆಂದರೆ, ಅವರ ಗತಿ ಏನಾಗುವುದೋ ಯಾರು ಬಲ್ಲರು? ಅವರ ಅಪಾರ ವೇದನೆಯನ್ನು ಅರಿಯಬಲ್ಲವರಾರು?

ಮುನ್ನಿಯವರಿಗೆ ಎಷ್ಟೋ ಸಲ ಜಂಪು ಹತ್ತಿದಂತಾಯಿತು. ಆದರೆ ಒಡನೆಯೇ ಶ್ರೀರಾಮನ ಶಬ್ದವಾದಂತಾಗಿ, ಬೆಚ್ಚಿ ಎಚ್ಚರವಾಯಿತು.

ಬೆಳಗಾದೊಡನೆ ಮುನ್ನಿಯವರು ಪುನಃ ಶ್ರೀರಾಮನನ್ನು ಹುಡುಕ ತೊಡಗಿದರು. ಯಾರನ್ನಾದರೂ ಕೇಳಲು ನಾಚಿಕೆಯೆನಿಸುತ್ತಿತ್ತು. ಯಾರೂ ಸಹಾನುಭೂತಿ ತೋರಿ, ಉತ್ತರ ಕೊಡುವುದಿಲ್ಲವೆಂದು ಅವರು ತಿಳಿದಿದ್ದರು. ಎದುರಿಗೆ ಹೇಳದಿದ್ದರೂ, ಮನಸಿನಲ್ಲಾದರೂ 'ಮಾಡಿದ ಕೆಲಸಕ್ಕೆ ತಕ್ಕ ಪ್ರತಿಫಲವನ್ನನುಭವಿಸು!' ಎನ್ನುವರೋ—ಎಂದೆನಿಸುತ್ತಿತ್ತು. ದಿನವೆಲ್ಲಾ ಶಾಲೆಯ ಮೈದಾನ, ಪೇಟೆಯ ರಸ್ತೆ ಮತ್ತು ತೋಟಗಳಲ್ಲಿ ತಿರುಗಾಡುತ್ತಲೇ ಇದ್ದರು. ಎರಡು ದಿನಗಳಿಂದ ಉಪವಾಸವಿದ್ದರೂ ಇಷ್ಟು ಶಕ್ತಿ ಅವರಿಗೆ ಹೇಗುಂಟಾಯಿತೆಂದು ಭಗವಂತನೇ ಬಲ್ಲ!

ರಾತ್ರಿ ಹನ್ನೆರಡು ಘಂಟೆಗೆ ಮುನ್ನಿಯವರು ಮನೆಗೆ ಹಿಂತಿರುಗಿದರು. ಬಾಗಿಲ ಬಳಿ ದೀಪ ಉರಿಯುತ್ತಿತ್ತು. ನಿರ್ಮಲೆಯು ಬಾಗಿಲಲ್ಲೇ ನಿಂತಿದ್ದಳು. ಅವರನ್ನು ನೋಡಿದೊಡನೆಯೇ ಹೇಳಿದಳು—ಯಾವಾಗ ಮನೆಯಿಂದ ಹೋದಿರಿ? ಹೇಳಿ ಸಹ ಹೋಗಲಿಲ್ಲ? ಏನಾದರೂ ಪತ್ತೆಯಾಯಿತೇ?

ಮುನ್ಷಿಯವರು ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತ ನುಡಿದರು—ನನ್ನೆದುರಿಗೆ ನಿಲ್ಲಬೇಡ, ದೂರ ಸರಿ! ಇಲ್ಲದಿದ್ದರೆ ಅನಾಹುತವಾಗುವುದು. ನನ್ನ ಚಿತ್ತ ಸಮಾಧಾನದಲ್ಲಿಲ್ಲ. ಇದೆಲ್ಲಾ ನಿನ್ನದೇ ಕೆಲಸ! ನಿನ್ನಿಂದಲೇ ಇಂದು ನನ್ನ ಗತಿ ಹೀಗಾಯಿತು. ಆರು ವರ್ಷದ ಹಿಂದೆ ನನ್ನ ಗತಿ ಹೀಗಿತ್ತೇ? ನನ್ನ ಮನೆ–ಸಂಸಾರವನ್ನೇ ಹಾಳುಮಾಡಿದೆ! ಅವನೊಬ್ಬನು ಉಳಿದಿದ್ದ; ಅವನನ್ನೂ ನಿರ್ಮೂಲಮಾಡಿದ ಹೊರತು ನಿನ್ನ ಮನಸಿಗೆ ಸಂತೋಷ ಉಂಟಾಗುವುದಿಲ್ಲ. ನನ್ನ ಸರ್ವನಾಶ ಮಾಡಿಕೊಳ್ಳುವುದಕ್ಕಾಗಿ ನಾನು ನಿನ್ನನ್ನೀ ಮನೆಗೆ ಕರೆತರಲಿಲ್ಲ. ಸುಖಜೀವನವನ್ನು ಮತ್ತಷ್ಟು ಸುಖಮಯವನ್ನಾಗಿ ಮಾಡಬಯಸಿದೆನು. ಅದರ ಪ್ರಾಯಶ್ಚಿತ್ತವೇ ಇದು! ಹೂವಿನಂತೆ ಆದರಾತಿಶಯಗಳಿಂದ ಕಾಣಬೇಕಾದ ಹುಡುಗರನ್ನು ನೀನು ನನ್ನೆದುರಿಗೇ ಚಾಕರರಂತೆ ಕಾಣತೊಡಗಿದೆ! ಇದೆಲ್ಲವನ್ನೂ ಕಣ್ಣಾರೆ ನೋಡುತ್ತಿದ್ದೂ ನಾನು ಅಂಧನಂತೆ ಸುಮ್ಮನೆ ಕುಳಿತಿದ್ದೆ! ಹೋಗು; ನನಗಾಗಿ ಸ್ವಲ್ಪ ವಿಷವನು ಕಳುಹಿಸಿಬಿಡು! ಇದೊಂದೇ ಬಾಕಿ ಇತ್ತು, ಅದೂ ಪೂರ್ತಿಯಾಗಲಿ!

ನಿರ್ಮಲೆಯು ಅಳುತ್ತ ಹೇಳಿದಳು—ಹಾ! ನಾನೆಂತಹ ಅಭಾಗಿನಿ! ನೀವೂ ಇಂತಹ ಮಾತನ್ನಾಡತೊಡಗಿದಿರಿ? ದೇವಾ, ನನಗೇಕಾದರೂ ಜನ್ಮವಿತ್ತೆ? ಅದಿರಲಿ, ಶ್ರೀರಾಮನು ಮನೆಗೆ ಬರುವುದೇ ಇಲ್ಲವೆಂದು ನೀವು ಹೇಗೆ ತಿಳಿದಿರಿ?

ಮುನ್ಷಿಯವರು ತಮ್ಮ ಕೊಠಡಿಯ ಕಡೆ ಹೋಗುತ್ತ ಹೇಳಿದರು—ನನ್ನ ಹೊಟ್ಟೆ ಉರಿಸಬೇಡ, ಹೋಗು! ಇನ್ನು ಸಂತೋಷದಿಂದಿರು; ನಿನ್ನ ಮನೋಕಾಮನೆ ಪೂರ್ತಿಯಾಯಿತು!

# ಇಪ್ಪತ್ತನಾಲ್ಕನೆಯ ಪರಿಚ್ಛೇದ

ನಿರ್ಮಲೆಯು ರಾತ್ರಿಯೆಲ್ಲಾ ಅಳುತ್ತಿದ್ದಳು. ಇಂತಹ ಘೋರ ಕಳಂಕವೇ? ಜಯರಾಮನು ಒಡವೆಗಳನ್ನು ತೆಗೆದುಕೊಂಡು ಹೋದುದನ್ನು ನೋಡಿದರೂ, ಬಾಯಿಬಿಟ್ಟು ಹೇಳಲಿಲ್ಲ, ಏಕೆ? ಮಲಮಗನ ಮೇಲೆ ಸುಳ್ಳು ದೋಷಾರೋಪಣೆ ಮಾಡುತ್ತಿರುವಳೆಂದು ಜನರು ಆಡಿಕೊಳ್ಳುವರಲ್ಲಾ—ಎಂಬ ಹೆದರಿಕೆಗಾಗಿ! ಅಂದು ನಡೆದ ವಿಷಯವನ್ನು ಪತಿಯೊಡನೆ ತಿಳಿಸದಿದ್ದಕ್ಕಾಗಿ ಅವಳನ್ನೇ ಅಪರಾಧಿನಿಯೆನ್ನಲಾಯಿತು. ಒಂದು ವೇಳೆ ಅವಳು ಆ ಹೊತ್ತಿನಲ್ಲೇ ಜಯರಾಮನನ್ನು ಅಡ್ಡಗಟ್ಟಿದ್ದು, ಅವಮಾನದಿಂದ ಅವನೆಲ್ಲಾದರೂ ಓಡಿಹೋಗಿದ್ದರೆ, ಆಗಲೂ ಅವಳ ತಲೆಗೇ ಅಪರಾಧ ಕಟ್ಟುತ್ತಿರಲಿಲ್ಲವೇ?

ಶ್ರೀರಾಮನ ಸಂಗಡಲಾದರೂ ಅವಳು ಮಾಡಿದ ದುರ್ವ್ಯವಹಾರವೇನು? ಏನಾದರೂ ಸ್ವಲ್ಪ ಉಳಿತಾಯ ಮಾಡಬೇಕೆಂಬ ಯೋಚನೆಯಿಂದ ಅವನನ್ನು ಸಾಮಾನು ತರಲು ಪೇಟೆಗೆ ಕಳುಹಿಸುತ್ತಿದ್ದಳು. ಪಾಪ, ಉಳಿತಾಯ ಮಾಡಿ ಅವಳೇನು ತನಗೋಸ್ಕರ ಒಡವೆ ಮಾಡಿಸಿಕೊಳ್ಳುತ್ತಿದ್ದಳೇ? ವರಮಾನದ ಗತಿ ನೋಡಿದರೆ ಹೀಗಿರುವಾಗ ಅವಳೇನು ಮಾಡುವಳು? ಪಾಪ, ಒಂದೊಂದು ಕಾಸನ್ನೂ ಶೇಖರಿಸಿ ಸ್ವಲ್ಪ ಉಳಿತಾಯ ಮಾಡಬೇಕೆಂದು ಆಶಿಸುತ್ತಿದ್ದಳು. ಯುವಕರ ಜೀವನವೇ ಸ್ಥಿರವಲ್ಲದಿರುವಾಗ, ವೃದ್ಧರ ಜೀವನವೇನು ಸ್ಥಿರ? ಹೆಣ್ಣು ಮಗಳ ಮದುವೆಗೆ ಅವಳಾರ ಮುಂದೆ ಕೈನೀಡುವಳು?

ಮುಂದಾದರೂ ತಂದೆಯ ನಂತರ ಶ್ರೀರಾಮನೇ ಮನೆ ಯಜಮಾನನಾಗು ವನು. ಆಗ ತಂಗಿಯ ವಿವಾಹ ಮಾಡುವ ಜವಾಬ್ದಾರಿಯು ಅವನಿಗೇ ಕಟ್ಟಿಟ್ಟವು ದಿಲ್ಲವೇ? ಆಗೆಷ್ಟು ತೊಂದರೆಪಡಬೇಕಾಗುವುದು? ಎಂಬೀ ಯೋಚನೆ ಗಳಿಂದ ಅವಳು ನಿರ್ಮಲ್ಲವನ್ನೂ ಕತ್ತರಿಸುತ್ತಿದ್ದಳು. ಆದರೆ ಇದಕ್ಕೂ ಅಪ ಯಶಸ್ಸೇ ಅವಳ ಭಾಗ್ಯದಲ್ಲಿ ಬರೆದಿತ್ತು!

ಸಾಯಂಕಾಲ ಸಮೀಪಿಸುತ್ತ ಬಂದಿತ್ತು. ಈ ದಿನವೂ ಒಲೆಯನ್ನೇ ಹೊತ್ತಿಸಲಿಲ್ಲ. ಊಟ ಮಾಡುವುದೂ ಜೀವನದಲ್ಲೊಂದು ಕೆಲಸವೆಂದು ಯಾರಿಗೂ ಗಮನವಿರಲಿಲ್ಲ. ಮುನ್ಷಿಯವರು ಹೊರಗಡೆ ಕೊಠಡಿಯಲ್ಲಿ ಜ್ಞಾನಶೂನ್ಯರಂತೆ ಮಲಗಿದ್ದರು; ನಿರ್ಮಲೆ ಒಳಗಡೆ ಮಲಗಿದ್ದಳು. ಆಶಾ ಒಮ್ಮೆ ಒಳಕ್ಕೂ ಒಮ್ಮೆ ಹೊರಕ್ಕೂ ಓಡಾಡುತ್ತಿದ್ದಳು. ಅವಳ ಸಂಗಡ ಮಾತ ನಾಡುವವರಾರೂ ಇರಲಿಲ್ಲ. ಬಾರಿಬಾರಿಗೂ ಶ್ರೀರಾಮನ ಕೊಠಡಿಯ ಬಾಗಿಲ ಬಳಿ ಬಂದು ನಿಂತು 'ಅಣ್ಣಾ; ಅಣ್ಣಾ!' ಎಂದು ಮುದ್ದು ಮಾತಿನಿಂದ ಅಣ್ಣ ನನ್ನು ಕೂಗುತ್ತಿದ್ದಳು. ಆದರೆ ಅಣ್ಣನಿಂದ ಯಾವ ಉತ್ತರವೂ ಬರುತ್ತಿರ ಲಿಲ್ಲ.

ಸಂಧ್ಯಾ ಸಮಯ. ಮುನ್ಷಿಯವರು ಒಳಗಡೆ ಬಂದು ನಿರ್ಮಲೆಯನ್ನು ಕೇಳಿದರು—ನಿನ್ನ ಬಳಿ ಕೆಲವು ರೂಪಾಯಿಗಳಿವೆಯೋ?

ನಿರ್ಮಲೆ—ಏತಕ್ಕೋಸ್ಕರ?

ಮುನ್ಷಿ—ನಾನು ಕೇಳಿದಷ್ಟು ಮಾತಿಗೆ ಉತ್ತರ ಕೊಡು!

ನಿರ್ಮಲೆ—ಏಕೆ, ನಿಮಗೆ ಗೊತ್ತಿಲ್ಲವೇ? ನೀವೇ ಅಲ್ಲವೇ ಕೊಡು ವವರು?

ಮುನ್ಷಿ—ನಿನ್ನ ಬಳಿ ರೂಪಾಯಿಗಳಿವೆಯೋ ಅಥವಾ ಇಲ್ಲವೇ? ಇದ್ದರೆ ಕೊಡು; ಇಲ್ಲದಿದ್ದರೆ ಸ್ಪಷ್ಟವಾಗಿ ಹೇಳಿಬಿಡು!

ನಿರ್ಮಲೆಯು ಈಗಲೂ ಸ್ಪಷ್ಟವಾಗಿ ಉತ್ತರ ಕೊಡಲಿಲ್ಲ. 'ಇದ್ದರೆ ಮನೆಯಲ್ಲಿಲ್ಲದೆ ಮತ್ತೆಲ್ಲಿ ಹೋಗುವುದು? ನಾನೇನೂ ಯಾರಿಗೂ ಕಳುಹಿ ಸಿಲ್ಲ!' ಎಂದಳು.

ಮುನ್ಷಿಯವರು ಹೊರಗೆ ಹೊರಟು ಹೋದರು. ನಿರ್ಮಲೆಯ ಬಳಿ ರೂಪಾಯಿಗಳಿವೆಯೆಂದು ಅವರು ತಿಳಿದಿದ್ದರು. ವಾಸ್ತವವಾಗಿ ಇದ್ದೂ ಇತ್ತು.

ನಿರ್ಮಲೆಯು ಇಲ್ಲವೆಂದೂ ಹೇಳಲಿಲ್ಲ, ಕೊಡುವುದಿಲ್ಲವೆಂದೂ ಹೇಳಲಿಲ್ಲ; ಆದರೆ ಕೊಡಲು ಇಷ್ಟವಿಲ್ಲವೆಂಬುದು ಅವಳ ಮಾತಿನಿಂದ ಪ್ರಕಟವಾಯಿತು.

ರಾತ್ರಿ ಒಂಭತ್ತು ಘಂಟೆಗೆ ಮುನ್ಶಿಯವರು ಒಳಗಡೆ ಬಂದು ರುಕ್ಮಿಣಿಯೊಡನೆ ಹೇಳಿದರು—ಅಕ್ಕಾ! ನಾನು ಸ್ವಲ್ಪ ಹೊರಊರಿಗೆ ಹೋಗಬೇಕಾಗಿದೆ. ಅಡಿಗೆಯವಳ ಕೈಲಿ ನನ್ನ ಹಾಸಿಗೆಯನ್ನು ಕಟ್ಟಿರಿಸಿಸು; ಮತ್ತು ಟ್ರಂಕಿನಲ್ಲಿ ಸ್ವಲ್ಪ ಬಟ್ಟೆಗಳನ್ನಿರಿಸುವಂತೆ ಹೇಳು!

ರುಕ್ಮಿಣಿಯು ಅಡಿಗೆ ಕೆಲಸ ಮಾಡುತ್ತಿದ್ದಳು... ಬಹೂ ಕೊಠಡಿಯಲ್ಲಿರುವಳು; ಅವಳಿಗೇಕೆ ಹೇಳಬಾರದು? ಯಾವ ಊರಿಗೆ ಹೋಗಬೇಕಾಗಿದೆ?'

ಮುನ್ಶಿ—ನಾನು ನಿನಗೆ ಹೇಳುತ್ತಿರುವೆನು. ಅವಳಿಗೆ ಹೇಳಬೇಕಾಗಿದ್ದರೆ ನಿನಗೇಕೆ ಹೇಳುತ್ತಿದ್ದೆ? ಈ ದಿನ ನೀನೇಕೆ ಅಡಿಗೆ ಕೆಲಸ ಮಾಡುತ್ತಿರುವೆ?

ರುಕ್ಮಿಣಿ—ಮತ್ತಾರು ಮಾಡುವರು? ಬಹೂ ತಲೆನೋವೆಂದು ಮಲಗಿರುವಳು. ಅದಿರಲಿ, ಈ ರಾತ್ರಿಯಲ್ಲೇಕೆ ಹೊರಟೆ? ಬೆಳಿಗ್ಗೆ ಹೋಗಬಾರದೇ?

ಮುನ್ಶಿ—ಹೀಗೆಯೇ ತಡಮಾಡಿ ಮೂರು ದಿನಗಳು ಕಳೆದವು. ಎಲ್ಲಾದರೂ ಒಂಡೆರಡೂರು ಸುತ್ತಿ ನೋಡುವೆನು. ಶ್ರೀರಾಮನ ಪತ್ತೆ ಸಿಗುವುದೇನೋ? ಯಾರೋ ಒಬ್ಬ ಸಾಧುವಿನ ಸಂಗಡ ಮಾತನಾಡುತ್ತಿದ್ದನೆಂದು ಕೆಲವರು ಹೇಳಿದರು. ಅವನೇ ಒಂದು ವೇಳೆ ಪುಸಲಾಯಿಸಿ ಕರೆದುಕೊಂಡು ಹೋಗಿರಬಹುದು!

ರುಕ್ಮಿಣಿ—ಎಂದು ಹಿಂತಿರುಗುವೆ?

ಮುನ್ಶಿ—ಹೇಳಲಾಗುವುದಿಲ್ಲ. ವಾರವೇ ಆಗುವುದೋ, ತಿಂಗಳೇ ಆಗುವುದೋ?

ರುಕ್ಮಿಣಿ—ಪ್ರಯಾಣ ಮಾಡಲು ಈ ದಿನ ಒಳ್ಳೆಯದೇ--ಎಂದು ಪುರೋಹಿತರನ್ನು ಕೇಳಿ ತಿಳಿದುಕೊಂಡೆಯಾ?

ಮುನ್ಶಿಯವರು ಊಟ ಮಾಡಲು ಕುಳಿತರು ಈ ಸಮಯದಲ್ಲಿ ನಿರ್ಮಲೆಗೆ ಅವರಲ್ಲಿ ಬಹಳ ಕನಿಕರವುಂಟಾಯಿತು. ಅವಳ ಕ್ರೋಧವೆಲ್ಲವೂ ಶಾಂತವಾಯಿತು. ತಾನೇನೂ ಮಾತನಾಡಲಿಲ್ಲ. ಆಶಾಳನ್ನು ಎಬ್ಬಿಸಿ, ಮುದ್ದಾಡುತ್ತ ಹೇಳಿದಳು—ನೋಡು, ನಿಮ್ಮ ಬಾಬೂಜೀ ಎಲ್ಲಿ ಹೊಗುತ್ತಿರುವರು? ಕೇಳು?

ಆಶಾ ಬಾಗಿಲಿನಿಂದ ಇಣಿಕಿ ನೋಡುತ್ತ ಮುದ್ದು ಮಾತಿನಿಂದ ಹೇಳಿದಳು—ಬಾಬೂಜೀ ಎಲ್ಲಿ ಹೋಗುವಿರಿ?

ಮುನ್ನಿ — ಬಹಳ ದೂರ ಹೋಗುವೆನು ಮಗು! ನಿನ್ನ ಅಣ್ಣನನ್ನು ಹುಡುಕಲು ಹೋಗುವೆನು.

ಆಶಾ ಅಲ್ಲೇ ನಿಂತು ಹೇಳಿದಳು—ನಾನೂ ಬರುವೆನು.

ಮುನ್ನಿ—ಬಹಳ ದೂರ ಹೋಗುವೆನು ಮಗು! ನಿನಗೋಸ್ಕರ ಆಟದ ಸಾಮಾನುಗಳನ್ನು ತರುವೆನು. ನನ್ನ ಹತ್ತಿರ ಏಕೆ ಬರುವುದಿಲ್ಲ?

ಆಶಾ ಮುಗುಳುನಗೆ ನಕ್ಕು, ಬಚ್ಚಿಟ್ಟುಕೊಂಡಳು. ಪುನಃ ಒಂದು ಕ್ಷಣ ದಲ್ಲೇ ಬಾಗಿಲಿನಿಂದ ಇಣಿಕಿ ನೋಡಿ ನುಡಿದಳು—ನಾನೂ ಬರುವೆನು.

ಮುನ್ನಿಯವರೂ ಅವಳಂತೆಯೇ ಮುದ್ದು ಮಾತಿನಿಂದ ನುಡಿದರು—ನಿನ್ನನ್ನು ಕರೆದುಕೊಂಡು ಹೋಗುವುದಿಲ್ಲ.

ಆಶಾ – ನನ್ನನ್ನೇಕೆ ಕರೆದುಕೊಂಡು ಹೋಗುವುದಿಲ್ಲ?

ಮುನ್ನಿ—ನೀನು ನನ್ನ ಬಳಿಗೇಕೆ ಬರುವುದಿಲ್ಲ?

ಆಶಾ ಓಡಿಬಂದು ತಂದೆಯ ತೊಡೆಯಮೇಲೆ ಕುಳಿತುಕೊಂಡಳು. ಮುನ್ನಿಯವರು ತುಸು ಹೊತ್ತಿನವರೆಗೆ ಅವಳ ಬಾಲಕ್ರೀಡೆಯಲ್ಲಿ ತಮ್ಮ ಅಂತರ್ವೇದನೆಯನ್ನು ಮರೆತರು.

ಊಟ ಮಾಡಿ ಮುನ್ನಿಯವರು ಹೊರಕ್ಕೆ ಹೋದರು. ನಿರ್ಮಲೆಯು ನಿಂತು ಎವೆಯಿಕ್ಕದೆ ನೋಡುತ್ತಿದ್ದಳು. ವ್ಯರ್ಥವಾಗಿ ಹೋಗುತ್ತಿರುವಿರಿ–ಎನ್ನ ಬಯಸಿದಳು; ಆದರೆ ಹೇಳಲಾಗಲಿಲ್ಲ. ಕೆಲವು ರೂಪಾಯಿಗಳನ್ನು ತೆಗೆದು ಕೊಡಬಯಸಿದಳು; ಆದರೆ ಕೊಡಲಾಗಲಿಲ್ಲ!

ಕಡೆಗೆ ಅವಳ ಮನಸು ನಿಲ್ಲಲಿಲ್ಲ. ರುಕ್ಮಿಣಿಯೊಡನೆ ಹೇಳಿದಳು—ಅಕ್ಕ, ಈಗೆಲ್ಲಿಗೆ ಹೋಗುವರು? ಅವರಿಗೆ ಸ್ವಲ್ಪ ತಿಳಿಯಹೇಳಿ. ನಾನು ಹೇಳುವಂತೆಯೂ ಇಲ್ಲ; ಹೇಳದಿರಲು ಮನಸು ನಿಲ್ಲುವುದಿಲ್ಲ. ಗೊತ್ತುಗುರಿ ಇಲ್ಲದೆ ಎಲ್ಲೆಲ್ಲಿ ಹುಡುಕುವರು? ವೃಥಾ ಆಯಾಸವಾಗುವುದು.

ರುಕ್ಮಿಣಿಯು ಕರುಣಾಸೂಚಕ ನೇತ್ರಗಳಿಂದ ಒಮ್ಮೆ ನೋಡಿ, ತನ್ನ ಕೊಠಡಿಗೆ ಹೊರಟುಹೋದಳು.

ನಿರ್ಮಲೆಯು ಆಶಾಳನ್ನು ಎತ್ತಿಕೊಂಡು, ಮುನ್ನಿಯವರು ಮಗುವನ್ನು ನೋಡುವುದಕ್ಕಾಗಲಿ ಅಥವಾ ತನ್ನೊಡನೆ ಮಾತನಾಡುವುದಕ್ಕಾಗಲಿ ಒಮ್ಮೆ ಒಳಗೆ ಬರುವರೆಂದು ಯೋಚಿಸುತ್ತಿದ್ದಳು. ಆದರೆ ಅವಳ ಆಸೆ ವಿಫಲ

ಹಾಯಿತು. ಮುನ್ಷಿಯವರು ಹಾಸಿಗೆಯನ್ನೆತ್ತಿಕೊಂಡು, ಗಾಡಿಯಲ್ಲಿ ಹೋಗಿ ಕುಳಿತರು.

ಆಗಲೇ ನಿರ್ಮಲೆಯ ಹೃದಯದಲ್ಲೊಂದು ಬಗೆಯ ತಳಮಳವುಂಟಾಯಿತು. ಇನ್ನು ಪುನಃ ಇವರ ಭೇಟಿಯಾಗುವುದಿಲ್ಲವೋ—ಎಂಬಂತೆನಿಸಿತು. ಮುನ್ಷಿಯವರನ್ನು ತಡೆಯಬೇಕೆಂದು ದ್ವಾರದವರೆಗೆ ಓಡಿಬಂದಳು; ಆದರೆ ಗಾಡಿ ಹೊರಟುಬಿಟ್ಟಿತು!

## ಇಪ್ಪತ್ತೈದನೆಯ ಪರಿಚ್ಛೇದ

ದಿನಗಳು ಕಳೆಯತೊಡಗಿದವು. ಒಂದು ತಿಂಗಳು ಮುಗಿಯಿತು; ಆದರೆ ಮುನ್ಷಿಯವರು ಹಿಂತಿರುಗಲಿಲ್ಲ. ಪತ್ರವನ್ನೂ ಬರೆಯಲಿಲ್ಲ. ಒಂದು ವೇಳೆ ಅವರು ಹಿಂತಿರುಗಿ ಬರದಿದ್ದರೆ ಏನು ಗತಿ?—ಎಂಬ ಚಿಂತೆಯು ನಿರ್ಮಲೆಯನ್ನು ನಿತ್ಯವೂ ಬಾಧಿಸತೊಡಗಿತು. ಅವರ ಗತಿ ಏನಾಗಿರಬಹುದು? ಎಲ್ಲೆಲ್ಲಿ ಅಲೆಯುತ್ತಿರಬಹುದು? ಅವರ ದೇಹಸ್ಥಿತಿ ಎಂತಿರುವುದೋ?—ಎಂಬೀ ಚಿಂತೆಗಳು ಅವಳಿಗಿರಲಿಲ್ಲ. ಅವಳಿಗಿದ್ದುದು ಕೇವಲ ತನ್ನ ಚಿಂತೆ, ಮತ್ತು ಮಗಳ ಚಿಂತೆ! ಸಂಸಾರವನ್ನು ನಿರ್ವಹಿಸುವುದೆಂತು? ಭಗವಂತನು ಯಾವ ರೀತಿ ಪಾರುಗಾಣಿಸುವನು? ಮಗಳ ಗತಿ ಏನಾಗುವುದು?—ಎಂದು ಮುಂತಾಗಿ ಯೋಚಿಸುತ್ತಿದ್ದಳು. ಅವಳು ಉಳಿತಾಯ ಮಾಡಿಟ್ಟಿದ್ದ ರೂಪಾಯಿಗಳಲ್ಲಿ ನಿತ್ಯವೂ ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಿತ್ತು. ಅದರಲ್ಲಿ ಒಂದು ಕಾಸು ತೆಗೆಯಬೇಕೆಂದರೂ ನಿರ್ಮಲೆಗೆ ತನ್ನ ಶರೀರದ ರಕ್ತವನ್ನು ತೆಗೆದಂತಾಗುತ್ತಿತ್ತು. ಸಂಕಟದಿಂದ ಮುನ್ಷಿಯವರನ್ನು ಬೈಯುತ್ತಿದ್ದಳು. ಆಶಾ ಏನಾದರೂ ಪದಾರ್ಥ ಬೇಕೆಂದು ಅತ್ತರೆ, ಸಿಟ್ಟಿನಿಂದ ಅವಳನ್ನು ಬೈದು ಗದರಿಸುತ್ತಿದ್ದಳು. ಅಷ್ಟೇ ಏಕೆ? ರುಕ್ಮಿಣಿಯು ಮನೆಯಲ್ಲಿರುವುದು ಸಹ ಅವಳಿಗೆ ಭಾರವಾಗಿ ತೋರುತ್ತಿತ್ತು. ಹೃದಯವು ಸುಟ್ಟು ಭಸ್ಮವಾಗುತ್ತಿರುವಾಗ ವಾಣಿಯೂ ಅಗ್ನಿಮಯವಾಗುವುದು. ಅಂತೆಯೇ ನಿರ್ಮಲೆಯಂತಹ ಮಧುರ ಭಾಷಿಣಿಯು ಸಹ ಈಗ ಕರ್ಕಶಭಾಷಿಣಿಯಾಗಿದ್ದಳು. ದಿನವೆಲ್ಲಾ ಅವಳ ಬಾಯಿಂದ ಕಠೋರ ಶಬ್ದಗಳೇ ಹೊರಬೀಳುತ್ತಿದ್ದವು. ಅವಳ ಕೋಮಲತೆ

ಅದೆಲ್ಲಿ ಮಾಯವಾಯಿತೋ ? ಭಾವಗಳಲ್ಲಿ ಮಾಧುರ್ಯದ ಹೆಸರು ಸಹ ಇಲ್ಲದಾಯಿತು. ಅಡಿಗೆಯವಳು ಈ ಮನೆಯಲ್ಲಿ ಅನೇಕ ವರ್ಷಗಳಿಂದಲೂ ಇದ್ದವಳು. ಸ್ವಭಾವತಃ ಸಹನಶೀಲೆ. ಅವಳಿಂದಲೂ ಈ ಕಠೋರತೆ ಸಹಿಸಲಾಗಲಿಲ್ಲ. ಕಡೆಗೊಂದು ದಿನ ಅವಳೂ ಮನೆಯ ಹಾದಿ ಹಿಡಿದಳು. ಅಷ್ಟೇ ಅಲ್ಲ. ನಿರ್ಮಲೆಯು ಪ್ರಾಣಕ್ಕಿಂತ ಪ್ರಿಯವೆಂದು ಭಾವಿಸುತ್ತಿದ್ದ ತನ್ನ ಮಗಳನ್ನು ಸಹ ಕಠೋರ ಶಬ್ದಗಳಿಂದ ಗದರಿಸುತ್ತಿದ್ದಳು; ಒಮ್ಮೊಮ್ಮೆ ಹೊಡೆದೂ ಬಿಡುತ್ತಿದ್ದಳು. ಆಗ ರುಕ್ಮಿಣಿಯು ಅವಳನ್ನು ಎತ್ತಿಕೊಂಡು, ಆದರದಿಂದ ಪ್ರೀತಿಸಿ ಸಮಾಧಾನಪಡಿಸುತ್ತಿದ್ದಳು. ಆ ಅನಾಥ ಬಾಲಿಕೆಗೆ ಈಗಿದ್ದ ಆಶ್ರಯವೆಂದರೆ ಇದೊಂದೇ !

ನಿರ್ಮಲೆಗೆ ಈಗ ಇಷ್ಟವಾದುದೆಂದರೆ ಸುಧೆಯ ಸಂಗಡ ಮಾತನಾಡುವುದೊಂದೇ ! ಅವಳ ಮನೆಗೆ ಹೋಗುವ ಸಮಯವನ್ನೇ ನಿರೀಕ್ಷಿಸುತ್ತಿದ್ದಳು. ಈಚೆಗೆ ಅವಳು ಆಶಾಳನ್ನೂ ಸಂಗಡ ಕರೆದುಕೊಂಡು ಹೋಗಲಿಚ್ಛಿಸುತ್ತಿರಲಿಲ್ಲ. ಹೊಟ್ಟೆತುಂಬ ತಿನ್ನಲು ಬೇಕಾದ ಪದಾರ್ಥಗಳು ಮನೆಯಲ್ಲಿದ್ದ ಕಾಲದಲ್ಲಿ ಆಶಾ ಅವರ ಮನೆಗೆ ಹೋದರೆ ಆನಂದದಿಂದ ಆಟವಾಡಿಕೊಂಡಿರುತ್ತಿದ್ದಳು. ಆದರೆ ಈಚೆಗೆ ಅವರ ಮನೆಗೆ ಹೋದಾಗಲೆಲ್ಲಾ ಹಸಿವೆ ಹಸಿವೆಯೆಂದು ಅಳುತ್ತಿದ್ದಳು. ನಿರ್ಮಲೆ ಅವಳನ್ನು ಎಷ್ಟೇ ಹೆದರಿಸಿದರೂ ಸುಮ್ಮನಾಗುತ್ತಿರಲಿಲ್ಲ ಇದಕ್ಕಾಗಿಯೇ ನಿರ್ಮಲೆಯು ಅವಳನ್ನು ಸಂಗಡ ಕರೆದುಕೊಂಡು ಹೋಗುತ್ತಿರಲಿಲ್ಲ. ಸುಧೆಯ ಬಳಿ ಇದ್ದಾಗ ಮಾತ್ರ ನಿರ್ಮಲೆಗೆ ತಾನೂ ಒಬ್ಬ ಮನುಷ್ಯಳೆಂಬ ಜ್ಞಾನವುಂಟಾಗುತ್ತಿತ್ತು. ಅಲ್ಲಿದ್ದಷ್ಟು ಹೊತ್ತಿನವರೆಗೆ ತನ್ನ ಚಿಂತೆಗಳನ್ನೆಲ್ಲಾ ಮರೆಯುತ್ತಿದ್ದಳು. ಮದ್ಯಪಾನ ಮಾಡುವ ಮನುಜನಿಗೆ ಮದ್ಯದ ಮತ್ತಿನಲ್ಲಿ ತನ್ನ ಚಿಂತೆಗಳೆಲ್ಲಾ ಮರೆತು ಹೋಗುವಂತೆ, ನಿರ್ಮಲೆಯು ಸುಧೆಯ ಮನೆಗೆ ಬಂದಾಗ ತನ್ನ ಸಕಲ ಚಿಂತೆಗಳನ್ನೂ ಮರೆಯುತ್ತಿದ್ದಳು. ನಿರ್ಮಲೆಯನ್ನು ಅವಳ ಮನೆಯಲ್ಲಿದ್ದಾಗ ನೋಡಿದವರಾರಾದರೂ ಸುಧೆಯ ಮನೆಯಲ್ಲಿದ್ದಾಗ ನೋಡಿದರೆ ನಿಜವಾಗಿಯೂ ಚಕಿತರಾಗುತ್ತಿದ್ದರು. ಆದೇ ಕರ್ಕಶ, ಕಟುಭಾಷಿಣಿ ಸ್ತ್ರೀಯು ಇಲ್ಲಿ ಹಾಸ್ಯ, ವಿನೋದ ಮತ್ತು ಮಾಧುರ್ಯದ ಮೂರ್ತಿಯಂತಿರುತ್ತಿದ್ದಳು. ಯೌವನದ ಸ್ವಾಭಾವಿಕ ವೃತ್ತಿಗಳು ಇಲ್ಲಿ ಬಂದಾಗ ಮಾತ್ರ ಹೊರಹೊಮ್ಮು

ತ್ತಿದ್ದವು. ಸುಧೆಯ್ಯ ಮನೆಗೆ ಒರುವಾಗೆಲ್ಲಾ ನಿರ್ಮಲೆಯು ಅಂದವಾಗಿ ತಲೆ ಬಾಚಿಕೊಂಡು, ಒಳ್ಳೆಯ ಉಡುಪನ್ನು ಧರಿಸುತ್ತಿದ್ದಳು; ಮತ್ತು ತನ್ನ ವಿಪತ್ತಿ ಕಥೆಯನ್ನು ಸಾಧ್ಯವಾದಷ್ಟು ಮರೆಸಿಡುತ್ತಿದ್ದಳು. ಇಲ್ಲಿಗವಳು ಅಳುವು ದಕ್ಕಾಗಿ ಬರುತ್ತಿರಲಿಲ್ಲ, ನಗುವುದಕ್ಕಾಗಿ ಬರುತ್ತಿದ್ದಳು!

ಆದರೆ ಇದ್ದಕ್ಕಿದ್ದಂತೆ ಈ ಸುಖವೂ ಅವಳ ಪಾಲಿಗೆ ಪ್ರಾಪ್ತಿಯಿಲ್ಲ ದಾಯಿತು. ನಿರ್ಮಲೆಯು ಸಾಮಾನ್ಯವಾಗಿ ಮಧ್ಯಾಹ್ನದ ಹೊತ್ತಿನಲ್ಲಿ ಸುಧೆಯ ಮನೆಗೆ ಹೋಗುತ್ತಿದ್ದಳು. ಒಂದು ದಿನ ಮನಸಿಗೆ ಬಹಳ ಬೇಜಾರಾದ್ದರಿಂದ ಬೆಳಗಿನ ಹೊತ್ತಿಗೇ ಅಲ್ಲಿಗೆ ಹೋದಳು. ಸುಧೆಯು ನದೀಸ್ನಾನಕ್ಕಾಗಿ ಹೋಗಿ ದ್ದಳು. ಡಾಕ್ಟರ್‌ಸಾಹೇಬರು ಆಸ್ಪತ್ರೆಗೆ ಹೋಗುವುದಕ್ಕಾಗಿ ಬಟ್ಟೆ ಹಾಕಿ ಕೊಳ್ಳುತಿದ್ದರು. ಮನೆಗೆಲಸದವಳು ತನ್ನ ಕಾರ್ಯದಲ್ಲಿ ತೊಡಗಿದ್ದಳು. ನಿರ್ಮಲೆಯು ನೆಟ್ಟಗೆ ತನ್ನ ಸ್ನೇಹಿತೆಯ ಕೊಠಡಿಗೆ ಹೋಗಿ, ನಿಶ್ಚಿಂತಳಾಗಿ ಕುಳಿತುಬಿಟ್ಟಳು. ಸುಧೆ ಏನೋ ಕೆಲಸ ಮಾಡುತ್ತಿರಬಹುದು, ಇನ್ನೇನು ಇಷ್ಟ ರಲ್ಲೇ ಬರುವಳು—ಎಂದು ಯೋಚಿಸುತ್ತಿದ್ದಳು. ಐದಾರು ನಿಮಿಷಗಳು ಕಳೆ ದವು. ಆಗ ಅವಳು ಅಲಮಾರಿನಲ್ಲಿದ್ದ ಒಂದು ಫೋಟೋ ಪುಸ್ತಕವನ್ನು ತೆಗೆದುಕೊಂಡಳು. ತಲೆಯನ್ನು ಬಿಚ್ಚಿ ಮಂಚದ ಮೇಲೆ ಮಲಗಿ ಅದರಲ್ಲಿದ್ದ ಚಿತ್ರಪಟಗಳನ್ನು ನೋಡತೊಡಗಿದಳು. ಅದೇ ಹೊತ್ತಿಗೆ ಸರಿಯಾಗಿ ಡಾಕ್ಟರ್ ಸಾಹೇಬರು ತಮ್ಮ ಕನ್ನಡಕವನ್ನು ಹುಡುಕುತ್ತ ಅಲ್ಲಿಗೆ ಬಂದರು. ನಿರ್ಮ ಲೆಯು ದ್ವಾರದ ಕಡೆಗೆ ತಲೆ ಮಾಡಿ ಮಲಗಿದ್ದಳು. ಡಾಕ್ಟರ್‌ಸಾಹೇಬರನ್ನು ಕಂಡೊಡನೆಯೇ ಬೆಚ್ಚಿ, ಎದ್ದು ಕುಳಿತಳು. ಮತ್ತು ತಲೆಯ ಮೇಲೆ ಸೆರಗನ್ನು ಹೊದೆದು, ಮಂಚದಿಂದ ಕೆಳಕ್ಕಿಳಿದು ನಿಂತಳು. ಅಲ್ಲಿಂದ ಹಿಂತಿರುಗುವಾಗ ಡಾಕ್ಟರ್‌ಸಾಹೇಬರು ಬಾಗಿಲ ಬಳಿ ನಿಂತು ಹೇಳಿದರು—ನಿರ್ಮಲಾ! ನೀನು ಇಲ್ಲಿರುವೆಯೆಂದು ನನಗೆ ಗೊತ್ತಾಗಲಿಲ್ಲ. ಕ್ಷಮಿಸು. ಕನ್ನಡಕವನ್ನು ತೆಗೆದು ಎಲ್ಲಿಟ್ಟೆನೋ? ನನ್ನ ಕೊಠಡಿಯಲ್ಲಿ ಸಿಗಲಿಲ್ಲ. ಆದ್ದರಿಂದ ಇಲ್ಲೇನಾದರೂ ಇರಬಹುದೆಂದು ನೋಡಲು ಬಂದೆ.

ನಿರ್ಮಲೆಯು ಮಂಚದ ಮೇಲಿದ್ದ ಅಲಮಾರಿನ ಕಡೆ ನೋಡಿದಳು. ಅಲ್ಲಿ ಕನ್ನಡಕದ ಪೆಟ್ಟಿಗೆ ಇದ್ದದ್ದು ಕಂಡುಬಂತು. ಅವಳು ಮುಂದೆ ಹೋಗಿ ಅದನ್ನು ಕೈಗೆ ತೆಗೆದುಕೊಂಡಳು; ಮತ್ತು ತಲೆ ತಗ್ಗಿಸಿ, ಶರೀರವನ್ನು ಕುಗ್ಗಿಸಿ

ಸಂಕೋಚದಿಂದ ಡಾಕ್ಟರ್‌ಸಾಹೇಬರ ಕಡೆಗೆ ಕೈನೀಡಿದಳು. ಡಾಕ್ಟರ್‌ಸಾಹೇಬರು ನಿರ್ಮಲೆಯನ್ನು ಹಿಂದೆಯೂ ಒಂದೆರಡು ಬಾರಿ ನೋಡಿದ್ದರು; ಆದರೆ ಈ ದಿನ ಅವರ ಮನಸಿನಲ್ಲುಂಟಾದ ಭಾವನೆ ಹಿಂದೆಂದೂ ಉಂಟಾಗಿರಲಿಲ್ಲ. ಅನೇಕ ವರ್ಷಗಳಿಂದ ಅವರು ಹೃದಯದಲ್ಲಡಗಿಸಿಟ್ಟಿದ್ದ ಜ್ವಾಲೆಯು ಇಂದು ಗಾಳಿಯ ಹೊಡೆತದಿಂದ ಜ್ವಲಿಸತೊಡಗಿತು. ಕನ್ನಡಕವನ್ನು ತೆಗೆದುಕೊಳ್ಳಲು ಕೈನೀಡಲಾಗಿ ಕೈ ನಡುಗುತ್ತಿತ್ತು. ಕನ್ನಡಕವನ್ನು ತೆಗೆದುಕೊಂಡೂ ಅವರು ಹೊರಗೆ ಹೋಗಲಿಲ್ಲ; ಅಲ್ಲೇ ನಿಂತಿದ್ದರು. ನಿರ್ಮಲೆಯು ಈ ಏಕಾಂತದಿಂದ ಭಯಭೀತಳಾಗಿ ಕೇಳಿದಳು—ಸುಧಾ ಎಲ್ಲಾದರೂ ಹೋಗಿರುವಳೇ ?

ಡಾಕ್ಟರ್‌ಸಾಹೇಬರು ತಲೆ ತಗ್ಗಿಸಿ ಉತ್ತರವಿತ್ತರು—ಹೌದು, ನದೀಸ್ನಾನಕ್ಕಾಗಿ ಹೋಗಿರುವಳು.

ಈಗಲೂ ಡಾಕ್ಟರ್‌ಸಾಹೇಬರು ಹೊರಗೆ ಹೋಗಲಿಲ್ಲ; ಅಲ್ಲೇ ನಿಂತಿದ್ದರು. 'ಎಷ್ಟು ಹೊತ್ತಿಗೆ ಬರುವಳು ?' ಎಂದು ಕೇಳಿದಳು.

ಡಾಕ್ಟರ್‌ಸಾಹೇಬರು ತಲೆ ತಗ್ಗಿಸಿಕೊಂಡೇ ಹೇಳಿದರು – ಇನ್ನೇನು, ಬರುವ ಸಮಯವಾಯಿತು.

ಅಷ್ಟಾದರೂ ಅವರು ಹೊರಗೆ ಹೋಗಲಿಲ್ಲ. ಅವರ ಮನಸು ಘೋರ ದ್ವಂದ್ವದಲ್ಲಿ ಸಿಲುಕಿತ್ತು. ಔಚಿತ್ಯದ ಬಂಧನವಲ್ಲ, ಭೀರುತೆಯ ಸಣ್ಣ ರೇಖೆಯೊಂದು ಅವರ ನಾಲಿಗೆಯನ್ನು ತಡೆದು ನಿಲಿಸಿತ್ತು.

ನಿರ್ಮಲೆ—ಎಲ್ಲೋ ಸುತ್ತಾಡಿಕೊಂಡು ನಿಧಾನವಾಗಿ ಬರಬಹುದು. ನಾನಿನ್ನು ಮನೆಗೆ ಹೋಗುವೆನು.

ಈ ಬಾರಿ ಭೀರುತೆಯೂ ಹಾರಿಹೋಯಿತು. ಡಾಕ್ಟರ್‌ಸಾಹೇಬರು ಧೈರ್ಯದಿಂದ ತಲೆಯೆತ್ತಿ ನಿರ್ಮಲೆಯನ್ನು ನೋಡಿ, ಅನುರಾಗಪೂರ್ಣ ದನಿಯಿಂದ ನುಡಿದರು—ಇಲ್ಲ ನಿರ್ಮಲಾ! ಇನ್ನೇನು ಬರುತ್ತಿರಬಹುದು. ಈಗಲೇ ಹೋಗಬೇಡ! ನಿತ್ಯವೂ ಸುಧೆಗೋಸ್ಕರ ಕುಳಿತುಕೊಳ್ಳುತ್ತಿದ್ದೆ; ಇಂದು ನನಗೋಸ್ಕರ ಕುಳಿತುಕೋ! ನೀನೇ ಹೇಳು, ಎಷ್ಟು ದಿನಗಳ ವರೆಗೆ ಈ ಅಗ್ನಿಯಲ್ಲಿ ದಹಿಸಲಿ? ಸತ್ಯವಾಗಿ ಹೇಳುವೆನು, ನಿರ್ಮಲಾ.... ...!

ನಿರ್ಮಲೆಗೆ ಮುಂದಿನ ಮಾತೇನೂ ಕೇಳಿಸಲಿಲ್ಲ. ಅವಳ ತಲೆ ಗಿರ್ರನೆ ತಿರುಗತೊಡಗಿತು. ಭೂಮಿಯೇ ಸುತ್ತುತ್ತಿರುವಂತೆ ಅವಳಿಗೆ ಭಾಸವಾಯಿತು.

ಅವಳ ಶರೀರದ ಮೇಲೆ ಸಹಸ್ರಾರು ಸಿಡಿಲು ಬಡಿದಂತಾಯಿತು! ಬ್ಬಾಗಿಲ ಮೇಲೆ ಹಾಕಿದ್ದ ಮೇಲುಹೊದಿಕೆಯನ್ನು ತೆಗೆದುಕೊಂಡು, ಒಂದು ಮಾತನ್ನೂ ಆಡದೆ ಕೊಠಡಿಯಿಂದ ಹೊರಕ್ಕೆ ಹೊರಟುಹೋದಳು. ಡಾಕ್ಟರ್ ಸಾಹೇಬರು ಪೆಚ್ಚುಮೋರೆ ಹಾಕಿಕೊಂಡು ನೋಡುತ್ತ ನಿಂತಿದ್ದರು. ಅವಳನ್ನು ತಡೆಯುವಷ್ಟು ಅಥವಾ ಅವಳೊಡನೆ ಮತ್ತೇನಾದರೂ ಮಾತನಾಡುವಷ್ಟು ಸಾಹಸ ಅವರಿಗಾಗಲಿಲ್ಲ.

ನಿರ್ಮಲೆಯು ಬಾಗಿಲ ಬಳಿ ಬರುವ ಹೊತ್ತಿಗೆ ಸರಿಯಾಗಿ ಸುಧೆ ಗಾಡಿಯಿಂದ ಕೆಳಗಿಳಿಯುತ್ತಿದ್ದಳು. ನಿರ್ಮಲೆಯನ್ನು ನೋಡಿದೊಡನೆಯೇ ಜಾಗ್ರತೆಯಾಗಿ ಕೆಳಗಿಳಿದು, ಅವಳ ಕಡೆ ಓಡಿದಳು; ಮತ್ತು ಏನೋ ಕೇಳಬಯಸಿದಳು. ಆದರೆ ನಿರ್ಮಲೆಯು ಅದಕ್ಕೆಡೆಗೊಡದೇ ಬಾಣದಂತೆ ಬಿರುಸಿನಿಂದ ಹೊರಟುಹೋದಳು. ಸುಧೆಯು ಒಂದು ಕ್ಷಣಕಾಲ ವಿಸ್ಮಿತಳಾಗಿ ನಿಂತಲ್ಲಿ ನಿಂತಳು. ವಿಷಯವೇನೆಂಬುದೇ ಅವಳಿಗೆ ತೋರದಾಯಿತು. ಅತ್ಯಂತ ವ್ಯಗ್ರಳಾದಳು. ಜಾಗ್ರತೆಯಿಂದ ಒಳಗೆ ಹೋಗಿ, ವಿಷಯವೇನೆಂದು ಕೆಲಸದವಳನ್ನು ಕೇಳಿದಳು. ಮನೆಯ ಆಳುಗಳಾಗಲಿ ಅಥವಾ ಇತರರಾಗಲಿ ಅವಳಿಗೆ ಅವಮಾನವಾಗುವಂತೆ ಏನೋ ಹೇಳಿರಬೇಕು! ಇರಲಿ, ಅಪರಾಧಿ ಯಾರೆಂದು ಪತ್ತೆ ಮಾಡುವೆನು; ಈ ಕ್ಷಣವೇ ಮನೆಯಿಂದ ಹೊರದೂಡುವೆನು-ಎಂದುಕೊಂಡು ಆತುರದಿಂದ ಕೊಠಡಿಯನ್ನು ಪ್ರವೇಶಿಸಿದಳು. ನೋಡಲಾಗಿ ಡಾಕ್ಟರ್‌ಸಾಹೇಬರು ಪೆಚ್ಚುಮೋರೆ ಹಾಕಿಕೊಂಡು ಮಂಚದ ಮೇಲೆ ಕುಳಿತಿದ್ದರು. 'ನಿರ್ಮಲಾ ಇಲ್ಲಿಗೆ ಬಂದಿದ್ದಳೇ?' ಎಂದು ಕೇಳಿದಳು.

ಡಾಕ್ಟರ್ ಸಾಹೇಬರು ತಲೆಯಾಡಿಸುತ್ತ ನುಡಿದರು - ಹೌದು ಬಂದಿದ್ದಳು.

ಸುಧಾ—ಮನೆಗೆಲಸದವರಾರೂ ಅವಳನ್ನೇನೂ ಅನ್ನಲಿಲ್ಲವಷ್ಟೆ? ನನ್ನೊಡನೆ ಮಾತನ್ನು ಸಹ ಆಡಲಿಲ್ಲ. ಸಿಟ್ಟಿನಿಂದ ಹೊರಟು ಹೋದಳು.

ಡಾಕ್ಟರ್ ಸಾಹೇಬರ ಮುಖ-ಕಾಂತಿ ಮಲಿನವಾಯಿತು. ಅವರೆಂದರು—ಇಲ್ಲಿನವರಾರೂ ಅವಳನ್ನೇನೂ ಅನ್ನಲಿಲ್ಲ!

ಸುಧಾ—ಯಾರೋ ಏನೋ ಅಂದಿರಬೇಕು. ಅವರಾರೆಂದು ನನಗೆ ಪತ್ತೆಯಾದರೆ, ಈ ಕ್ಷಣವೇ ಮನೆಯಿಂದ ಹೊರದೂಡುವೆನು.

ಡಾಕ್ಟರ್‌ಸಾಹೇಬರು ತಡವರಿಸುತ್ತ ನುಡಿದರು—ಯಾರೂ ಏನೂ ಅಂದಂತೆ ತೋರಲಿಲ್ಲ. ಅವಳು ನಿನ್ನನ್ನು ನೋಡಿಯೇ ಇರಲಿಕ್ಕಿಲ್ಲ!

ಸುಧಾ—ವಾ! ನೋಡಿಯೇ ಇರಲಿಕ್ಕಿಲ್ಲವಂತೆ! ನಾನು ಅವಳ ಮುಂದೆಯೇ ಗಾಡಿಯಿಂದಿಳಿದಿರುವೆನು. ಅವಳು ನನ್ನ ಕಡೆ ನೋಡಿದಳು, ಆದರೆ ಏನೂ ಮಾತನಾಡಲಿಲ್ಲ. ಈ ಕೋಣೆಗೆ ಬಂದಿದ್ದಳೇ?

ಡಾಕ್ಟರ್‌ಸಾಹೇಬರ ಕಂಠ ಒಣಗುತ್ತ ಬಂತು. ಅವರೆಂದರು -ಬಂದಿರಲಿಲ್ಲವೇಕೆ?

ಸುಧಾ—ನೀವು ಇಲ್ಲಿ ಕುಳಿತಿದ್ದುದನ್ನು ಕಂಡು ಹೊರಟು ಹೋಗಿರಬಹುದು. ಇವನ್ನು ನೋಡಿದ ಮನೆಗೆಲಸದವರು ಅವಳನ್ನೇನೋ ಅಂದಿರಬೇಕು. ನೀಚ ಜಾತಿಯವರು! ಒಬ್ಬರ ಸಂಗಡ ಮಾತನಾಡಿದ ಮಾತ್ರಕ್ಕೇನಾಯಿತು? ಓ ಸುಂದರೀ! ಸ್ವಲ್ಪ ಇಲ್ಲಿ ಬಾ!

ಡಾಕ್ಟರ್—ಅವಳನ್ನೇಕೆ ಕರೆಯುವೆ? ನಿರ್ಮಲೆಯು ಇಲ್ಲಿಂದ ನೆಟ್ಟಗೆ ಬಾಗಿಲ ಕಡೆ ಹೊರಟು ಹೋದಳು. ಅವರಾರೊಡನೆಯೂ ಮಾತನಾಡಲಿಲ್ಲ.

ಸುಧಾ—ಹಾಗಿದ್ದರೆ ನೀವೇ ಏನೋ ಅಂದಿರಬೇಕು!

ಡಾಕ್ಟರ್‌ಸಾಹೇಬರ ಎದೆ ಡಬಡಬನೆ ಬಡಿದುಕೊಳ್ಳತೊಡಗಿತು. 'ಭಲಾ! ನಾನೇನೆನ್ನುವೆನು? ನನಗಷ್ಟು ಬುದ್ಧಿಯಿಲ್ಲವೇ?

ಸುಧಾ—ಅವಳು ಇಲ್ಲಿಗೆ ಬರುವುವನ್ನು ನೋಡಿಯೂ ನೀವಿಲ್ಲೇ ಕುಳಿತಿದ್ದಿರಾ?

ಡಾಕ್ಟರ್—ನಾನಿಲ್ಲಿ ಇರಲೇ ಇಲ್ಲ ಕನ್ನಡಕವನ್ನು ತೆಗೆದು, ಮರೆತು ಎಲ್ಲೋ ಇಟ್ಟುಬಿಟ್ಟಿದ್ದೆ. ಹೊರಗಡೆಯೆಲ್ಲಾ ಹುಡುಕಿ ಹುಡುಕಿ ಸಾಕಾದೆ; ಸಿಗಲಿಲ್ಲ. ಇಲ್ಲೇನಾದರೂ ಇರಬಹುದೆಂದು ಯೋಚಿಸಿ, ಇಲ್ಲಿಗೆ ಬಂದೆ. ಆಗ ಅವಳಿಲ್ಲಿ ಕುಳಿತಿದ್ದುದನ್ನು ಕಂಡು, ಹೊರಗೆ ಬರುವುದರಲ್ಲಿದ್ದೆ. ಅಷ್ಟರಲ್ಲಿ ಅವಳೇ 'ಏಕೆ? ನಿಮಗೇನಾದರೂ ಪದಾರ್ಥ ಬೇಕಾಗಿತ್ತೇ?' ಎಂದು ಕೇಳಿದಳು. 'ನನ್ನ ಕನ್ನಡಕ ಇಲ್ಲೆಲ್ಲಾದರೂ ಇದೆಯೆ, ನೋಡಬೇಕಾಗಿತ್ತು?' ಎಂದೆ. ಕನ್ನಡಕವು ಮಂಚದ ಮೇಲಿನ ಆಲಮಾರಿನಲ್ಲೇ ಇತ್ತು. ಅದನ್ನು ತೆಗೆದು ನನ್ನ ಕೈಗೆ ಕೊಟ್ಟಳು. ಇಷ್ಟೇ ನಡೆದ ಸಂಗತಿ!

ಸುಧಾ—ಇಷ್ಟೇ? ನಿಮಗೆ ಕನ್ನಡಕವನ್ನು ತೆಗೆದುಕೊಟ್ಟು, ಕೂಡಲೇ ಸಿಟ್ಟಿನಿಂದ ಹೊರಕ್ಕೆ ಹೊರಟು ಹೋದಳೇ? ಅದೇಕೆ?

ಡಾಕ್ಟರ್—ಸಿಟ್ಟಿನಿಂದೇನೂ ಹೋಗಲಿಲ್ಲ! ಹೊರಡುವ ಹೊತ್ತಿನಲ್ಲಿ ನಾನು 'ಇನ್ನೇನು ಬರುತ್ತಿರಬಹುದು. ಸ್ವಲ್ಪ ಹೊತ್ತು ಕುಳಿತಿದ್ದರೆ ಬಂದೆ ಬಿಡುವಳು' ಎಂದೆ. ಕುಳಿತುಕೊಳ್ಳದಿದ್ದರೆ ಅದಕ್ಕೆ ನಾನೇನು ಮಾಡಲೀ?

ಸುಧೆಯು ಸ್ವಲ್ಪ ಹೊತ್ತು ಯೋಚಿಸಿ ನುಡಿವಳು—ನಡೆದ ಸಂಗತಿ ಏನೆಂದು ತಿಳಿದುಬರುತ್ತಿಲ್ಲ. ನಾನೇ ಒಮ್ಮೆ ಅವಳ ಬಳಿಗೆ ಹೋಗಿ ಬರುವೆನು. ವಿಷಯವೇನೆಂದು ತಿಳಿದುಕೊಳ್ಳುವೆನು.

ಡಾಕ್ಟರ್—ಹಾಗಿದ್ದರೆ ಹೋಗು. ಈಗಲೇ ಏನವಸರವಾಗಿದೆ? ಸಾಯಂಕಾಲದ ವರೆಗೂ ಹೊತ್ತಿದೆಯಲ್ಲಾ?

ಸುಧೆಯು ಮೇಲುಹೊದಿಕೆ ಹೊದೆದುಕೊಳ್ಳುತ್ತ ಹೇಳಿದಳು—ನನ್ನ ಹೊಟ್ಟೆಯಲ್ಲಿ ಹುಳಿ ಕಿವುಚಿದಂತಾಗುತ್ತಿದೆ! ಏನವಸರವೆಂದು ನೀವು ಕೇಳು ವಿರಿ!—ಎನ್ನುತ್ತ ಅತಿ ವೇಗದಿಂದ ನಿರ್ಮಲೆಯ ಮನೆಯ ಕಡೆ ಹೊರಟಳು. ಐದು ನಿಮಿಷದಲ್ಲೇ ಅವಳ ಮನೆ ತಲುಪಿದಳು. ನೋಡಲಾಗಿ ನಿರ್ಮಲೆಯು ತನ್ನ ಕೊಠಡಿಯಲ್ಲಿ ಮಂಚದ ಮೇಲೆ ಮಲಗಿ ಅಳುತ್ತಿದ್ದಳು. ಆಶಾ ಅವಳ ಬಳಿ ನಿಂತು, ಮುದ್ದು ಮಾತಿನಿಂದ 'ಅಮ್ಮಾ! ಏಕೆ ಅಳುತ್ತಿರುವೆ?' ಎಂದು ಕೇಳುತ್ತಿದ್ದಳು.

ಸುಧೆಯು ಆಶಾಳನ್ನು ಎತ್ತಿಕೊಂಡು, ನಿರ್ಮಲೆಯೊಡನೆ ಹೇಳಿದಳು—ನಿಜವಾಗಿ ಹೇಳು, ನಿರ್ಮಲಾ! ನಡೆದ ಸಂಗತಿಯೇನು? ನಮ್ಮ ಮನೆಯಲ್ಲಿ ಯಾರಾದರೂ ಏನಾದರೂ ಅಂದರೇ? ನಾನು ಕೇಳಿದೆ. ಯಾರೂ ಹೇಳುವುದಿಲ್ಲ.

ನಿರ್ಮಲೆಯು ಕಣ್ಣೀರೊರೆಸಿಕೊಳ್ಳುತ್ತ ಹೇಳಿದಳು—ಯಾರೂ ಏನೂ ಹೇಳಲಿಲ್ಲ, ಸುಧಾ! ಭಲಾ, ಅಲ್ಲಿ ನನ್ನನ್ನು ಯಾರೇನೆನ್ನುವರು?

ಸುಧಾ—ಹಾಗಿದ್ದರೆ ನನ್ನೊಡನೆ ಮಾತನಾಡಲಿಲ್ಲವೇಕೆ? ಮತ್ತು ಅಲ್ಲಿಂದ ಬಂದೊಡನೆ ಅಳುತ್ತಿರುವೆಯೇಕೆ?

ನಿರ್ಮಲೆ—ನನ್ನ ಅದೃಷ್ಟಕ್ಕಾಗಿ ಅಳುತ್ತಿರುವೆನು, ಅಷ್ಟೆ!

ಸುಧಾ—ನೀನು ನಿಜವಾಗಿ ಹೇಳದಿದ್ದರೆ, ಆಣೆಯಿಟ್ಟುಕೊಳ್ಳುವೆನು!

ನಿರ್ಮಲೆ—ಆಣೆಯಿಟ್ಟುಕೊಳ್ಳಬೇಡ ಸುಧಾ! ನನ್ನನ್ನು ಯಾರೂ ಏನೂ ಅನ್ನಲಿಲ್ಲ. ಸುಳ್ಳೇಕೆ ಹೇಳಲಿ?

ಸುಧಾ—ನನ್ನಾಣೆಗೂ ಹೇಳು!

ನಿರ್ಮಲೆ—ನೀನು ವೃಥಾ ಹಟಮಾಡುತ್ತಿರುವೆ!

ಸುಧಾ—ನಿರ್ಮಲಾ! ನೀನು ಹೇಳದಿದ್ದೆಯಾದರೆ, ನಿನಗೆ ನನ್ನಲ್ಲಿ ಸ್ವಲ್ಪವೂ ಪ್ರೀತಿಯಿಲ್ಲವೆಂದೂ, ಎಲ್ಲವೂ ಬಾಯಿಮಾತಿನ ಪ್ರೇಮವೆಂದೂ ತಿಳಿದುಕೊಳ್ಳುವೆನು. ನಾನು ನಿನ್ನಲ್ಲಿ ಯಾವ ಮಾತನ್ನೂ ಮರೆಮಾಚುವು ದಿಲ್ಲ; ನೀನು ಮಾತ್ರ ನನ್ನನ್ನು ಅನ್ಯಳಂತೆ ಭಾವಿಸುವೆ! ನಾನು ನಿನ್ನಲ್ಲಿ ಬಹಳ ನಂಬಿಕೆಯಿಟ್ಟಿದ್ದೆ. ಯಾರು ಯಾರಿಗೂ ಆಗುವುದಿಲ್ಲವೆಂದು ಈಗ ನನಗೆ ತಿಳಿಯಿತು!

ಸುಧೆಯ ನೇತ್ರಗಳು ಸಜಲವಾದವು. ಅವಳು ಆಶಾಳನ್ನು ಕೆಳಗಿಳಿಸಿ, ಬಾಗಿಲ ಕಡೆ ನಡೆದಳು. ನಿರ್ಮಲೆ ಎದ್ದು ಅವಳ ಕೈಹಿಡಿದುಕೊಂಡಳು; ಪುತ್ತು ಕಂಬನಿಗರೆಯುತ್ತ ಹೇಳಿದಳು—ಸುಧಾ, ನಿನ್ನ ಕಾಲಿಗೆ ನಮಸ್ಕರಿಸು ವೆನು; ನನ್ನನ್ನು ಈ ವಿಷಯ ಕೇಳಬೇಡ! ಕೇಳಿದರೆ ನಿನಗೆ ದುಃಖವಾಗು ವುದು; ಅಲ್ಲದೆ ನಾನು ಪುನಃ ನಿನಗೆ ಮುಖ ತೋರಿಸಲಾರೆ! ನಾನು ಅಭಾಗಿನಿ ಯಲ್ಲದಿದ್ದರೆ ಇಂತಹ ದಿನವನ್ನೇಕೆ ಕಾಣುತ್ತಿದ್ದೆ, ಸುಧಾ! ಇನ್ನು ಈ ಪ್ರಪಂಚದಿಂದ ಪಾರುಗಾಣಿಸೆಂಬುದೇ ಆ ಪರಮಾತ್ಮನಲ್ಲಿ ನನ್ನ ಪ್ರಾರ್ಥನೆ! ಈಗಲೇ ಈ ದುರ್ಗತಿಯಾದರೆ, ಮುಂದೇನಾಗುವುದೋ? ಹಾ! ದೇವಾ!

ಈ ಮಾತುಗಳಲ್ಲಿದ್ದ ಸಂಕೇತವನ್ನು ಬುದ್ಧಿವಂತೆಯಾದ ಸುಧೆಯು ಅರಿತಳು. ಡಾಕ್ಟರ್‌ಸಾಹೇಬರೇ ಏನೋ ಛೇಡಿಸಿರಬೇಕೆಂದು ತಿಳಿದು ಕೊಂಡಳು ಅವರು ತಡವರಿಸಿ ತಡವರಿಸಿ ಮಾತನಾಡಿದುದು, ತನ್ನ ಪ್ರಶ್ನೆ ಗಳನ್ನು ಮರೆಸಿದುದು, ಅವರ ಆ ಗ್ಲಾನಿಮಯ ಕಾಂತಿಹೀನ ಮುಖ— ಎಲ್ಲವೂ ಅವಳಿಗೆ ಜ್ಞಾಪಕಕ್ಕೆ ಬಂದವು. ನಖದಿಂದ ಶಿಖದವರೆಗೂ ನಡುಗಿ ದಳು! ಮತ್ತೇನೂ ಮಾತನಾಡದೆ ಸಿಂಹಿಣಿಯಂತೆ ಕ್ರೋಧಾವೇಶಭರಿತ ಳಾಗಿ ಅಲ್ಲಿಂದ ಹೊರಟಳು. ನಿರ್ಮಲೆಯು ಅವಳನ್ನು ತಡೆಯಲು ಪ್ರಯತ್ನಿ ಸಿದಳು, ಆದರೆ ಆಗಲಿಲ್ಲ. ಒಂದು ನಿಮಿಷದಲ್ಲೇ ಅವಳು ದ್ವಾರವನ್ನು ದಾಟಿ, ಮನೆಯ ಕಡೆ ನಡೆದಳು. ಆಗ ನಿರ್ಮಲೆ ಅಲ್ಲೇ ನೆಲದ ಮೇಲೆ ಧೊಪ್ಪನೆ ಕುಸಿತು ಬಿಕ್ಕಿ ಬಿಕ್ಕಿ ಅಳತೊಡಗಿದಳು.

## ಇಪ್ಪತ್ತಮೂರನೆಯ ಪರಿಚ್ಛೇದ

ನಿರ್ಮಲೆಯು ದಿವಸವೆಲ್ಲ ಮಂಚದ ಮೇಲೆ ಮಲಗಿದ್ದಳು. ಅವಳ ಶರೀರ ದಲ್ಲಿ ಪ್ರಾಣವೇ ಇಲ್ಲವೋ ಎಂಬಂತಿತ್ತು. ಸ್ನಾನಮಾಡಲಿಲ್ಲ, ಊಟಕ್ಕೇಳಲಿಲ್ಲ.



ಸಂಜೆಯ ಹೊತ್ತಿಗೆ ಜ್ವರವೇರಿ ಬಂತು. ರಾತ್ರಿಯೆಲ್ಲಾ ದೇಹವು ಕಾವಲಿಯಂತೆ ಕಾಯುತ್ತಿತ್ತು. ಮರುದಿನವೂ ಜ್ವರ ಇಳಿಯಲಿಲ್ಲ; ಆದರೆ ತುಸು ಕಡಿಮೆಯಾಗಿತ್ತು. ಅವಳು ಮಂಚದ ಮೇಲೆ ಮಲಗಿ, ನಿಶ್ಚಲ ನೇತ್ರಗಳಿಂದ ದ್ವಾರದೆಡೆಗೇ ದಿಟ್ಟಿಸುತ್ತಿದ್ದಳು ನಾಲ್ಕು ಕಡೆಗಳಲ್ಲೂ ಶೂನ್ಯ; ಒಳಗೂ ಶೂನ್ಯ, ಹೊರಗೂ ಶೂನ್ಯ ! ಅವಳಿಗೆ ಯಾವ ಚಿಂತೆಯೂ ಇರಲಿಲ್ಲ, ಯಾವ ಸ್ಮೃತಿಯೂ ಇರಲಿಲ್ಲ, ಯಾವ ದುಃಖವೂ ಇರಲಿಲ್ಲ !

ಅಕಸ್ಮಾತ್ ರುಕ್ಮಿಣಿಯು ಆಶಾಳನ್ನು ಎತ್ತಿಕೊಂಡು ಅಲ್ಲಿಗೆ ಬಂದಳು. ನಿರ್ಮಲೆಯು ಕೇಳಿದಳು—ಇವಳು ಬಹಳ ಅಳುತ್ತಿದ್ದಳೇ ?

ರುಕ್ಮಿಣಿ—ಇಲ್ಲ, ಸ್ವಲ್ಪವೂ ಅಳಲಿಲ್ಲ ರಾತ್ರಿಯೆಲ್ಲಾ ಸುಮ್ಮನೆ ಮಲಗಿದ್ದಳು. ಸುಧಾ ಸ್ವಲ್ಪ ಹಾಲನ್ನು ಕಳುಹಿಸಿದ್ದಳು, ಅದನ್ನೇ ಕುಡಿಸಿದೆ !

ನಿರ್ಮಲೆ—ಏಕೆ ? ಹಾಲಿನವಳು ಹಾಲು ತರಲಿಲ್ಲವೇ ?

ರುಕ್ಮಿಣಿ—ಹಿಂದಿನ ಬಾಕಿ ಕೊಟ್ಟ ಹೊರತು ಹಾಲು ತರುವುದಿಲ್ಲವೆಂದು ಹೇಳುತ್ತಿದ್ದಳು. ಈಗ ಹೇಗಿದೆ ನಿನ್ನ ದೇಹಸ್ಥಿತಿ ?

ನಿರ್ಮಲೆ—ಸರಿಯಾಗಿಲ್ಲದೆ ಏನು ? ನಿನ್ನೆ ಸ್ವಲ್ಪ ಜ್ವರ ಬಂದಂತಿತ್ತು.

ರುಕ್ಮಿಣಿ—ಡಾಕ್ಟರ್‌ಸಾಹೇಬರ ಸ್ಥಿತಿ ಬಹಳ ಹದಗೆಟ್ಟಿದೆಯಂತೆ ?

ನಿರ್ಮಲೆಯು ಗಾಬರಿಯಿಂದ ಕೇಳಿದಳು—ಏಕೆ ? ಏನಾಯಿತು ? ಕುಶಲದಿಂದಿರುವರಷ್ಟೆ ?

ರುಕ್ಮಿಣಿ—ಇನ್ನೆಲ್ಲಿಯ ಕುಶಲ ? ಶವ ಸಾಗಿಸುವ ಸಿದ್ಧತೆ ನಡೆಯುತ್ತಲಿದೆ ! ವಿಷಪಾನ ಮಾಡಿದರೆಂದು ಕೆಲವರು ಹೇಳುವರು; ಮತ್ತೆ ಕೆಲವರು. ಹೃದಯ ಸ್ತಂಭನದಿಂದ ಮೃತಿ ಹೊಂದಿದರೆನ್ನುವರು. ಅಂತೂ ಏನಾಯಿತೋ, ಆ ಭಗವಂತನೇ ಬಲ್ಲ !

ನಿರ್ಮಲೆ ಒಮ್ಮೆ ನಿಟ್ಟುಸಿರ್ಗರೆದಳು. ಮತ್ತು ಹೇಳಿದಳು—ಹಾ, ಭಗವಂತ ! ಸುಧೆಯ ಗತಿ ಇನ್ನೇನು ? ಅವಳು ಹೇಗೆ ಜೀವಿಸಿರುವಳು ? ಎನ್ನುತ್ತ ಕಣ್ಣೀರ್ಗರೆದಳು; ಮತ್ತು ಬಹಳ ಹೊತ್ತಿನವರೆಗೆ ಅಳುತ್ತಲೇ ಇದ್ದಳು ನಂತರ ಮಂಚದಿಂದೆದ್ದು ಸುಧೆಯ ಬಳಿ ಹೋಗಲು ಸಿದ್ಧಳಾದಳು. ಕಾಲುಗಳು ಕಂಪಿಸುತ್ತಿದ್ದವು ಗೋಡೆಯನ್ನು ಹಿಡಿದು ನಿಂತಿದ್ದಳು. ಅಷ್ಟಾದರೂ ಹೋಗದಿರಲು ಅವಳ ಮನಸೊಪ್ಪಲಿಲ್ಲ ಸುಧೆಯು ಇಲ್ಲಿಂದ ಹೋಗಿ ಪತಿಯೊಡನೆ ಏನೇನು ಹೇಳಿದಳೋ ? ನಾನು ಅವಳ ಸಂಗಡ ಯಾವ ಮಾತನ್ನೂ

ಹೇಳಿಲ್ಲ. ನನ್ನ ಮಾತುಗಳ ಅರ್ಥವನ್ನು ಅವಳು ಯಾವ ರೀತಿ ತಿಳಿದು ಕೊಂಡಳೋ? ಹುಂ! ಅಂತಹ ರೂಪಶಾಲಿ, ಗುಣಶಾಲಿ, ದಯಾಳು ಜೀವಿಗೆ ಇಂತಹ ಅಂತ್ಯವೇ? ಸುಧೆಯ ಕ್ರೋಧದ ಪರಿಣಾಮ ಈ ರೀತಿಯಾಗುವು ದೆಂದು ನಿರ್ಮಲೆಗೆ ತಿಳಿದಿದ್ದರೆ, ಪ್ರಾಣ ಹೋದರೂ ಅವಳು ಈ ಮಾತನ್ನು ಸುಧೆಗೆ ತಿಳಿಸುತ್ತಿರಲಿಲ್ಲ!

ತನ್ನ ನಿಷ್ಠುರತೆಯ ಕಾರಣದಿಂದಲೇ ಡಾಕ್ಟರ್‌ಸಾಹೇಬರಿಗೆ ಈ ಗತಿ ಯಾಯಿತೆಂದು ಯೋಚಿಸಿ, ನಿರ್ಮಲೆಯ ಹೃದಯ ಛಿದ್ರಛಿದ್ರವಾಯಿತು. ಶೂಲಕ್ಕೇರಿಸಲ್ಪಟ್ಟಂತೆ ಅಪಾರವೇದನೆಯಾಗತೊಡಗಿತು ಒಡನೆಯೇ ಡಾಕ್ಟರ್‌ಸಾಹೇಬರ ಮನೆಗೆ ಹೊರಟಳು.

ಶವವನ್ನು ಸಾಗಿಸಲಾಗಿತ್ತು. ಹೊರಗಡೆ ನಿಸ್ತಬ್ಧತೆ ಕವಿದಿತ್ತು. ಮನೆ ಯೊಳಗೆ ಸ್ತ್ರೀಯರೆಲ್ಲ ಸೇರಿದ್ದರು. ಸುಧೆಯು ನೆಲದ ಮೇಲೆ ಬಿದ್ದು ಅಳು ತ್ತಿದ್ದಳು. ನಿರ್ಮಲೆಯನ್ನು ನೋಡಿದೊಡನೆ ಅವಳು ಗಟ್ಟಿಯಾಗಿ ಬಿಕ್ಕಿಬಿಕ್ಕಿ ಅಳತೊಡಗಿದಳು; ಮತ್ತು ಅವಳನ್ನು ಬಿಗಿಯಾಗಿ ಅಪ್ಪಿಕೊಂಡಳು. ಇಬ್ಬರೂ ಬಹಳ ಹೊತ್ತಿನವರೆಗೆ ಅಳುತ್ತಿದ್ದರು.

ತುಸು ಹೊತ್ತಿಗೆ ಹೆಂಗಸರ ಗುಂಪು ಕಡಿಮೆಯಾಯಿತು. ಸುಧೆ ಮತ್ತು ನಿರ್ಮಲೆ ಇಬ್ಬರೇ ಉಳಿದರು. ಆಗ ನಿರ್ಮಲೆಯು ಕೇಳಿದಳು—ಇದೆಂತಹ ಕೆಲಸವಾಗಿಹೋಯಿತು, ಸುಧಾ! ಏಕೆ, ನೀನೇನು ಹೇಳಿಬಿಟ್ಟೆ?

ಇಂದು ಸುಧೆಯು ತನ್ನ ಮನಸಿಗೇ ಈ ಪ್ರಶ್ನೆಯ ಉತ್ತರವನ್ನು ಅನೇಕ ಬಾರಿ ಕೊಟ್ಟುಕೊಂಡಿದ್ದಳು ಯಾವ ಉತ್ತರದಿಂದ ತನ್ನ ಮನಸು ಶಾಂತ ವಾಯಿತೋ, ಅದೇ ಉತ್ತರವನ್ನು ನಿರ್ಮಲೆಗೂ ಹೇಳಿದಳು—ಏನು ಮಾಡಲಿ, ನಿರ್ಮಲಾ! ಸುಮ್ಮನಿರಲಾಗಲಿಲ್ಲ. ಕೋಪದ ಮಾತಿಗೆ ಕೋಪ ಬರಲಾರದೇ?

ನಿರ್ಮಲೆ—ನಾನು ಅಂತಹ ಯಾವ ಮಾತನ್ನೂ ಹೇಳಲಿಲ್ಲವಲ್ಲಾ!

ಸುಧಾ—ನೀನು ಹೇಗೆ ಹೇಳುವೆ, ನಿರ್ಮಲಾ? ಅವರೇ ನಡೆದ ಸಂಗತಿ ಯೆಲ್ಲವನ್ನೂ ಹೇಳಿಬಿಟ್ಟರು. ಆಗ ನಾನು ಬಾಯಿಗೆ ಬಂದಂತೆಲ್ಲಾ ಅಂದು ಬಿಟ್ಟೆ. ಮನುಷ್ಯನ ಮನಸಿಗೆ ಒಂದು ವಿಷಯ ನಾಟಿತೆಂದರೆ ಅದು ನಡೆ ದಂತೆಯೇ! ಸಮಯ-ಸಂದರ್ಭ ಸಿಕ್ಕರೆ, ಅದು ಅಗತ್ಯವಾಗಿ ನಡೆದೇ ನಡೆ ಯುವುದು. ಇಂತಹ ವಿಷಯಗಳನ್ನು ತಮಾಷೆಗಾಗಿ ಹೇಳಿದೆನೆಂದು ಯಾರ

ತಪ್ಪಿಸಿಕೊಳ್ಳುವಂತಿಲ್ಲ. ಏಕಾಂತದಲ್ಲಿ ಇಂತಹ ಶಬ್ದಗಳನ್ನು ಬಾಯಲ್ಲುಚ್ಚರಿ ಸುವುದೇ, ಅವರ ನಿಯತ್ತು ಸರಿಯಾದುದಲ್ಲವೆನ್ನಲು ಸಾಕಷ್ಟು ಸಾಕ್ಷಿ! ನಾನು ನಿನ್ನ ಸಂಗಡ ಎಂದೂ ಹೇಳಿರಲಿಲ್ಲ ನಿರ್ಮಲಾ! ಅವರು ಎಷ್ಟೋ ಬಾರಿ ನಿನ್ನ ಕಡೆ ಇಣಿಕಿ ನೋಡಿರುವುದನ್ನು ನಾನು ಕಂಡಿರುವೆನು. ಆಗ ನಾನೇ ತಪ್ಪು ತಿಳಿದುಕೊಂಡಿರಬಹುದೆಂದು ಯೋಚಿಸಿ, ಮನಸಿಗೆ ಸಮಾ ಧಾನ ತಂದುಕೊಳ್ಳುತ್ತಿದ್ದೆ. ಆದರೆ ಆ ವ್ಯವಹಾರದ ಅರ್ಥವೆಲ್ಲ ಈಗ ನನಗೆ ಗೊತ್ತಾಯಿತು. ಆಗಲೇ ನನಗೆ ಸಾಕಷ್ಟು ಪ್ರಪಂಚ ಜ್ಞಾನವಿದ್ದಿದ್ದರೆ ನಿನ್ನನ್ನು ನಮ್ಮ ಮನೆಗೇ ಬರಗೊಡುತ್ತಿರಲಿಲ್ಲ. ಅಥವಾ ಅವರ ದೃಷ್ಟಿಯಾದರೂ ನಿನ್ನ ಮೇಲೆ ಬೀಳದಂತೆ ಮಾಡುತ್ತಿದ್ದೆ! ಆದರೆ ಪುರುಷರು ಬಾಯಲ್ಲಾಡುವುದೇ ಬೇರೆ, ಅವರ ಮನಸಿನಲ್ಲಿರುವುದೇ ಬೇರೆ—ಎಂದು ನಾನೇನು ಬಲ್ಲೆ, ನಿರ್ಮಲಾ? ಭಗವಂತನ ಇಚ್ಛೆ ಇದ್ದಂತಾಯಿತು! ಅಂತಹ ಸೌಮಂಗಲ್ಯ ಕ್ಕಿಂತ ವೈಧವ್ಯವೇ ಮೇಲೆಂದು ನಾನು ಭಾವಿಸುವೆನು. ಯಾವ ಧನಿಕನ ಧನವೇ ಸರ್ಪಸ್ವರೂಪದಿಂದ ಅವನನ್ನು ಕಚ್ಚತೊಡಗುವುದೋ, ಅಂತಹ ಧನಿಕನಿಗಿಂತ ದರಿದ್ರನೇ ಸಹಸ್ರಪಾಲು ಸುಖಿ.

ಈ ಹೊತ್ತಿಗೆ ಸರಿಯಾಗಿ ಡಾಕ್ಟರ್ ಸಿಂಹರ ತಮ್ಮನೂ ಕೃಷ್ಣಳೂ ಮನೆ ಯೊಳಕ್ಕೆ ಪ್ರವೇಶಿಸಿದರು. ಮತ್ತೆ ಮನೆ ಮಂದಿಯೆಲ್ಲಾ ಅಳತೊಡಗಿದರು.

## ಇಪ್ಪತ್ತೇಳನೆಯ ಪರಿಚ್ಛೇದ

ಒಂದು ತಿಂಗಳು ಕಳೆಯಿತು. ಸುಧೆಯು ಮೂರನೆಯ ದಿನವೇ ತನ್ನ ಮೈದುನನ ಸಂಗಡ ಹೊರಟು ಹೋದಳು. ಈಗ ನಿರ್ಮಲೆ ಒಂಟಿಯಾದಳು. ಸುಧೆಯಿದ್ದಾಗ ಅವಳೊಡನೆ ಸ್ವಲ್ಪ ನಕ್ಕು ನುಡಿದಾದರೂ ಮನಸಿನ ಬೇಸರ ವನ್ನು ಕಳೆದುಕೊಳ್ಳುತ್ತಿದ್ದಳು. ಈಗ ಅವಳಿಗೆ ಅಳುವುದೊಂದೇ ಕೆಲಸ ವಾಯಿತು. ಸ್ವಾಸ್ಥ್ಯವು ದಿನದಿನಕ್ಕೂ ಹದಗೆಡುತ್ತ ಬಂತು. ಹಿಂದೆ ಇದ್ದ ಮನೆಗೆ ಬಾಡಿಗೆ ಹೆಚ್ಚೆಂದು, ಈಗ ಸಣ್ಣದೊಂದು ಮನೆ ಮಾಡಿಕೊಂಡಿದ್ದಳು. ಇದು ಸಣ್ಣ, ಇಕ್ಕಟ್ಟಾದ ಗಲ್ಲಿಯಲ್ಲಿತ್ತು. ಒಳಗಡೆ ಒಂದು ಕೊಠಡಿ, ಹೊರ ಗಡೆ ಸ್ವಲ್ಪ ಅಂಗಳ. ಗಾಳಿಬೆಳಕುಗಳಂತೂ ಸುಳಿಯುವಂತೆಯೇ ಇರಲಿಲ್ಲ. ಕೆಟ್ಟ ವಾಸನೆ ಹೊಡೆಯುತ್ತಿತ್ತು. ಕೈಯಲ್ಲಿ ಕಾಸಿದ್ದರೂ ಒಮ್ಮೊಮ್ಮೆ ಉಪ ವಾಸವನ್ನೇ ಮಾಡಬೇಕಾಗುತ್ತಿತ್ತು. ಪೇಟೆಯಿಂದ ಸಾಮಾನು ತರುವವರು

ಯಾರ್ರು? ತನ್ನ ಗಂಡನಿಲ್ಲ; ಮಕ್ಕಳಿಲ್ಲ ಅಂದಮೇಲೆ ಕೇವಲ ಹೆಂಗಸರಿಗಾಗಿ ದಿನವೂ ಅಡಿಗೆ ಮಾಡುವ ಅವಶ್ಯಕತೆಯಾದರೂ ಏನು? ಒಂದು ವೇಳೆ ಮಾಡಿ ತಿಂದರೆ, ಮತ್ತೆ ಮೂರು ವೇಳೆ ಉಪವಾಸವಿರಬಹುದು. ಇರುವು ದೊಂದು ಮಗು ಆಶಾ! ಅವಳಿಗಾಗಿ ದಿನವೂ ಸ್ವಲ್ಪ ಹಲ್ವ ಅಥವಾ ರೊಟ್ಟಿ ಮಾಡಿದರಾಯಿತು!–ಹೀಗೆಯೇ ಕಾಲ ತಳ್ಳುತ್ತಿದ್ದಳು. ಇಂತಾದರೆ ಸ್ವಾಸ್ಥ್ಯ ಕೆಡದಿರುವುದೆಂತು? ಚಿಂತೆ, ಶೋಕ, ದುರವಸ್ಥೆ–ಇವುಗಳಲ್ಲಿ ಒಂದಾಗಿದ್ದರೆ ಹೇಗೋ ನಿರ್ವಹಿಸಬಹುದು. ಆದರೆ ಇಲ್ಲಿ ತಾಪತ್ರಯವೂ ಸೇರಿತ್ತು! ಸಾಲದು ದಕ್ಕೆ ನಿರ್ಮಲೆಯು ಔಷಧಿ ತೆಗೆದುಕೊಳ್ಳುವುದಿಲ್ಲವೆಂದು ಶಪಥ ಮಾಡಿದ್ದಳು. ಪಾಪ, ಅವಳು ತಾನೇ ಏನು ಮಾಡುವಳು? ಇರುವ ಸ್ವಲ್ಪ ಹಣದಲ್ಲಿ ಭೋಜನ ನಿರ್ವಹಿಸುವುದೇ ಕಷ್ಟವಾಗಿರುವಾಗ, ಔಷಧಿಗೆ ಎಲ್ಲಿಂದ ಕೊಡು ವಳು? ಹೀಗಾಗಿ ದಿನದಿನಕ್ಕೂ ಕೃಶಿಸುತ್ತ ಬಂದಳು!

ಒಂದು ದಿನ ರುಕ್ಮಿಣಿ ಹೇಳಿದಳು— ಬಹೂ! ದಿನದಿನಕ್ಕೂ ಕೃಶಿಸುತ್ತ ಹೋಗುತ್ತಿರುವೆ! ಜೀವವನ್ನು ಇಷ್ಟು ಅಲಕ್ಷಿಸಿದರೆ ಹೇಗೆ? ನಡೆ, ಯಾರಾ ದರೂ ಒಳ್ಳೆಯ ವೈದ್ಯನ ಬಳಿ ಕರೆದುಕೊಂಡು ಹೋಗಿ ತೋರಿಸುವೆನು.

ನಿರ್ಮಲೆಯು ವಿರಕ್ತ ಭಾವದಿಂದ ನುಡಿದಳು—ಯಾರು ಅಳುವುದಕ್ಕಾ ಗಿಯೇ ಜೀವಿಸಬೇಕೋ ಅಂಥವರು ಬದುಕಿರಬಾರದು.

ರುಕ್ಮಿಣಿ –ಮೃತ್ಯುವು ಕರೆದರೆ ಬರುವುದೇ?

ನಿರ್ಮಲೆ— ಕರೆಯದೆಯೇ ಮೃತ್ಯುವು ಬರುವಾಗ, ಕರೆದರೆ ಏಕೆ ಬರುವುದಿಲ್ಲ? ಅಕ್ಕ, ಇನ್ನೆಷ್ಟು ದಿನಗಳು ಬದುಕಿರುವೆನೋ, ಅಷ್ಟು ವರ್ಷ ಬದುಕಿದ್ದಂತೆ!

ರುಕ್ಮಿಣಿ–ಏಕಿಷ್ಟು ನೊಂದುಕೊಳ್ಳುವೆ, ಬಹೂ? ಸುಖವನ್ನೇನು ಕಂಡೆ?

ನಿರ್ಮಲೆ—ಇಷ್ಟು ದಿನಗಳೂ ನಾನು ಕಂಡುದೇ ಪ್ರಪಂಚದ ಸುಖ ವಾದ ಪಕ್ಷಕ್ಕೆ ನನಗಿನ್ನು ಈ ಸುಖ ಬೇಡ! ಸತ್ಯವಾಗಿ ಹೇಳುವೆನು, ಅಕ್ಕ! ಈ ಮಗುವಿನ ಮೋಹವು ನನ್ನನ್ನು ತಡೆದು ನಿಲ್ಲಿಸಿದೆ; ಇಲ್ಲದಿದ್ದರೆ ಇದುವರೆಗೆ ಪ್ರಾಣತ್ಯಾಗ ಮಾಡಿಬಿಡುತ್ತಿದ್ದೆ! ಈ ಕಂದನ ಭಾಗ್ಯದಲ್ಲೇನಿದೆಯೋ?

ಹೀಗೆಂದು ಇಬ್ಬರೂ ಅಳತೊಡಗಿದರು. ಇತ್ತ ನಿರ್ಮಲೆಯು ಹಾಸಿಗೆ ಹಿಡಿದಂದಿನಿಂದ ರುಕ್ಮಿಣಿಯ ಹೃದಯದಲ್ಲಿ ದಯಾಪ್ರವಾಹ ಉಕ್ಕಿಬಂತು.

ದ್ವೇಷದ ಲೇಶಮಾತ್ರವೂ ಉಳಿಯುಲಿಲ್ಲ. ಏನೇ ಕೆಲಸ ಮಾಡುತ್ತಿದ್ದರೂ, ನಿರ್ಮಲೆಯ ಧ್ವನಿ ಕೇಳಿದೊಡನೆ ಎಲ್ಲವನ್ನೂ ಬಿಟ್ಟು ಓಡಿಬರುತ್ತಿದ್ದಳು. ನಿರ್ಮಲೆಗೆ ರುಚಿಸುವಂತಹ ಯಾವುದಾದರೂ ತಿಂಡಿಪದಾರ್ಥವನ್ನು ಮಾಡ ಬೇಕೆಂದು ಆಶಿಸುತ್ತಿದ್ದಳು. ನಿರ್ಮಲೆ ಎಂದಾದರೂ ನಕ್ಕುದನ್ನು ಕಂಡರೆ, ಆನಂದದಿಂದ ಹಿಗ್ಗಿ ಹೋಗುತ್ತಿದ್ದಳು. ಮತ್ತು ಆಶಾಳನ್ನಂತೂ ಕಂಠಹಾರ ದಂತೆ ಸದಾ ಎತ್ತಿಕೊಂಡೇ ಇರುತ್ತಿದ್ದಳು! ಅವಳೊಡನೆ ನಿದ್ರಿಸುತ್ತಿದ್ದಳು. ಅವಳೊಡನೆ ಎಚ್ಚರಗೊಳ್ಳುತ್ತಿದ್ದಳು! ಅವಳೇ ಈಗ ರುಕ್ಮಿಣಿಯ ಜೀವನಾ ಧಾರವಾಗಿದ್ದಳು!

ರುಕ್ಮಿಣಿಯು ತುಸು ಹೊತ್ತಿನ ನಂತರ ನುಡಿದಳು—ಬಹೂ ಇಷ್ಟೇಕೆ ನಿರಾಶಳಾಗುವೆ? ಭಗವಂತನ ಕೃಪೆಯಿದ್ದರೆ ಇನ್ನು ನಾಲ್ಕಾರು ದಿನಗಳಲ್ಲೇ ಗುಣಮುಖಳಾಗುವೆ! ನಡೆ, ನನ್ನ ಸಂಗಡ ವೈದ್ಯನ ಬಳಿಗೆ ಬಾ! ಉತ್ತಮ ವಾದ ಔಷಧಿ ಕೊಡಿಸುವೆನು

ನಿರ್ಮಲೆ—ಅಕ್ಕ, ವೈದ್ಯ-ಹಕೀಮರ ಔಷಧಿಯಿಂದ ಇನ್ನು ನನಗಾವ ಪ್ರಯೋಜನವೂ ಆಗಲಾರದು! ನೀವು ನನ್ನ ವಿಷಯವಾಗಿ ಚಿಂತಿಸಬೇಡಿ! ಇದೋ, ಮಗುವನ್ನು ನಿಮ್ಮ ಕೈಗೊಪ್ಪಿಸಿರುವೆನು. ಜೀವದಿಂದಿದ್ದರೆ, ಯಾವ ನಾದರೂ ಉತ್ತಮ ಕುಲದ ವರನಿಗೆ ಕೊಟ್ಟು ವಿವಾಹ ಮಾಡಿ! ನನ್ನ ಜೀವನದಲ್ಲಿ ನಾನು ಇವಳಿಗೇನೂ ಮಾಡಲಿಲ್ಲ; ಕೇವಲ ಜನ್ಮವಿತ್ತ ಅಪರಾಧಿನಿ ಯಾದೆ! ಮದುವೆ ಮಾಡದೆ ಕನ್ಯೆಯಾಗಿರಿಸಿದರೂ ಚಿಂತೆಯಿಲ್ಲ, ವಿಷಕೊಟ್ಟು ಕೊಂದರೂ ವ್ಯಸನವಿಲ್ಲ; ಆದರೆ ಕುಪಾತ್ರನ ಕುತ್ತಿಗೆಗೆ ಮಾತ್ರ ಕಟ್ಟಬೇಡಿ! ಇದೇ ನಿಮ್ಮಲ್ಲಿ ನನ್ನ ವಿನಯಪೂರ್ವಕ ಪ್ರಾರ್ಥನೆ! ನಾನು ನಿಮಗಾವ ಸೇವೆ ಯನ್ನೂ ಮಾಡಲಿಲ್ಲ; ಇದಕ್ಕಾಗಿ ಬಹಳ ದುಃಖವೆನಿಸುತ್ತಿದೆ. ಈ ಅಭಾಗಿನಿಯ ದೆಸೆಯಿಂದ ಯಾರಿಗೂ ಸುಖವಿಲ್ಲದಾಯಿತು! ನನ್ನ ನೆರಳು ಸೋಕಿದವರು ಸಹ ಸರ್ವನಾಶವಾದರು! ಪತಿದೇವರು ಎಂದಾದರೂ ಮನೆಗೆ ಬಂದರೆ, ಈ ಅಭಾಗಿನಿಯ ಅಪರಾಧವನ್ನು ಕ್ಷಮಿಸಬೇಕೆಂದು ತಿಳಿಸಿರಿ!

ರುಕ್ಮಿಣಿಯು ಕಣ್ಣೀರ್ಗರೆಯುತ್ತ ನುಡಿದಳು—ಬಹೂ! ನಿನ್ನದಾವ ಅಪರಾಧವೂ ಇಲ್ಲ ಭಗವಂತನ ಸಾಕ್ಷಿಯಾಗಿ ಹೇಳುವೆನು, ನಿನ್ನ ವಿಷಯ ವಾಗಿ ನನ್ನ ಮನಸು ನಿಷ್ಕಲ್ಮಷವಾಯಿತು. ಇದುವರೆಗೆ ನಾನು ನಿನ್ನೊಡನೆ ಕಪಟಗೈದೆ! ಇದನ್ನು ನಾನು ಸಾಯುವ ವರೆಗೆ ಮರೆಯಲಾರೆ!

ನಿರ್ಮಲೆಯು ಕಾತರ ನೇತ್ರಗಳಿಂದ ನೋಡುತ್ತ ನುಡಿದಳು—ಅಕ್ಕ! ಹೇಳುವ ಮಾತಲ್ಲ; ಆದರೂ ಹೇಳದೇ ಇರಲಾರೆ! ಪತಿದೇವರು ನನ್ನನ್ನು ಸದಾ ಅನುಮಾನದೃಷ್ಟಿಯಿಂದಲೇ ಕಾಣುತ್ತಿದ್ದರು; ಆಷ್ಟಾದರೂ ನಾನು ಮನಸಿನಲ್ಲಿ ಸಹ ಅವರ ಅವಹೇಳನೆ ಮಾಡಲಿಲ್ಲ! ಆಗಬೇಕಾದದ್ದು ಆಗಿ ಹೋಯಿತು; ಅಂದಬಳಿಕ ಅಧರ್ಮವನ್ನಾಚರಿಸಿ ನನ್ನ ಪರಲೋಕವನ್ನೂ ಹಾಳುಮಾಡಿಕೊಳ್ಳಲೇ? ಪೂರ್ವ ಜನ್ಮದಲ್ಲಿ ಯಾವ ಪಾಪ ಮಾಡಿದ್ದೆನೋ, ಅದರ ಪ್ರಾಯಶ್ಚಿತ್ತವನ್ನೀಗ ಮಾಡಿಕೊಳ್ಳಬೇಕಾಯಿತು! ಈ ಜನ್ಮದಲ್ಲೂ ಪಾಪ ಮಾಡಿದರೆ ನನ್ನ ಗತಿ ಏನಾಗಬೇಕು?—ಎನ್ನುತ್ತಿದ್ದಂತೆ ನಿರ್ಮಲೆಯ ಉಸಿರಿನ ವೇಗ ಹೆಚ್ಚಿತು. ಮೇಲೆ ಮಲಗಿಕೊಂಡಳು. ಆಶಾಳನ್ನು ಒಮ್ಮೆ ಆಶಾಪೂರ್ಣ ದೃಷ್ಟಿಯಿಂದ ನೋಡಿದಳು.

ಮೂರು ದಿನಗಳ ವರೆಗೆ ನಿರ್ಮಲೆಯ ನೇತ್ರಗಳಲ್ಲಿ ಅಶ್ರುಧಾರೆ ಪ್ರವಹಿಸುತ್ತಲೇ ಇತ್ತು. ಯಾರೊಡನೆಯೂ ಮಾತನಾಡುತ್ತಿರಲಿಲ್ಲ; ಯಾರ ಮಾತನ್ನೂ ಕೇಳುತ್ತಿರಲಿಲ್ಲ. ಸುಮ್ಮನೇ ಅಳುತ್ತಿದ್ದಳು. ಅವಳ ವೇದನೆಯನ್ನು ಬಲ್ಲವರಾರು?

ನಾಲ್ಕನೆಯ ದಿನ ಸಂಧ್ಯಾಸಮಯದಲ್ಲಿ ಅವಳ ವಿಪತ್ಕಥೆ ಸಮಾಪ್ತವಾಯಿತು! ಪಶುಪಕ್ಷಿಗಳು ತಮ್ಮ ವಾಸಸ್ಥಾನಕ್ಕೆ ಹಿಂತಿರುಗುವ ವೇಳೆಗೆ ಸರಿಯಾಗಿ ನಿರ್ಮಲೆಯ ಪ್ರಾಣಪಕ್ಷಿಯೂ ಹಾರಿಹೋಯಿತು!!

ಮೊಹಲ್ಲೆಯ ಜನರೆಲ್ಲ ಸೇರಿದರು. ಶವವನ್ನು ಹೊರಗಿರಿಸಲಾಯಿತು. ದಹನಸಂಸ್ಕಾರ ನಡೆಸುವವರಾರೆಂಬ ಪ್ರಶ್ನೆಯೆದ್ದಿತು. ಎಲ್ಲರೂ ಇದೇ ಯೋಚನೆಯಲ್ಲಿದ್ದಾಗ ಓರ್ವ ವೃದ್ಧ ಪಥಿಕರು ಒಂದು ಗಂಟನ್ನು ಹೆಗಲ ಮೇಲೆ ಹಾಕಿಕೊಂಡು ಅಲ್ಲಿ ಬಂದು ನಿಂತರು. ಅವರೇ ಮುನ್ಷಿಯವರು.